ಕನ್ನಡ ಕಾವ್ಯ ಮಾಲೆ

# ನೌಕಾಘಾತ

ರವೀಂದ್ರನಾಥ ಠಾಕೂರ್



ಎಚ್. ವಿ. ಸಾವಿತ್ರಮ್ಮ

ಅನುವಾದ

ಶಿವರಾಮ ಕಾರಂತರ

ಮುನ್ನುಡಿ



ಮೈಸೂರು

ಕಾವ್ಯಾಲಯ : ಪ್ರಕಾಶಕರು

# ಮುನ್ನುಡಿ

ಈ ಪುಸ್ತಕಕ್ಕೆ ಒಂದು ಮುನ್ನುಡಿಯನ್ನು ಬರೆಯುವ ಕಾರಣ ವಿಶೇಷವಾಗಿ ಇಲ್ಲ. ಒಂದು ರೀತಿಯಲ್ಲಿ ಅದು ಅನುಚಿತ; ಇನ್ನೊಂದು ದೃಷ್ಟಿಯಿಂದ ಉಚಿತ. ಇದು ರವೀಂದ್ರನಾಥ ಠಾಕೂರರ ಮೂಲ ಕೃತಿ The Wreck ಎಂಬುದರ ಅನುವಾದವೆಂದಮೇಲೆ- ನಾನೇನೂ ಬರೆಯುವ ಕಾರಣವಿಲ್ಲ. ವಿಶ್ವಸಾಹಿತ್ಯಕ್ಕೆ ಕಾಣಿಕೆಯನ್ನು ಸಲ್ಲಿಸಿ, ಮನ್ನಣೆಯನ್ನು ಗಳಿಸಿದ ಹಿರಿಯ ಕವಿಗಳು ಅವರು. ಭಾರತದಲ್ಲಿ ಹುಟ್ಟಿದ ಓದುಗನಿಗೆ ಶ್ರೀ ರವೀಂದ್ರರ ಹೆಸರು ತಿಳಿಯದೆಂದು ನಾನು ಮುನ್ನುಡಿ ಬರೆಯಬೇಕೇ? ಆ ಹಿರಿಯರೊಡನೆ ನನ್ನ ತೂಕ ಎಷ್ಟರದು?

ಆದರೆ ಈಗ ಬರೆಯುತ್ತಿರುವ ಕಾರಣ, ಇದರ ಅನುವಾದವನ್ನು ಯಶಸ್ವಿಯಾಗಿ ಕನ್ನಡಿಗರಿಗೆ ಒದಗಿಸಿಕೊಟ್ಟ ಶ್ರೀಮತಿ ಎಚ್.ವಿ. ಸಾವಿತ್ರಮ್ಮನವರ ಸಲುವಾಗಿ. ಅವರು ಅನೇಕ ಸ್ವತಂತ್ರ ಕತೆಗಳನ್ನು ಕೊಟ್ಟವರು. ಈಗಾಗಲೇ "ಮರುಮದುವೆ" ಎಂಬ ಅವರ ಕಥಾಸಂಕಲನ ಕನ್ನಡಿಗರ ಮುಂದಿದೆ. ಸ್ವಂತ ಬರೆಯಬಲ್ಲ ಅವರು ಅನುವಾದ ಮಾಡುವ ಕೆಲಸ ತುಚ್ಛವೆಂದು ತಿಳಿದಿಲ್ಲ; ಅದು ಸಂತೋಷದ ವಿಷಯ. ಶಬ್ದಾಡಂಬರವಿಲ್ಲದೆ, ನೇರಾದ, ಸರಳವಾದ ಕನ್ನಡ ಮಾತುಗಳಿಂದ ಅವರು ನಮಗೆ ಶ್ರೀ ರವೀಂದ್ರರ ಈ ಕೃತಿಯನ್ನು ಕನ್ನಡದಲ್ಲಿ ಒದಗಿಸಿ ಕೊಟ್ಟಿದ್ದಾರೆ.

ಕನ್ನಡಿಗರಾದ ನಮಗೆ—ಆಂಗ್ಲ ಸಾಹಿತ್ಯದ ಪರಿಚಯವಿರುವಷ್ಟು, ಭಾರತದ ಇತರ ಭಾಷಾ ಸಾಹಿತ್ಯಗಳ ಪರಿಚಯವಾಗಿಲ್ಲ. ರವೀಂದ್ರರು ಬಂಗಾಲಿಯಲ್ಲಿಯೇ, ಮೂಲದಲ್ಲಿ ಬರೆದವರು. ಈ ಮೊದಲು ಶ್ರೀ ವೆಂಕಟಾಚಾರ್ಯರಂಥವರು ಬಂಗಾಲಿ ಕಾದಂಬರಿಗಳನ್ನು ಕನ್ನಡಿಸಿ ಕೊಟ್ಟು, ನಮ್ಮ ಅಂತರ್ಭಾರತೀಯ ಪರಿಚಯಕ್ಕೆ ಸಹಾಯ ಮಾಡಿದರು. ಈ ಕೆಲಸ ನಡೆಯುತ್ತಲೇ ಇರಬೇಕು. ಭಾರತದ ಒಂದು ಭಾಷೆಯಲ್ಲಿ ನಡೆಯುತ್ತಿರುವ ಕೆಲಸ ಇನ್ನೊಂದು ಭಾಷೆಯವರಿಗೆ ತಿಳಿದಿಲ್ಲ—ಎನ್ನುತ್ತಾರೆ ಎಲ್ಲರು. ಆ ಸಾಮರ್ಥ್ಯವಿರುವ ಜನ ಈ ಕೆಲಸ ಮಾಡದೆ ಹೋದರೆ ಹೇಗೆ? ಕನ್ನಡ

ಜನಕ್ಕೆ ಹಿಂದಿ, ಬಂಗಾಲಿ, ಮರಾಠಿ, ತಮಿಳು, ತೆಲುಗು ಮೊದಲಾದ ಸೋದರ ಭಾಷೆಗಳ ಸಾಹಿತ್ಯದ ಪರಿಚಯವಾಗಬೇಕು. ಅದು ನಮ್ಮ ಸಂಸ್ಕೃತಿಯ ಬೆಳವಣಿಗೆಗೆ ಅತಿ ಅವಶ್ಯ. ಪಾಶ್ಚಾತ್ಯ ಜೀವನವನ್ನು ನಮಗೆ ತಿಳಿಸುವ ಕೆಲಸಕ್ಕಿಂತ ಅದು ಸುಲಭವಾದರೂ ಆ ಪ್ರಯತ್ನ ಮಾಡುವವರು ಕಡಿಮೆ. ಹಾಗೆಯೇ ಕನ್ನಡ ಸಾಹಿತ್ಯದ ಪರಿಚಯವನ್ನು ನೆರೆಯ ಭಾಷೆಯ ಜನಗಳಿಗೆ ಮಾಡಿಕೊಡುವವರು ಬೇಕು. 'ಭಾರತ ಸಾಂಸ್ಕೃತಿಕವಾಗಿ ಒಂದು' ಎಂದು ಆಡಿದರೆ ಸಾಲದು, ಆ ಐಕ್ಯತೆ ತೋರಿಸಿ, ತಿಳಿದು ನಾವು ಬಾಳುವಂತಾಗಬೇಕು.

ಹೀಗೆ ಒಂದು ಭಾಷೆಯಿಂದ ಇನ್ನೊಂದರ ಅನುವಾದದ ಕೆಲಸ ಸುಲಭವೂ ಅಲ್ಲ. ಒಂದೊಂದು ಭಾಷೆಗಿರುವ ನುಡಿಕಟ್ಟು, ದೇಸಿಗಳು ಇನ್ನೊಂದರಲ್ಲಿ ಅಕ್ಷರಶಃ ಭಾಷಾಂತರಿಸಲು ಬರುವುದಿಲ್ಲ. ಅವುಗಳ ಸೊಗಸನ್ನರಿತು, ತಿರುಗಿ, ಅರ್ಥಕೆಡಿಸದೆ, ತಮ್ಮ ನಾಡನುಡಿಯಲ್ಲಿ ಕೊಡಬಲ್ಲವರೆಷ್ಟು ಜನ ಸಿಗಬಹುದು? ಅಂಥ ಶ್ರಮಸಾಧ್ಯವಾದ ಕೆಲಸವನ್ನು ಶ್ರೀಮತಿ ಸಾವಿತ್ರಮ್ಮನವರು ಮಾಡಿದ್ದಾರೆಂಬುದೂ, ಶ್ರೀ ಕೂಡಲಿ ಚಿದಂಬರಂರವರು ಈ ಬರಹವನ್ನು ಬೆಳಕಿಗೆ ತಂದಿದ್ದಾರೆಂಬುದೂ ನಮಗೆ ಸಂತೋಷವನ್ನು ಕೊಡಬೇಕು, ಕೊಟ್ಟೀತು ಎಂದು ನನ್ನ ನಂಬಿಕೆ.

೨೨–೯–೧೯೫೪
ಪುತ್ತೂರು

ಇತಿ
**ಶಿವರಾಮ ಕಾರಂತ**

# ಅರಿಕೆ

ಈ ಅನುವಾದವನ್ನು ನಾನು ಬರೆದು ೫-೬ ವರ್ಷಗಳಾದುವು. ಕಾರಣಾಂತರದಿಂದ ಇಷ್ಟು ವರ್ಷವೂ ಅದು ಬೆಳಕಿಗೆ ಬರಲಾಗಲಿಲ್ಲ. ಈ ನಡುವೆ ಸೋದರಿಯೊಬ್ಬರು ಒಂದು ಅನುವಾದವನ್ನು ಯಶಸ್ವಿಯಾಗಿ ಮಾಡಿ ಕನ್ನಡಿಗರ ಮುಂದಿಟ್ಟರು. ಇದಾದ ಮೇಲೆ ನನ್ನ ಅನುವಾದವನ್ನೂ ಪ್ರಕಟಿಸಬೇಕೆಂದು ಒತ್ತಾಯ ಪಡಿಸುವುದರಲ್ಲಿ ಅರ್ಥವಿಲ್ಲವೆಂದು ಸುಮ್ಮನಾದೆ.

ಆದರೆ ಶ್ರೀ ಚಿದಂಬರಂರವರು ನನ್ನ ಶ್ರಮ ವ್ಯರ್ಥವಾಗಬಾರದೆಂಬ ಸಹೃದಯತೆಯಿಂದಲೋ, ಅನೇಕರು ಅನುವಾದ ಮಾಡಿದರೂ ಬೆಳಕಿಗೆ ಬರದ ಭಾವನೆಗಳೆಷ್ಟೊ ಮಹಾ ಕವಿಯ ಕೃತಿಗಳಲ್ಲಡಗಿವೆಯೆಂಬ ಧೈರ್ಯದಿಂದಲೋ, ಇದನ್ನೂ ಓದುಗರ ಮುಂದಿಡಲು ಮನಸ್ಸು ಮಾಡಿದ್ದಾರೆ.

ಶ್ರೀ ಕಾರಂತರು ತಮ್ಮ ಅನೇಕ ಕೆಲಸ ಕಾರ್ಯಗಳ ನಡುವೆ ಮುನ್ನುಡಿ ಬರೆದು ಆಶೀರ್ವಾದ ಮಾಡಿದ್ದಾರೆ. ಅವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಸಾಲದಾಗಿದೆ.

ವಿಶ್ವವ್ಯಕ್ತಿ ರವೀಂದ್ರರ ವಾಣಿ, ಶ್ರೀ ಕಾರಂತರ ಮುನ್ನುಡಿ ಇವುಗಳ ಭಾರವನ್ನು ಹೊರುವ ಯೋಗ್ಯತೆ ನನ್ನ ಅನುವಾದಕ್ಕಿದೆಯೆಂದು ಓದುಗರಿಗೆನ್ನಿಸಿದರೆ ನಾನು ಧನ್ಯಳಾದಂತೆ.

**ಎಚ್. ವಿ. ಸಾವಿತ್ರಮ್ಮ**

# ನೌಕಾಘಾತ

## ಅಧ್ಯಾಯ ೧

ರಮೇಶನ ಪರೀಕ್ಷೆಯ ಫಲಿತಾಂಶದ ವಿಚಾರದಲ್ಲಿ ಯಾರಿಗೂ ಅನುಮಾನವೇ ಇರಲಿಲ್ಲ. ವಿದ್ಯಾಧಿದೇವತೆಯಾದ ಸರಸ್ವತಿ ಅವನ ಮೇಲೆ ತನ್ನ ಸಂಪೂರ್ಣ ಕಟಾಕ್ಷವನ್ನು ಬೀರಿದ್ದಳು. ಅವನಿಗೆ ಅನೇಕ ಬಹುಮಾನಗಳೂ ವಿದ್ಯಾವೇತನಗಳೂ ದೊರಕಿದ್ದುವು.

ಪರೀಕ್ಷೆಯಾಗುತ್ತಲೇ ಬರಬೇಕೆಂದು ಅವನ ತಂದೆ ಬರೆದಿದ್ದರೂ ಅವನು ಇನ್ನೂ ಹೊರಡುವ ಆಲೋಚನೆಯಲ್ಲಿರಲಿಲ್ಲ. ಪರೀಕ್ಷೆಯ ಪಲಿತಾಂಶವು ತಿಳಿಯುತ್ತಲೇ ಬರುವುದಾಗಿ ತಂದೆಗೆ ಉತ್ತರ ಬರೆದಿದ್ದನು.

ಆನಂದ ಬಾಬುವಿನ ಮಗ ಯೋಗೇಂದ್ರ ರಮೇಶನ ಸಹಪಾಠಿ; ಪಕ್ಕದ ಮನೆಯಲ್ಲೇ ವಾಸಮಾಡುತ್ತಿದ್ದನು. ಬ್ರಹ್ಮಸಮಾಜಕ್ಕೆ ಸೇರಿದ್ದ ಆನಂದ ಬಾಬುವಿನ ಮಗಳು ಹೇಮನಳಿನಿ ಎಫ್. ಎ. ಪರೀಕ್ಷೆಗೆ ಕುಳಿತಿದ್ದಳು. ರಮೇಶ ತಪ್ಪದೆ, ಮಧ್ಯಾಹ್ನ ಚಹದ ವೇಳೆಗೆ ಅವರ ಮನೆಗೆ ಹೋಗುತ್ತಿದ್ದನು. ಆದರೆ ಅವನನ್ನು ಆಕರ್ಷಿಸುತ್ತಿದ್ದುದು ಚಹಾ ಮಾತ್ರವಲ್ಲ. ಬೇರೆ ಸಮಯಗಳಲ್ಲೂ ಅವನು ಅಲ್ಲಿಗೆ ಹೋಗುತ್ತಿದ್ದನು.

ಹೇಮನಳಿನಿ ಸ್ನಾನವಾದ ಮೇಲೆ ಮಾಳಿಗೆಯಮೇಲೆ ತಲೆಯನ್ನಾರಿಸಿಕೊಳ್ಳುತ್ತಾ, ಓದುತ್ತಾ ಅಲ್ಲಿಂದಿಲ್ಲಿಗೆ ಓಡಾಡುವಳು. ರಮೇಶನೂ ಆ ಸಮಯದಲ್ಲೇ ಪುಸ್ತಕವನ್ನು ಹಿಡಿದುಕೊಂಡು ತನ್ನ ಮನೆಯ ಮಾಳಿಗೆಯ ಮೇಲೆ ಕುಳಿತುಕೊಳ್ಳುವನು. ಆ ಸ್ಥಳ ನಿಶ್ಶಬ್ದವಾಗಿ ವಿದ್ಯಾಭ್ಯಾಸಕ್ಕೆ ಅನುಕೂಲವಾಗಿದ್ದರೂ ಅವನ ಮನಸ್ಸು ಸ್ಥಿರವಾಗಿರುತ್ತಿರಲಿಲ್ಲ.

ಇಬ್ಬರಲ್ಲಿ ಯಾವ ಕಡೆಯೂ ಮದುವೆಯ ಪ್ರಸ್ತಾಪವಾಗಿರಲಿಲ್ಲ. ಇಂಗ್ಲೆಂಡಿನಲ್ಲಿ ನ್ಯಾಯಶಾಸ್ತ್ರವನ್ನೋದಲು ಹೋಗಿದ್ದ ಪರಿಚಿತ ಯುವಕನೊಬ್ಬನನ್ನು ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದು ಆನಂದ ಬಾಬುವಿಗೆ ಮನಸ್ಸಿದ್ದುದರಿಂದ ಆತನು ಈ ಮಾತನ್ನೆತ್ತಿರಲಿಲ್ಲ.

ಒಂದು ಮಧ್ಯಾಹ್ನ ಚಹಾ ಕುಡಿಯುತ್ತಿರುವಾಗ ವಾಗ್ವಾದಕ್ಕೆ ಆರಂಭವಾಗಿತ್ತು. ಅಕ್ಷಯ ಪರೀಕ್ಷೆಗಳಲ್ಲಿ ಹಿಂದೆ ಬಿದ್ದಿದ್ದರೂ ಚಹಾಪಾನ ಮುಂತಾದ ಅಭ್ಯಾಸಗಳಲ್ಲಿ ಮುಂದಾಗಿದ್ದನು. ಆತನು ಫಲಾಹಾರದ ವೇಳೆಗೆ ಹೇಮನಳಿನಿಯ ಮನೆಗೆ ಬರುತ್ತಿದ್ದನು. ಒಂದು ದಿನ, "ಗಂಡಸರ ಬುದ್ಧಿಯು ಕತ್ತಿಯ ಹಾಗೆ, ತನ್ನ ತೀಕ್ಷ್ಣತೆಯಿಂದಲ್ಲದಿದ್ದರೂ ತೂಕದಿಂದ ಭಯಂಕರವಾದ ಆಯುಧವಾಗ ಬಲ್ಲುದೆಂದೂ, ಹೆಂಗಸಿನ ಬುದ್ಧಿ ಚಾಕುವಿನಂತೆ, ಎಷ್ಟು ಮಸೆದರೂ ಗುರುತರವಾದ ಕೆಲಸಕ್ಕೆ ಪ್ರಯೋಜನವಿಲ್ಲ"ವೆಂದೂ ಅಕ್ಷಯ ವಾದಿಸುತ್ತಿದ್ದನು.

ಹೇಮನಳಿನಿ ಮಾರುತ್ತರವಿಲ್ಲದೆ ಸುಮ್ಮನಿದ್ದಳು. ಆದರೆ ಅವಳ ಅಣ್ಣ ಜೋಗೇಂದ್ರನೂ ಅವನ ಕಡೆ ಸೇರಿ ವಾದಿಸಲಾರಂಭಿಸಿದುದನ್ನು ಕೇಳಿ ಸಹಿಸಲಾರದೆ ರಮೇಶ ಹೆಂಗಸರ ಬುದ್ಧಿಶಕ್ತಿಯನ್ನು ಹೊಗಳಲಾರಂಭಿಸಿದನು. ಮಾತಿನಲ್ಲಿ ಮೈಮರೆತ ರಮೇಶ ಎರಡು ಲೋಟ ಚಹಾ ಮುಗಿಸುವ ವೇಳೆಗೆ ಆಳು ಅವನ ತಂದೆಯ ಕಾಗದವನ್ನು ತಂದುಕೊಟ್ಟನು. ಅದನ್ನು ಓದಿ, ವಾಗ್ವಾದವನ್ನು ಮುಂದುವರಿಸಲು ಅವಕಾಶ ನಾಲದೆ ಮೇಲಕ್ಕೆದ್ದು, ತನ್ನ ತಂದೆ ಅಲ್ಲಿಗೆ ಬಂದ ವರ್ತಮಾನವನ್ನು ಎಲ್ಲರಿಗೂ ತಿಳಿಸಿದನು.

ಹೇಮನಳಿನಿ ಜೋಗೇಂದ್ರನೊಡನೆ "ರಮೇಶಬಾಬುವಿನ ತಂದೆಯನ್ನು ಕರೆ. ಒಂದು ಲೋಟ ಟೀ ಕೊಡೋಣ" ಎಂದಳು.

"ತೊಂದರೆ ಪಟ್ಟುಕೊಳ್ಳುವುದು ಬೇಡಿ. ನಾನೇ ಅವರಲ್ಲಿ ಹೋಗುವುದುತ್ತಮ" ಎಂದು ರಮೇಶ ಹೇಳಿದನು.

ಅಕ್ಷಯನಿಗೆ ಒಳಗೇ ಸಂತೋಷವಾಯಿತು: "ನಿಮ್ಮ ಮನೆಯಲ್ಲಿ ಚಹಾ ಕುಡಿಯಲು ಆತನಿಗಿಷ್ಟವಿಲ್ಲದಿರಬಹುದು" ಎಂದನು. ಏಕೆಂದರೆ—

ಆನಂದಬಾಬು ಬ್ರಹ್ಮಸಮಾಜದವನು. ರಮೇಶನ ತಂದೆ ಸಂಪ್ರದಾಯಸ್ಥ.

ರಮೇಶನ ತಂದೆ, ವ್ರಜಮೋಹನಬಾಬು, "ಬೆಳಗ್ಗೆ ನೀನು ನನ್ನೊಡನೆ ಊರಿಗೆ ಬರಬೇಕು" ಎಂದು ಮಗನಿಗೆ ಹೇಳಿದನು. ರಮೇಶ ತಲೆ ಕೆರೆಯುತ್ತಾ, "ಏನಷ್ಟವಸರ?" ಎಂದನು.

"ಏನೂ ಇಲ್ಲ."

ರಮೇಶ ಕುತೂಹಲದಿಂದ ತಂದೆಯ ಮುಖವನ್ನು ನೋಡಿದರೂ ಆತನಿಗೆ ಕಾರಣ ವಿವರಿಸುವ ಆವಶ್ಯಕತೆ ತೋರಲಿಲ್ಲ.

ಸಂಜೆ ತನ್ನ ತಂದೆ ಸ್ನೇಹಿತರನ್ನು ನೋಡಲು ಹೋದಾಗ ರಮೇಶ ಆತನಿಗೊಂದು ಕಾಗದ ಬರೆಯಲು ಕುಳಿತನು. ಆದರೆ, "ತೀ| ತಂದೆಯವರ ಚರಣಸನ್ನಿಧಾನಂಗಳಿಗೆ" ಎಂದು ಬರೆದ ಮೇಲೆ ಅವನ ಲೇಖನಿ ಮುಂದೆ ನಾಗಲೇ ಇಲ್ಲ. ತನಗೆ ಹೇಮನಳಿನಿಯನ್ನು ಮದುವೆಯಾಗುವ ಆಪೇಕ್ಷೆಯಿದೆಯೆಂದು ತಂದೆಗೆ ತಿಳಿಸಬೇಕೆಂದು ಎಷ್ಟು ನಿರ್ಧರಿಸಿಕೊಂಡರೂ ಬರೆಯಲು ಸಾಧ್ಯವಾಗದೆ ಕಾಗದಗಳನ್ನೆಲ್ಲಾ ಹರಿದುಹಾಕಿದನು.

ರಾತ್ರಿ ವ್ರಜಮೋಹನ ಊಟಮಾಡಿ ಮಲಗಿದ ಮೇಲೆ ರಮೇಶ ಮಾಳಿಗೆಯ ಮೇಲೆ ಹತ್ತಿ ಪಕ್ಕದ ಮನೆಯನ್ನು ನೋಡುತ್ತಾ ಅಲೆಯುತ್ತಿದ್ದನು. ಒಂಬತ್ತು ಘಂಟೆಗೆ ಅಕ್ಷಯ ಆ ಮನೆಯನ್ನು ಬಿಟ್ಟನು. ಇನ್ನರ್ಧ ಘಂಟೆಗೆ ಬೀದಿ ಬಾಗಿಲನ್ನು ಹಾಕಿದರು. ಹತ್ತು ಘಂಟೆಗೆ ಆನಂದಬಾಬುವಿನ ಕೋಣೆಯ ದೀಪವಾರಿ ಮನೆ ನಿಶ್ಶಬ್ದವಾಯಿತು.

ರಮೇಶ ಬೆಳಗಾಗುತ್ತಲೇ ಕಲ್ಕತ್ತೆಯನ್ನು ಬಿಡಬೇಕಾಯಿತು. ರೈಲು ತಪ್ಪಲು ಅವನ ತಂದೆ ಅವಕಾಶಕೊಡಲಿಲ್ಲ.

## ಅಧ್ಯಾಯ ೨

ಮನೆ ಸೇರಿದ ಮೇಲೆ ತನಗೊಬ್ಬ ಹೆಂಡತಿಯೂ ಲಗ್ನದ ದಿನವೂ ಗೊತ್ತಾಗಿರುವ ಸುದ್ದಿ ರಮೇಶನಿಗೆ ತಿಳಿಯಿತು. ವ್ರಜಮೋಹನ ಚಿಕ್ಕಂದಿನಲ್ಲಿ ಕಷ್ಟ ದೆಸೆಯಲ್ಲಿದ್ದಾಗ ಸ್ನೇಹಿತ ಈಶಾನನ ಸಹಾಯದಿಂದ ಅಭಿವೃದ್ಧಿಗೆ ಬಂದಿದ್ದನು. ಈಶಾನ ಅಕಾಲದಲ್ಲಿ ಸತ್ತಾಗ, ಸಾಲಗಳನ್ನಲ್ಲದೆ ಮತ್ತೇನನ್ನೂ ಬಿಟ್ಟು ಹೋಗಿರಲಿಲ್ಲ. ಅವನ ಹೆಂಡತಿಯೂ ಮಗಳೂ ಅನಾಥರಾದರು. ಆ ಮಗಳೇ ರಮೇಶನ ಹೆಂಡತಿಯಾಗಬೇಕೆಂದು ವ್ರಜಮೋಹನ ನಿರ್ಧರಿಸಿದ್ದುದು. ಹುಡುಗಿ ಚನ್ನಾಗಿಲ್ಲವೆಂದು ರಮೇಶನ

ಸ್ನೇಹಿತರು ಕೆಲವರು ಆಕ್ಷೇಪಿಸಿದರು. ವ್ರಜಮೋಹನನ ಉತ್ತರ ಒಂದೇ, "ನನಗೆ ಅರ್ಥವಾಗುವುದಿಲ್ಲ. ಸೌಂದರ್ಯವನ್ನು ಪರೀಕ್ಷಿಸುವುದಕ್ಕೆ ಅವ ಳೇನು ಹೂವೆ, ಚಿಟ್ಟೆಯೆ? ಅವಳ ತಾಯಿಯಷ್ಟು ಗುಣಶಾಲಿಯಾದರೆ ರಮೇಶ ಅದೃಷ್ಟಶಾಲಿ."

ಮದುವೆಯ ಪ್ರಸ್ತಾಪವನ್ನು ಕೇಳಿ ರಮೇಶನಿಗೆ ಅಸಮಾಧಾನ ವಾಯಿತು. ತಪ್ಪಿಸಿಕೊಳ್ಳುವ ಉಪಾಯವನ್ನು ಆಲೋಚಿಸುತ್ತ ತಿರು ಗಾಡಲಾರಂಭಿಸಿದನು. ದಿಕ್ಕುತೋರಲಿಲ್ಲ ಧೈರ್ಯಮಾಡಿ ತಂದೆಯನ್ನು ಕುರಿತು "ನಾನಿವಳನ್ನು ಮದುವೆಯಾಗಲಾರೆ. ಬೇರೆ ಕಡೆ ಮಾತು ಕೊಟ್ಟಿದ್ದೇನೆ." ಎಂದನು.

ವ್ರಜಮೋಹನ, "ಏನು, ಮದುವೆ ನಿಷ್ಕರ್ಷೆಯಾಗಿದೆಯೆ?"

ರಮೇಶ, "ನಿಷ್ಕರ್ಷೆಯಲ್ಲ.......ಆದರೆ.... ."

ವ್ರಜ "ಹುಡುಗಿಯ ಮನೆಯವರೊಡನೆ ಮಾತನಾಡಿ ಗೊತ್ತು ಮಾಡಿದ್ದೀಯಾ?"

ರಮೇಶ, "ಮಾತನಾಡಿಲ್ಲ. ಆದರೆ..... .."

ವ್ರಜ, "ಹಾಗಾದರೆ ಸರಿ. ಸುಮ್ಮನಿದ್ದು ಬಿಡು."

ನಿಧಾನವಾಗಿ ರಮೇಶ, "ನಾನು ಬೇರೆ ಹುಡುಗಿಯನ್ನು ಮದುವೆ ಯಾಗುವುದು ಸರಿಯಲ್ಲ."

ವ್ರಜ, "ನಾನು ಗೊತ್ತು ಮಾಡಿರುವ ಹುಡುಗಿಯನ್ನು ನಿರಾಕರಿಸು ವುದು ಮತ್ತೂ ಹೆಚ್ಚಿನ ತಪ್ಪು."

ಮುಂದೇನೂ ಹೇಳಲು ತೋರದೆ ರಮೇಶ, ಅನಿರೀಕ್ಷಿತ ಪ್ರಸಂಗ ವೊಂದು ಒದಗಿ ಬಂದು ಮದುವೆಯನ್ನು ನಿಲ್ಲಿಸಲೆಂದು ಕೋರತೊಡಗಿದನು. ಲಗ್ನದ ದಿನವನ್ನು ಬಿಟ್ಟರೆ ಮುಂದೆ ಒಂದು ವರ್ಷ ಮದುವೆಗೆ ಶುಭದಿನ ವಿಲ್ಲವೆಂದು ಜೋಯಿಸರು ಹೇಳಿದ್ದರು. ಆ ಒಂದು ದಿನ ಹೇಗಾದರೂ ಕಳೆದರೆ ಇನ್ನೊಂದು ವರ್ಷ ನಿಶ್ಚಿಂತೆಯಾಗಿರಬಹುದು.

ಹುಡುಗಿಯ ಊರನ್ನು ಸೇರಲು ನದಿಯನ್ನು ದಾಟಬೇಕಾಗಿತ್ತು. ಹತ್ತಿರದ ದಾರಿಯೆಂದರೆ ಮೂರು ನಾಲ್ಕು ದಿನಗಳ ಪ್ರಯಾಣ. ವ್ರಜ ಮೋಹನ ಇದೆಲ್ಲವನ್ನೂ ಆಲೋಚಿಸಿ ಲಗ್ನಕ್ಕೆ ಒಂದು ವಾರದ ಮೊದಲೇ

ಪ್ರಯಾಣ ಹೊರಟನು. ಗಾಳಿಯೂ ಅನುಕೂಲವಾಗಿದ್ದುದರಿಂದ ನಾಲ್ಕು ದಿನ ಮೊದಲೇ ಎಲ್ಲರೂ ಸಿಮೂಲ ಘಟ್ಟವನ್ನು ಸೇರಿದರು. ಮದುಕನ ಅವಸರಕ್ಕೆ ಬೇರೊಂದು ಕಾರಣವೂ ಇತ್ತು. ಹುಡುಗಿಯ ತಾಯಿ ಅನುಕೂಲಸ್ಥಿತಿಯಲ್ಲಿರಲಿಲ್ಲ. ಆಕೆಯನ್ನು ತನ್ನ ಊರಿಗೆ ಕರೆದೊಯ್ದು ಯೋಗಕ್ಷೇಮ ಭಾರವನ್ನು ವಹಿಸಿ ಸ್ನೇಹಿತನ ಋಣವನ್ನು ಸ್ವಲ್ಪ ಮಟ್ಟಿಗೆ ತೀರಿಸಲು ಆತನು ಆಶಿಸಿದನು. ಸಂಬಂಧವನ್ನು ಬೆಳೆಸುವವರೆಗೆ ಆ ಮಾತನ್ನೆತ್ತಲಾಗಲಿಲ್ಲ. ಈಗ ಆಕೆಯು ಒಪ್ಪಿಗೆ ಸಿಕ್ಕಿತ್ತು. ಅವಳ ಸಂಸಾರವೆಲ್ಲಾ ಆ ಒಬ್ಬ ಮಗಳು ಮಾತ್ರ. ತಾಯಿಯಿಲ್ಲದ ರಮೇಶನಿಗೂ ತಾನೇ ತಾಯಿಯಾಗ ಬಹುದೆಂದು ಆಕೆ ಆಲೋಚಿಸಿ, "ಯಾರೇನೆಂದರೂ ಚಿಂತೆಯಿಲ್ಲ. ನನ್ನ ಮಗಳು ಅವಳ ಗಂಡನೊಡನೆ ನಾನಿರುತ್ತೇನೆ" ಎಂದು ಹೇಳಿದಳು.

ವ್ರಜಮೋಹನ ಸಾಮಾನುಗಳನ್ನು ಕಟ್ಟಿ ಆಕೆಯ ಪ್ರಯಾಣಕ್ಕೆ ಅಣಿಮಾಡಿದನು. ಜತೆಯಲ್ಲೇ ಆಕೆಯನ್ನೂ ಕರೆದು ಕೊಂಡು ಹೋಗಬೇಕೆಂಬ ಇಚ್ಛೆಯಿಂದ ಕೆಲವು ಹೆಂಗಸರನ್ನೂ ಸಹಾಯಕ್ಕೆ ಕರೆ ತಂದಿದ್ದನು.

ಲಗ್ನದ ಸಮಯದಲ್ಲಿ ರಮೇಶನು ಶುಭ ಮಂತ್ರಗಳನ್ನು ಸರಿಯಾಗಿ ಉಚ್ಚರಿಸದೆ, ಶುಭದೃಷ್ಟಿಯ ವೇಳೆಯಲ್ಲಿ ಕಣ್ಣುಮುಚ್ಚಿಕೊಂಡನು; ಹಾಸ್ಯದ ವೇಳೆಗಳಲ್ಲಿ ನಗದೆ ಇದ್ದರೂ ಮದುವೆಯ ಶಾಸ್ತ್ರ ನೆರವೇರಿತು. ರಾತ್ರಿಯೆಲ್ಲಾ ಅವನು ಹೆಂಡತಿಯ ಕಡೆ ತಿರುಗದೆ ಮಲಗಿದ್ದು ಬೆಳಗಾಗುತ್ತಲೇ ಕೊಠಡಿಯಿಂದ ಹೊರಗೆ ಬಂದನು.

ಮೂರು ದೋಣಿಗಳಲ್ಲಿ ಎಲ್ಲರೂ ಊರಿಗೆ ಹೊರಟರು ನಾಲ್ಕನೆಯ ದೋಣಿಯಲ್ಲಿ ವಾದ್ಯಗಾರರು ಸಂಗೀತವನ್ನು ನುಡಿಸುತ್ತಾ ಬರುತ್ತಿದ್ದರು.

ಬಹಳ ಸೆಕೆಯಾಗಿತ್ತು. ಆಕಾಶ ಮೋಡಗಳಿಲ್ಲದಿದ್ದರೂ ಮಂಕಾಗಿತ್ತು. ಗಿಡಗಳ ಒಂದು ಎಲೆಯಾದರೂ ಅಲುಗುತ್ತಿರಲಿಲ್ಲ. ಅಂಬಿಗರು ಬೆವರಿನಿಂದ ಒದ್ದೆಯಾಗಿದ್ದರು. ಸೂರ್ಯ ಮುಳುಗುವ ಮೊದಲೇ ಅಂಬಿಗರು, "ದೋಣಿಗಳನ್ನು ಇಲ್ಲೇ ನಿಲ್ಲಿಸಬೇಕು. ಇಲ್ಲದಿದ್ದರೆ ಇನ್ನು ಅನೇಕ

ಪೈಲಿಗಳ ದೂರ ನಿಲ್ಲಿಸಲು ಸ್ಥಳವಿಲ್ಲ" ಎಂದರು. ವ್ರಜಮೋಹನನಿಗೆ ನಿಲ್ಲಲು ಇಷ್ಟವಿರಲಿಲ್ಲ. "ಬೆಳದಿಂಗಳಿದೆ ಬಾಲು ಘಟ್ಟದವರೆಗೆ ಹೋಗೋಣ. ನಿಮಗೆ ಹಣಕ್ಕೇನೂ ಕಡಮೆ ಮಾಡುವುದಿಲ್ಲ" ಎಂದನು.

ಅಂಬಿಗರು ಹೊರಟರು. ಒಂದು ಕಡೆ ಝುಳಗುಟ್ಟುತ್ತಿರುವ ಮರಳಿನ ರಾಶಿ. ಇನ್ನೊಂದು ಕಡೆ ಮುರಿದು ಬೀಳುತ್ತಿರುವ ದಡ. ಚಂದ್ರೋದಯವಾಯಿತು. ಆದರೆ ಚಂದ್ರ ಕುಡುಕನ ಕಣ್ಣಿನಂತೆ ಕೆಂಪಾಗಿದ್ದನು. ಆಕಾಶದಲ್ಲಿನ್ನೂ ಮೋಡಗಳಿರಲಿಲ್ಲ. ಥಟ್ಟನೆ ಗುಡುಗಿನ ಸದ್ದಾಯಿತು. ಹಿಂದಿನಿಂದ ಕೊಂಬೆಗಳು, ಹುಲ್ಲು, ಮರಳು, ಧೂಳು ಕೊಚ್ಚಿ ಬರುತ್ತಿರುವುದು ಕಾಣಿಸಿತು.

ಎಲ್ಲರೂ ಕೂಗಲಾರಂಭಿಸಿದರು. ಏನಾಯಿತೆಂಬುದು ಯಾರಿಗೂ ತಿಳಿಯಲಿಲ್ಲ. ಬಿರುಗಾಳಿ ಸಿಕ್ಕಿದ್ದನ್ನೆಲ್ಲಾ ನಾಶಮಾಡುತ್ತಾ, ನಿಮಿಷಾರ್ಧದಲ್ಲಿ ದೋಣಿಗಳನ್ನು ಕಣ್ಮರೆ ಮಾಡಿತು.

## ಅಧ್ಯಾಯ ೩

ಮಬ್ಬು ಹರಿದು ಬೆಳುದಿಂಗಳು ಮರಳನ್ನು ಆವರಿಸಿತು. ನದಿಯ ಮೇಲೆ ದೋಣಿಯಾಗಲಿ ಅಲೆಯಾಗಲಿ ಇರಲಿಲ್ಲ. ನರಳುವವನಿಗೆ ಸಾವು ಕೊಡುವಂತಹ ಅಗಾಧ ಶಾಂತಿ ನದಿಯನ್ನೂ ದಡವನ್ನೂ ತುಂಬಿತ್ತು.

ರಮೇಶನಿಗೆ ಜ್ಞಾನ ಬಂದಾಗ ಒಂದು ಮರಳು ದಿಣ್ಣೆಯ ಮೇಲೆ ಬಿದ್ದಿದ್ದನು. ನಡೆದುದೆಲ್ಲಾ ನೆನಪಿಗೆ ಬರಲು ಕೆಲಕಾಲ ಹಿಡಿಯಿತು. ಥಟ್ಟನೆ ನೆನಪುಂಟಾಗಿ ಎದ್ದನು. ಅಲ್ಲಿ ಮನುಷ್ಯರ ಚಿಹ್ನೆಯೇ ಇರಲಿಲ್ಲ. ಹುಡುಕುತ್ತಾ ನದಿಯ ದಡದ ಮೇಲೆ ಹೊರಟನು. ಗಂಗೆಯ ಉಪನದಿ ಪದ್ಮಾನದಿಯ ಎರಡು ಕಾಲುವೆಗಳ ನಡುವೆ ಆ ದ್ವೀಪ ತಾಯ ತೋಳ ಸೆರೆಯಲ್ಲಿ ಮಲಗಿದ್ದ ಕೂಸಿನಂತಿತ್ತು. ದ್ವೀಪದ ಒಂದು ಭಾಗವನ್ನು ಹುಡುಕಿ ರಮೇಶ ಇನ್ನೊಂದುಕಡೆ ತಿರುಗಲು ಒಂದು ಕೆಂಪು ಬಟ್ಟೆ ಕಾಣಿಸಿತು. ಬೇಗ ಹೋಗಿ ನೋಡಲು ವಧುವಿನ ಕೆಂಪು ವಸ್ತ್ರಗಳನ್ನು ಧರಿಸಿದ್ದ ಒಬ್ಬ ಚಿಕ್ಕ ಹುಡುಗಿ ಸತ್ತಹಾಗೆ ಬಿದ್ದಿದ್ದಳು.

ನೀರಲ್ಲಿ ಮುಳುಗಿದವರಿಗೆ ಮಾಡಬೇಕಾದ ಉಪಚಾರವನ್ನು ಅರಿತಿದ್ದ ರಮೇಶನು ಆ ಹುಡುಗಿಯ ಕೈಗಳನ್ನು ಎತ್ತಿ, ಇಳಿಸಿ ನಿಶ್ವಾಸೋಚ್ಛ್ವಾಸಗಳನ್ನು ಸರಿಪಡಿಸಲು ಪ್ರಯತ್ನಿಸಿದನು. ನಿಟ್ಟುಸಿರು ಬಿಟ್ಟು ಹುಡುಗಿ ಕಣ್ಣು ತೆರೆದಳು.

ರಮೇಶನಿಗೂ ಆಯಾಸವಾಗಿ ಮಾತನಾಡುವ ಶಕ್ತಿ ಕೂಡ ಇರಲಿಲ್ಲ ಅವಳಿಗೂ ಸರಿಯಾಗಿ ಜ್ಞಾನ ಬರಲಿಲ್ಲ. ಆಯಾಸದಿಂದ ಪುನಃ ಕಣ್ಣು ಮುಚ್ಚಿದಳು. ಮಸಕು ಬೆಳುದಿಂಗಳಿನಲ್ಲಿ ಅವಳನ್ನು ನೋಡುತ್ತಾ ರಮೇಶ ಕುಳಿತಿದ್ದನು. ಹೀಗೆ ಅವರ ಮೊದಲ ನೈಜ ಸಮಾಗಮ ನೀರು ನೆಲಗಳ ನಡುವೆ, ನಿರ್ಜನ ಪ್ರದೇಶದಲ್ಲಿ, ಬದುಕು ಸಾವುಗಳ ಅಂಚಿನಲ್ಲಿ ವಿಚಿತ್ರ ಸನ್ನಿವೇಶದಲ್ಲಿ ನಡೆಯಿತು.

ನಿಶೀಥೆ ಸುಂದರಿಯಲ್ಲವೆಂದವರಾರು? ಬೆಳುದಿಂಗಳ ಸುವರ್ಣ ಛಾಯೆ ಭೂಮಿಯ ಮೇಲೆ ಹರಡಿತ್ತು. ಅನಂತ ಆಕಾಶ ಭೂಮಿಯನ್ನೆಲ್ಲಾ ಮುಚ್ಚಿತ್ತು. ಆದರೆ ರಮೇಶನಿಗೆ ಪ್ರಕೃತಿ ಸೌಂದರ್ಯವೆಲ್ಲಾ ಮಲಗಿದ್ದ ಆ ಹುಡುಗಿಯ ಸೌಂದರ್ಯವನ್ನು ಹೆಚ್ಚಿಸಲು ಏರ್ಪಟ್ಟ ಹಿನ್ನೆಲೆಯಂತೆ ತೋರಿತು.

ರಮೇಶ ತನ್ನನ್ನೇ ಮರೆತು ಆಲೋಚಿಸಿದನು, "ಆ ದಿನ, ಮದುವೆಯ ಗಲಭೆಯಲ್ಲಿ ನಾನು ಹುಡುಗಿಯನ್ನು ನೋಡದಿದ್ದುದೇ ಒಳ್ಳೆಯದಾಯಿತು. ಅವಳನ್ನು ಇಂತಹ ಸನ್ನಿವೇಶದಲ್ಲಿ ಮೊದಲು ನೋಡುವ ಅವಕಾಶ ಸಿಕ್ಕುತ್ತಿರಲಿಲ್ಲ ಅವಳ ಜೀವವನ್ನುಳಿಸಿದುದರಿಂದ ಮಂತ್ರಗಳಿಂದಾಗುವುದಕ್ಕಿಂತ ಹೆಚ್ಚಾಗಿ ನನ್ನವಳಾದಳು. ಆ ದಿನ ಮಾನವ ದೃಷ್ಟಿಯಿಂದ ಮಾತ್ರ ನನ್ನ ಪತ್ನಿಯಾದಳು. ಇಂದು ದೇವರ ಪ್ರಸಾದದಿಂದ ಅವಳು ನನಗೆ ಸಿಕ್ಕಿದಂತಾಯಿತು "

ಹುಡುಗಿಗೆ ಜ್ಞಾನ ಬರಲು, ಅಸ್ತವ್ಯಸ್ತವಾಗಿದ್ದ ಬಟ್ಟೆಗಳನ್ನು ಸರಿಪಡಿಸಿಕೊಂಡು ಮುಖಪರದೆಯನ್ನು ಎಳೆದುಕೊಂಡಳು.

"ದೋಣಿಯಲ್ಲಿದ್ದ ಇತರರ ವಿಚಾರ ನಿನಗೇನಾದರೂ ಗೊತ್ತೆ?" ರಮೇಶ ಪ್ರಶ್ನಿಸಿದನು.

ಅವಳು ತಲೆಯಾಡಿಸಿದಳು.

"ನಾನು ಹುಡುಕುತ್ತೇನೆ. ಒಬ್ಬಳೇ ಇರಲು ಹೆದರಿಕೆ ಇಲ್ಲವಷ್ಟೆ?' ಹುಡುಗಿ ಮಾತನಾಡದಿದ್ದರೂ ಅವಳು ಹುದುಗಿಕೊಂಡ ರೀತಿ "ನನ್ನೊಬ್ಬಳನ್ನೇ ಬಿಟ್ಟು ಹೋಗಬೇಡ," ಎಂದಂತಿದ್ದಿತು.

ರಮೇಶನಿಗೆ ಅವಳ ಮನೋಗತ ತಿಳಿಯಿತು. ಎದ್ದು ನೋಡಲು ಅಲ್ಲೆಲ್ಲೂ ಪ್ರಾಣಿಸಂಚಾರ ಕಾಣಿಸಲಿಲ್ಲ. ಸ್ನೇಹಿತರನ್ನೆಲ್ಲಾ ಹೆಸರು ಹಿಡಿದು ಗಟ್ಟಿಯಾಗಿ ಕೂಗಿದನು. ಉತ್ತರವಿಲ್ಲ. ಪ್ರಯೋಜನವಿಲ್ಲವೆಂದರಿತು ರಮೇಶ ಪುನಃ ಕುಳಿತನು. ಹುಡುಗಿ ಕೈಗಳಲ್ಲಿ ಮುಖವನ್ನು ಮರೆಸಿಕೊಂಡಿದ್ದಳು. ಕಣ್ಣೀರನ್ನು ತಡೆಯಲು ಪ್ರಯತ್ನಿಸುತ್ತಿದ್ದರೂ ಅವಳಿಗೆ ಸಾಧ್ಯವಾಗಲಿಲ್ಲ. ಮಾತುಗಳಿಂದ ಪ್ರಯೋಜನವಿಲ್ಲವೆಂದರಿತು, ಅವಳ ಹತ್ತಿರ ಕುಳಿತು ತಲೆಯನ್ನೂ ಕತ್ತನ್ನೂ ನಿಧಾನವಾಗಿ ಸವರಿದನು. ಅವಳು ಬಿಕ್ಕಿ ಬಿಕ್ಕಿ ಅಳಲಾರಂಭಿಸಲು ರಮೇಶನ ಕಣ್ಣುಗಳಿಂದಲೂ ನೀರು ಹರಿಯತೊಡಗಿತು.

ಇಬ್ಬರೂ ಅತ್ತು ಮುಗಿಸುವ ವೇಳೆಗೆ ಚಂದ್ರ ಅಸ್ತಮಿಸಿದನು. ಕತ್ತಲಲ್ಲಿ ಆ ಮರುಭೂಮಿ ಕೆಟ್ಟ ಕನಸಿನಂತೆ ಕಾಣುತ್ತಿತ್ತು. ದೊಡ್ಡ ಸರ್ಪದ ಪೊರೆಯಂತೆ ಅಲ್ಲಲ್ಲಿ ನದಿಯು ನಕ್ಷತ್ರಗಳ ಬೆಳಕಿನಲ್ಲಿ ಮಿನುಗುತ್ತಿತ್ತು.

ರಮೇಶ ಭಯದಿಂದ ತಣ್ಣಗಾಗಿದ್ದ ಅವಳ ಕೋಮಲವಾದ ಕೈಗಳನ್ನು ಹಿಡಿದುಕೊಂಡು ಹತ್ತಿರಕ್ಕೆಳೆದು ಕೊಂಡನು. ಆಗ ಅವಳಿಗೆ ಬೇಕಾಗಿದ್ದುದೂ ಮನುಷ್ಯರ ಸಹವಾಸವೊಂದೇ. ಕಗ್ಗತ್ತಲೆಯಲ್ಲಿ ರಮೇಶನ ಸ್ನೇಹಪೂರಿತವಾದ ಎದೆ ಅವಳಿಗೆ ಆಸರೆಯಾಯಿತು. ನಾಚಿಕೆಯ ಸಮಯವಲ್ಲವಾದುದರಿಂದ ಅವನನ್ನು ಒರಗಿ ಮಲಗಿದಳು.

ಶುಕ್ರ ಮುಳುಗಿದನು. ನದಿಯಂಚಿನಲ್ಲಿ ಪೂರ್ವದಿಕ್ಕಿನಲ್ಲಿ ಕೆಂಬಣ್ಣ ಪ್ರಸರಿಸಿತು. ಮರಳಿನ ಮೇಲೆ ಗಾಢನಿದ್ರೆಯಲ್ಲಿದ್ದ ರಮೇಶನ ತೋಳ ತೆಕ್ಕೆಯಲ್ಲಿ ಆ ವಧು ನಿದ್ರಿಸುತ್ತಿದ್ದಳು. ಸೂರ್ಯನ ಶಾಖ ಮುಖಕ್ಕೆ ತಟ್ಟಿದಾಗ ಇಬ್ಬರಿಗೂ ತಟ್ಟನೆ ಎಚ್ಚರವಾಯಿತು. ಅರೆಗಳಿಗೆ ಆಶ್ಚರ್ಯದಿಂದ ಸುತ್ತಲೂ ನೋಡಿದರು. ಮರುಕ್ಷಣದಲ್ಲಿ ತಾವು ಮನೆಯಿಲ್ಲದ ಅನಾಥರೆಂಬ ಅರಿವು ಅವರಿಗುಂಟಾಯಿತು.

## ಅಧ್ಯಾಯ ೪

ಸ್ವಲ್ಪ ಹೊತ್ತಿಗೆ ನದಿಯಲ್ಲಿ ಮೀನು ಹಿಡಿಯಲು ಅನೇಕ ದೋಣಿಗಳು ಬಂದುವು. ರಮೇಶ ಮುಳುಗಿದವರ ಪತ್ತೆಹಚ್ಚಲು ಪೊಲೀಸರ ಸಹಾಯವನ್ನು ಕೇಳಿ ಮನೆಯನ್ನು ಸೇರಲು ಒಂದು ದೋಣಿಯನ್ನು ಗೊತ್ತು ಮಾಡಿದನು. ಹಳ್ಳಿಯನ್ನು ಸೇರುವ ವೇಳೆಗೆ ಅವನ ತಂದೆ, ಅತ್ತೆ, ಮತ್ತೆ ಕೆಲವರ ದೇಹಗಳು ನದಿಯಲ್ಲಿ ಸಿಕ್ಕಿದುವು. ಮಿಕ್ಕವರ ವಿಚಾರವಾಗಿ ಏನೂ ತಿಳಿಯಲಿಲ್ಲ.

ಮನೆಯಲ್ಲಿದ್ದ ರಮೇಶನ ಮುದಿ ಅಜ್ಜಿ ಗಟ್ಟಿಯಾಗಿ ಅತ್ತಳು. ಮದುವೆಗಾಗಿ ಹೋಗಿದ್ದ ಎಲ್ಲರ ಮನೆಗಳಲ್ಲೂ ಆ ದಿನ ಗೋಳು ತುಂಬಿತ್ತು. ವಧುವನ್ನೆದುರುಗೊಳ್ಳಲು ಮಂಗಳ ವಾದ್ಯಗಳಾಗಲಿ, ಸಂಭ್ರಮದ ಆಹ್ವಾನಗಳಾಗಲಿ ಒಂದೂ ಇರಲಿಲ್ಲ. ದುರದೃಷ್ಟಶಾಲಿನಿಯೆಂದು ಅವಳನ್ನು ನೋಡಲು ಕೂಡ ಯಾರೂ ಬರಲಿಲ್ಲ.

ರಮೇಶ ತಂದೆಯ ವ್ಯವಹಾರಗಳನ್ನೆಲ್ಲಾ ಸರಿಪಡಿಸುವುದಕ್ಕೆ ಮುಂಚೆ ಹಳ್ಳಿಯನ್ನು ಬಿಟ್ಟು ಹೊರಡುವ ಹಾಗಿರಲಿಲ್ಲ. ಅನಾಥರಾದ ಕೆಲವು ಹೆಂಗಸರ ತೀರ್ಥಯಾತ್ರೆಗಳಿಗಾಗಿಯೂ ಏರ್ಪಾಟು ಮಾಡಬೇಕಾಗಿತ್ತು.

ಆದರೆ ಕೆಲಸದ ಗಲಾಟೆಯಲ್ಲಿ ರಮೇಶ ಹೆಂಡತಿಯನ್ನು ಮರೆಯಲಿಲ್ಲ. ಅವಳೇನೂ ಅರಿಯದ ಹುಡುಗಿಯಾಗಿರಲಿಲ್ಲ. ಅವನ ಮನಸ್ಸು ಅವಳ ಮೋಹದಲ್ಲಿ ಸಿಕ್ಕಿ ಭ್ರಮೆಗೊಂಡಿತ್ತು. ತನ್ನ ಸಹಚಾರಿಣಿಯಾಗಿ ಬಾಳುವ ಅವಳ ಮುಂದಿನ ಬದುಕನ್ನು ಕುರಿತು ಚಿಂತಿಸುವನು. ವಧುವಾಗಿ, ಪತ್ನಿಯಾಗಿ, ತಾಯಿಯಾಗಿ ಅವನ ಕಲ್ಪನೆಯಲ್ಲಿ ಅವಳು ಅನೇಕ ಬಗೆಯಾಗಿ ನಲಿಯುವಳು. ಚಿತ್ರಕಾರನು ಆದರ್ಶ ಚಿತ್ರವೊಂದನ್ನು ಹೃದಯ ಮಂದಿರದಲ್ಲಿಟ್ಟುಕೊಂಡು ಪೂಜಿಸುವಂತೆ, ಕವಿ ಅತ್ಯುತ್ತಮ ಕವಿತೆಯೊಂದನ್ನು ಕಲ್ಪನೆಯಲ್ಲಿ ಕಂಡು ಆರಾಧಿಸುವಂತೆ ರಮೇಶ ಆ ಚಿಕ್ಕ ಹುಡುಗಿಯನ್ನು ತನ್ನ ಹೃದಯೇಶ್ವರಿಯಾಗಿ ಕಲ್ಪಿಸಿಕೊಂಡು ಆನಂದಿಸುತ್ತಿದ್ದನು.

## ಅಧ್ಯಾಯ ೫

ಎಲ್ಲಾ ಏರ್ಪಾಡುಗಳೂ ಮುಗಿಯಲು ಮೂರು ತಿಂಗಳ ಕಾಲ ಹಿಡಿಯಿತು. ಹೊಸವಧುವನ್ನು ಗುರುತುಮಾಡಿಕೊಳ್ಳಲು ಕೆಲವರು ಮುಂದೆ ಬಂದಿದ್ದರು. ರಮೇಶನೊಡನೆ ಅವಳನ್ನು ಬಂಧಿಸಿದ್ದ ಸ್ನೇಹ ಬಿಗಿಯಾಗುತ್ತಾ ಬಂದಿತ್ತು.

ಸಂಜೆ ಇಬ್ಬರೂ ಮಾಳಿಗೆಯ ಮೇಲೆ ಚಾಪೆಯನ್ನು ಹರಡಿ ಕುಳಿತು ಕೊಳ್ಳುತ್ತಿದ್ದರು ರಮೇಶ ಸಲಿಗೆಯಿಂದ, ಹಿಂದಿನಿಂದ ಬಂದು ಅವಳ ಕಣ್ಣು ಮುಚ್ಚಿ ತಲೆಯನ್ನು ಎದೆಗೆ ಒತ್ತಿಕೊಳ್ಳುವನು. ಊಟಕ್ಕೆ ಮೊದಲು ನಿದ್ರೆ ಮಾಡುತ್ತಿದ್ದರೆ ಗಾಬರಿಪಡಿಸಿ ಎಬ್ಬಿಸುವನು.

ಒಂದು ಸಂಜೆ ಹುಡುಗಾಟಕ್ಕಾಗಿ ಅವಳ ಕೂದಲನ್ನು ಹಿಡಿದು ಕೊಂಡು "ಸುಶೀಲಾ, ಈ ದಿನ ನೀನು ಕೂದಲನ್ನು ಚೆನ್ನಾಗಿ ಬಾಚಿಕೊಳ್ಳ ಲಿಲ್ಲ" ಎಂದನು.

ಹುಡುಗಿ ಎದ್ದು ಕುಳಿತು, "ನೀವು ನನ್ನನ್ನು ಸುಶೀಲಾ ಎಂದೇತಕ್ಕೆ ಕರೆಯುವಿರಿ?" ಎಂದು ಕೇಳಿದಳು.

ರಮೇಶನಿಗೆ ಅರ್ಥವಾಗಲಿಲ್ಲ.

"ಹೆಸರನ್ನು ಬದಲಾಯಿಸಿದರೆ ಅದೃಷ್ಟ ಬದಲಾಗುವುದೇ? ನಾನು ಹುಟ್ಟಿದಂದಿನಿಂದ ದುರದೃಷ್ಟಶಾಲಿನಿ. ಮುಂದೆಯೂ ಹಾಗೆಯೇ."

ಎಲ್ಲಿಯೋ ಏನೋ ಅನರ್ಥವಾಗಿದೆಯೆಂದು ರಮೇಶನಿಗೆ ತಿಳಿ ಯಿತು. ಹೃದಯ ಬಡಿದುಕೊಳ್ಳಲಾರಂಭಿಸಿತು. "ನೀನು ಸದಾ ದುರ ದೃಷ್ಟಶಾಲಿನಿಯೆಂದೇಕೆ ಹೇಳುವೆ?"

"ಹುಟ್ಟುವ ಮೊದಲೇ ತಂದೆ ಸತ್ತನು ಆರು ತಿಂಗಳಾಗುವ ವೇಳೆಗೆ ತಾಯಿ ಸತ್ತಳು ಚಿಕ್ಕಪ್ಪನ ಮನೆಯಲ್ಲಿ ಕಷ್ಟಪಡುತ್ತಿರುವಾಗ ನೀವು ನನ್ನನ್ನು ಮದುವೆಯಾಗಲಿಚ್ಛಿಸಿದಿರೆಂದು ಕೇಳಿದೆನು. ಮದುವೆ ಯಾದ ಮೇಲೆ ಆದ ಅನಾಹುತಗಳನ್ನು ನೀವೇ ಬಲ್ಲಿರಿ."

ರಮೇಶ ಸುಮ್ಮನೆ ಕುಳಿತನು ಚಂದ್ರೋದಯವಾಗಿದ್ದರೂ ಬೆಳ

ದಿಂಗಳಿನಲ್ಲಿ ಆಹ್ಲಾದವಿರಲಿಲ್ಲ. ಮುಂದೆ ಪ್ರಶ್ನಿಸಲು ಧೈರ್ಯವಾಗಲಿಲ್ಲ. ಕೇಳಿದ್ದನ್ನೂ ಕೆಟ್ಟ ಕನಸೆಂದು ಮರೆಯಲು ಪ್ರಯತ್ನಮಾಡಿದನು. ಗಾಳಿ ಮೆಲ್ಲಗೆ ಬೀಸುತ್ತಿತ್ತು. ಕೋಗಿಲೆ ಒಂದೇ ಸಮ ಹಾಡುತ್ತಿತ್ತು. ಹತ್ತಿರ ಕಟ್ಟಿದ್ದ ದೋಣಿಗಳಿಂದ ಅಂಬಿಗರ ಹಾಡು ಕೇಳಿಸುತ್ತಿತ್ತು. ರಮೇಶ ಅನ್ಯಮನಸ್ಕನಾಗಿರುವುದನ್ನು ನೋಡಿ ಹುಡುಗಿ, "ನಿದ್ರೆಯೇ?" ಎಂದು ಕೇಳಿದಳು.

"ಇಲ್ಲ" ಎಂದು ರಮೇಶ ಸುಮ್ಮನಾದನು. ಹುಡುಗಿ ನಿದ್ರೆ ಹೋಗಲು ರಮೇಶ ಅವಳನ್ನೇ ದೃಷ್ಟಿಸಿ ನೋಡಿದನು. ವಿಧಿ ಆ ಹಣೆಯ ಮೇಲೆ ಬರೆದ ಬರೆಹದ ಸೂಚನೆ ರಮೇಶನಿಗೆ ತಿಳಿಯಲಿಲ್ಲ. ಅಂತಹ ಸೌಂದರ್ಯಕ್ಕೆ ಇಂತಹ ದುರದೃಷ್ಟವೇ ?

## ಅಧ್ಯಾಯ ೬

ತಾನು ಮದುವೆಯಾದುದು ಆ ಹುಡುಗಿಯನ್ನಲ್ಲವೆಂದು ರಮೇಶ ತಿಳಿದನು. ಅವಳು ಯಾರ ಹೆಂಡತಿಯೋ ತಿಳಿಯಲಿಲ್ಲ.

"ಮದುವೆಯಲ್ಲಿ ನನ್ನನ್ನು ನೋಡಿ ಏನೆಂದುಕೊಂಡೆ?" ಎಂದು ಒಂದು ದಿನ ಕೇಳಿದನು.

"ನಾನು ತಲೆಯೆತ್ತಿ ನೋಡಲೇ ಇಲ್ಲ."

"ನನ್ನ ಹೆಸರನ್ನೂ ಯಾವಾಗಲೂ ಕೇಳಲಿಲ್ಲವೆ?"

"ಮದುವೆಗೆ ಮೊದಲದಿನ ನಿಮ್ಮ ವಿಚಾರ ತಿಳಿಯಿತು. ನಮ್ಮ ಚಿಕ್ಕಮ್ಮನಿಗೆ—ಸಧ್ಯ ಇವಳ ಮದುವೆಯಾದರೆ ಸಾಕು—ಎಂಬ ಅಭಿಪ್ರಾಯವಿದ್ದುದರಿಂದ ಅವಳು ನಿಮ್ಮ ಹೆಸರನ್ನೂ ಹೇಳಲಿಲ್ಲ."

"ನಿನ್ನ ಹೆಸರನ್ನು ಬರೆಯುವುದಕ್ಕೆ ಬರುವುದೇನೋ ನೋಡೋಣ" ಎಂದು ಒಂದು ಕಾಗದವನ್ನೂ ಸೀಸದ ಕಡ್ಡಿಯನ್ನೂ ಕೊಟ್ಟನು.

"ಅದೇನು ಮಹಾಕಷ್ಟ! ಅಷ್ಟು ತೊಡಕಾದ ಹೆಸರೇನೂ ಅಲ್ಲ" ಎಂದು "ಶ್ರೀಮತಿ ಕಮಲಾದೇವಿ" ಎಂದು ದೊಡ್ಡ ಅಕ್ಷರಗಳಲ್ಲಿ ಬರೆದಳು.

"ನಿಮ್ಮ ಚಿಕ್ಕಪ್ಪನ ಹೆಸರನ್ನು ಬರಿ," ರಮೇಶನೆಂದನು.

ಕಮಲೆ, "ಶ್ರೀಯುತ ತಾರಿಣೀ ಚರಣ ಚಟ್ಟೋಪಾಧ್ಯಾಯ," ಎಂದು ಬರೆದು, "ತಪ್ಪಿದೆಯೆ?" ಎಂದು ಕೇಳಿದಳು.

"ಇಲ್ಲ. ನಿಮ್ಮ ಹಳ್ಳಿಯ ಹೆಸರನ್ನು ಬರೆ."

ಅವಳು "ಧೋಬಪುಕೂರು," ಎಂದು ಬರೆದಳು.

ಹೀಗೆ ರಮೇಶ ಅವಳ ಪೂರ್ವ ಚರಿತ್ರೆಯನ್ನು ಸ್ವಲ್ಪಸ್ವಲ್ಪವಾಗಿ ಸಂಗ್ರಹಿಸಿದನು. ಆದರೆ ಅವಳ ಪತಿ ಯಾರೆಂಬುದು ಅವನಿಗೆ ತಿಳಿಯಲೇ ಇಲ್ಲ.

ರಮೇಶ ಮುಂದೇನು ಮಾಡಬೇಕೆಂದು ಚಿಂತಿಸತೊಡಗಿದನು. ಅವಳ ಗಂಡ ನೀರಲ್ಲಿ ಮುಳುಗಿ ಹೋಗಿರಬಹುದು. ಗಂಡನ ಮನೆಯವರನ್ನು ಹುಡುಕಿ ಅಲ್ಲಿಗೆ ಕಳುಹಿಸಿದರೂ ಅವರು ಅವಳನ್ನು ಸ್ವೀಕರಿಸಲು ಒಪ್ಪದೆ ಹೋಗಬಹುದು. ಅವಳ ಚಿಕ್ಕಪ್ಪನ ಮನೆಗೆ ಪುನಃ ಕಳುಹಿಸಲು ಅವನ ಮನಸ್ಸೊಪ್ಪಲಿಲ್ಲ. ಪತಿಯಿಲ್ಲದವನೊಡನೆ ಇಷ್ಟುದಿನ ವಾಸಿಸಿದಳೆಂದು ತಿಳಿದರೆ ಸಮಾಜ ಅವಳನ್ನೆಷ್ಟು ತುಚ್ಛವಾಗಿ ಕಾಣಬಹುದು! ಅವಳಿಗೆ ಆಸರೆ ಎಲ್ಲಿ! ಗಂಡ ಬದುಕಿದ್ದರೂ ಧೈರ್ಯದಿಂದ ಕರೆದುಕೊಳ್ಳಲು ಮುಂದೆ ಬರುವನೆ? ಏನು ಮಾಡಿದರೂ ದಿಕ್ಕುಗಾಣದ ಸಂಸಾರಸಾಗರದಲ್ಲಿ ನೂಕಿದಂತಾಗುವುದು ತನ್ನ ಜತೆಯಲ್ಲಿರಬೇಕಾದರೆ ಹೆಂಡತಿಯ ಸ್ಥಾನದಲ್ಲೇ. ಬೇರೆ ಯಾರಿಗೂ ಅವಳ ಹೊಣೆಯನ್ನು ಒಪ್ಪಿಸುವಂತಿಲ್ಲ! ಆದರೆ ಹೆಂಡತಿಯೆಂದು ಪರಿಗ್ರಹಿಸಲು ಅವನ ಮನಸ್ಸೊಪ್ಪಲಿಲ್ಲ. ಕಲ್ಪನೆಯಲ್ಲಿ ಪ್ರೀತಿಯಿಂದ ಚಿತ್ರಿಸಿಕೊಂಡಿದ್ದ ಉಜ್ವಲ ವರ್ಣರಂಜಿತ ಚಿತ್ರವನ್ನು ರಮೇಶನು ತೊಡೆದು ಹಾಕಬೇಕಾಯಿತು.

ಹಳ್ಳಿಯನ್ನು ಬಿಟ್ಟು ಜನಭರಿತವಾದ ಕಲ್ಕತ್ತೆಯನ್ನು ಸೇರಿದರೆ ಸಮಸ್ಯೆಯನ್ನು ಬಗೆ ಹರಿಸಲು ಸಾಧ್ಯವಾಗಬಹುದೆಂದು ಆಲೋಚಿಸಿ ಕಲ್ಕತ್ತೆಯಲ್ಲಿ ಮೊದಲಿದ್ದ ಮನೆಗೆ ದೂರವಾಗಿ ಒಂದು ಮನೆಯನ್ನು ಗೊತ್ತುಮಾಡಿಕೊಂಡನು.

ಕಮಲೆಗೂ ಈ ಏರ್ಪಾಟು ಸಂತೋಷಕರವಾಗಿತ್ತು. ಹೊಸ ಮನೆಗೆ ಹೋದ ಕೂಡಲೇ ಕಿಟಕಿಯಲ್ಲಿ ಹೋಗಿ ಕುಳಿತಳು. ಎದುರಿಗೆ ಹರಿದು ಹೋಗುತ್ತಿದ್ದ ಕೊನೆ ಮೊದಲಿಲ್ಲದ ಜನಪ್ರವಾಹವನ್ನು ಎಷ್ಟು

ನೋಡಿದರೂ ಅವಳಿಗೆ ತೃಪ್ತಿಯಿರಲಿಲ್ಲ. ಕಲ್ಕತ್ತೆಯಲ್ಲೇ ಹುಟ್ಟಿ ಬೆಳೆದ ಸೇವಕಿ ಅವಳನ್ನು ಹುಚ್ಚಿಯೆಂದು ಭಾವಿಸಿದಳು.

"ಅಲ್ಲಿ ನೋಡುವುದಕ್ಕೇನಿದೆ? ಸ್ನಾನಕ್ಕೇಳಿ ಹೊತ್ತಾಯಿತು," ಎಂದಳು. ಆ ಹೆಂಗಸು ದಿನವೆಲ್ಲಾ ಕೆಲಸಮಾಡಿ ಸಂಜೆ ಮನೆಗೆ ಹೋಗುತ್ತಿದ್ದಳು. ರಾತ್ರಿ ಇರಲು ಸೇವಕಿ ಯಾರೂ ಒಪ್ಪಲಿಲ್ಲ.

ರಮೇಶನಿಗೆ ಚಿಂತೆಯಾಯಿತು, "ರಾತ್ರಿಯೆಲ್ಲಾ ಹೊಸ ಸ್ಥಳದಲ್ಲಿ ಕಮಲೆಯೊಬ್ಬಳೇ ಇರುವುದು ಹೇಗೆ?"

ರಾತ್ರಿ ಊಟವಾದ ಮೇಲೆ ಕೆಲಸದವಳು ಹೊರಟು ಹೋದಳು. ಕಮಲೆಗೆ ಮಲಗುವ ಸ್ಥಳವನ್ನು ತೋರಿಸಿ, "ನೀನು ಮಲಗು. ನಾನು ಸ್ವಲ್ಪ ಓದಿ ಅನಂತರ ಮಲಗುತ್ತೇನೆ," ಎಂದು ರಮೇಶ ಪುಸ್ತಕವನ್ನು ಹಿಡಿದು ಕುಳಿತನು. ಕಮಲೆಗೂ ಆಯಾಸವಾಗಿದ್ದುದರಿಂದ ಬೇಗ ಮಲಗಿದಳು.

ಮೊದಲ ರಾತ್ರಿ ಹೀಗೆ ಕಳೆಯಿತು. ಎರಡನೆಯ ದಿನವೂ ಕಮಲೆ ಬೇಗ ಮಲಗುವಂತೆ ಮಾಡಿದನು. ಆ ದಿನ ಬಹಳ ಸೆಕೆಯಾಗಿದ್ದುದರಿಂದ ಮಾಳಿಗೆಯ ಮೇಲೆ ತನ್ನ ಹಾಸಿಗೆಯನ್ನು ಹಾಸಿಕೊಂಡು ರಮೇಶ ಮಲಗಿದನು. ಅರ್ಧರಾತ್ರಿಯವರೆಗೂ ಚಿಂತೆಯಿಂದ ಎಚ್ಚತ್ತಿದ್ದು ನಿದ್ದೆ ಹೋದನು. ಬೆಳಗಿನ ಜಾವದಲ್ಲಿ ಎಚ್ಚರವಾಗಲು ಯಾರೋ ಬೀಸಣಿಗೆಯಿಂದ ಬೀಸುತ್ತಿರುವ ಅನುಭವವುಂಟಾಯಿತು. ಅರ್ಧನಿದ್ರೆಯಲ್ಲಿ ಅವಳನ್ನು ಹತ್ತಿರಕ್ಕೆಳೆದುಕೊಂಡು, "ನಿದ್ರೆ ಹೋಗು, ಸುಶೀಲ. ಬೀಸಬೇಡ" ಎಂದನು. ಕತ್ತಲೆಯಲ್ಲಿ ಹೆದರಿದ್ದ ಕಮಲೆ ಅವನ ತೋಳ ಮೇಲೆ ಮಲಗಿ ಶಾಂತವಾಗಿ ನಿದ್ರಿಸಿದಳು.

ಎಚ್ಚರವಾಗಲು ರಮೇಶ ಗಾಬರಿಯಿಂದ ಎದ್ದನು. ಕಮಲೆ ಸ್ನೇಹದ ಸಲಿಗೆಯಿಂದ, ಬಲಗೈಯಿಂದ ಅವನ ಕತ್ತನ್ನಪ್ಪಿಕೊಂಡು ಎದೆಯ ಮೇಲೆ ತಲೆಯನ್ನಿಟ್ಟು ಮಲಗಿದ್ದಳು. ನೋಡ ನೋಡುತ್ತ ಅವನ ಕಣ್ಣುಗಳಲ್ಲಿ ನೀರು ತುಂಬಿ ಬಂತು. ಆ ಹುಡುಗಿ ಸ್ನೇಹದಿಂದ ಬಿಗಿದ ಕೈಗಳನ್ನು ಒರಟಾಗಿ ಕಿತ್ತೆಸೆಯುವುದು ಹೇಗೆ? ರಾತ್ರಿ ಗಾಳಿಬೀಸಲು ಅವಳು ಮೆಲ್ಲಗೆ ಬಂದದ್ದರ ನೆನಪುಂಟಾಯಿತು.

ನಿಟ್ಟುಸಿರು ಬಿಟ್ಟು ಮೆಲ್ಲಗೆ ಅವಳ ಕೈಗಳಿಂದ ಬಿಡಿಸಿಕೊಂಡು ಎದ್ದನು. ತುಂಬಾ ಚಿಂತಿಸಿ ಹುಡುಗಿಯರ ಪಾಠಶಾಲೆಯಲ್ಲಿ ಅವಳನ್ನು ಬಿಡಲು ನಿರ್ಧರಿಸಿದನು.

"ಪಾಠ ಕಲಿಯಲು ನಿನಗೆ ಆಸೆಯಿಲ್ಲವೇ, ಕಮಲಾ?"

ಕಮಲೆಗೆ ಅರ್ಥವಾಗಲಿಲ್ಲ ರಮೇಶ ವಿದ್ಯಾಭ್ಯಾಸದ ಪ್ರಯೋಜನ ಗಳನ್ನು ವಿವರಿಸಲು, ನಿಧಾನವಾಗಿ ಕೇಳಿ, "ಹಾಗಾದರೆ ನೀವೇ ಪಾಠ ಹೇಳಿ ಕೊಡಿ" ಎಂದಳು.

"ಸ್ಕೂಲಿಗೆ ಹೋಗಬೇಕು."

"ನನ್ನಷ್ಟು ದೊಡ್ಡವಳು ಸ್ಕೂಲಿಗೆ ಹೋದರೆ ಯಾರಾದರೂ ನಕ್ಕಾರು." ರಮೇಶ ನಕ್ಕು "ನಿನಗಿಂತ ದೊಡ್ಡವರೂ ಹೋಗುತ್ತಾರೆ" ಎಂದನು.

ರಮೇಶ ಗಾಡಿಯಲ್ಲಿ ಅವಳನ್ನು ಶಾಲೆಗೆ ಕರೆದುಕೊಂಡು ಹೋದನು. ಆ ದೊಡ್ಡ ಮಂದಿರದಲ್ಲಿ ಕಮಲೆಗಿಂತ ದೊಡ್ಡವರು, ಚಿಕ್ಕವರು ಅನೇಕ ಹುಡುಗಿಯರಿದ್ದರು. ಮುಖ್ಯೋಪಾಧ್ಯಾಯಿನಿಗೆ ಅವಳನ್ನು ಒಪ್ಪಿಸಿ ರಮೇಶ ಹೊರಡಲು ಸಿದ್ಧವಾಗಲು ಕಮಲೆಯೂ ಅವನ ಹಿಂದೆ ಹೊರಟಳು.

"ನೀನೆಲ್ಲಿಗೆ ಹೊರಟೆ? ಇಲ್ಲೇ ಇರಬೇಕು."

"ನೀವಿರುವುದಿಲ್ಲವೆ?" ಅಳು ದನಿಯಲ್ಲಿ ಕಮಲೆ ಕೇಳಿದಳು.

"ನಾನಿರಬಾರದು."

ಕಮಲೆ ಅವನ ಕೈ ಹಿಡಿದು. "ಹಾಗಾದರೆ ನಾನೂ ಇರುವುದಿಲ್ಲ. ನನ್ನನ್ನೂ ಕರೆದುಕೊಂಡು ಹೋಗಿ."

"ಹುಚ್ಚಿಯ ಹಾಗಾಡಬೇಡ, ಕಮಲ" ಎಂದು ರಮೇಶ ಕೈ ಬಿಡಿಸಿಕೊಂಡನು. ಕಮಲೆ ಸುಮ್ಮನಾದಳು. ಅಸಮಾಧಾನದಿಂದ ಚಿಕ್ಕ ದಾದ ಅವಳ ಮುಖವನ್ನು ನೋಡಿ ರಮೇಶನಿಗೂ ದುಃಖವಾಯಿತು. ಅಲ್ಲಿಂದ ಬೇಗ ಹೊರಟನು. ಎಷ್ಟು ಬೇಗ ಹೊರಟರೂ ಆ ಗಾಬರಿ ಗೊಂಡ ಮುದ್ದು ಮುಖದ ನಿಸ್ಸಹಾಯವಾದ ನೋಟವನ್ನು ಅವನು ಮರೆಯಲಾಗಲಿಲ್ಲ.

## ಅಧ್ಯಾಯ ೭

ಕಲ್ಕತ್ತೆಯ ಆಲಿಪುರದ ನ್ಯಾಯಸ್ಥಾನದಲ್ಲಿ ವಕೀಲಿ ಮಾಡ ಬೇಕೆಂದು ನಿರ್ಧರಿಸಿದ್ದರೂ ರಮೇಶನಿಗೆ ಉತ್ಸಾಹವೇ ಇರಲಿಲ್ಲ. ವಕೀಲಿಗೆ ಬೇಕಾದ ಸ್ಥೈರ್ಯವೂ ನಿರ್ಧಾರವೂ ಮಾಯವಾಗಿದ್ದುವು. ಹೌರ ಸೇತುವೆಯ ಮೇಲೂ, ಕಾಲೇಜು ಚೌಕದಲ್ಲೂ ಉದ್ದೇಶವಿಲ್ಲದೆ ತಿರುಗಾಡುವ ಅಭ್ಯಾಸವುಂಟಾಯಿತು ಎಲ್ಲಿಗಾದರೂ ಕೆಲವು ದಿನ ಹೋಗಿ ಬರಬೇಕೆಂದು ಆಲೋಚಿಸುತ್ತಿರುವಾಗ ಆನಂದ ಬಾಬುವಿನ ಕಾಗದ ಬಂತು. ಮುದುಕ ಬರೆದಿದ್ದನು–"ಗೆಜೆಟ್ಟಿನಿಂದ ನಿನಗೆ ತೇರ್ಗಡೆಯಾದ ವಿಚಾರ ತಿಳಿಯಿತು. ನೀನೇ ಈ ವಿಚಾರ ಬರೆಯುವೆಯೆಂದು ನಿರೀಕ್ಷಿಸುತ್ತಿದ್ದೆ. ನಿನ್ನಿಂದಾಗಲಿ, ನಿನ್ನ ವಿಚಾರವಾಗಿಯಾಗಲಿ ಕೇಳಿ ಬಹಳ ದಿನಗಳಾದುವು ಹಳೆಯ ಸ್ನೇಹಿತರ ಮನಸ್ಸಿಗೆ ಸಮಾಧಾನವನ್ನು ಕೊಡು ನೀನು ಹೇಗಿದ್ದೀಯೆಂಬುದಕ್ಕೂ, ಕಲ್ಕತ್ತೆಗೆ ಯಾವಾಗ ಬರುತ್ತೀಯೆಂಬುದಕ್ಕೂ ಬರೆಯಬೇಕು."

ಆನಂದ ಬಾಬು ಅಳಿಯನಾಗಬೇಕೆಂದು ಬಯಸುತ್ತಿದ್ದ ತರುಣ ಸ್ವದೇಶಕ್ಕೆ ಹಿಂದಿರುಗಿ ಬೇರೆ ಹುಡುಗಿಯೊಡನೆ ಮದುವೆ ಗೊತ್ತು ಮಾಡಿಕೊಂಡಿದ್ದನೆಂದು ಇಲ್ಲಿ ವಿವರಿಸ ಬೇಕಾಗಿದೆ.

ಇಷ್ಟೆಲ್ಲಾ ನಡೆದ ಮೇಲೆ ಹೇಮನಳಿನಿಯೊಡನೆ ಮೊದಲಿನಂತೆ ಸಲಿಗೆಯಿಂದಿರುವುದು ಸರಿಯಲ್ಲವೆಂದು ರಮೇಶನಿಗೆ ತೋರಿತು. ಕಮಲೆಯೊಡನೆ ತನ್ನ ಸಂಬಂಧವೇನೆಂಬುದನ್ನು ಯಾರಿಗೂ ಹೇಳುವ ಹಾಗಿರಲಿಲ್ಲ. ಹೇಮನಳಿನಿಯೊಡನೆ ಮೊದಲಿನಂತಿರಬೇಕಾದರೆ ಅದನ್ನು ಹೇಳದೆ ವಿಧಿಯಿಲ್ಲ.

ಆನಂದಬಾಬುವಿಗೆ ಪ್ರತ್ಯುತ್ತರ ಬರೆದನು, "ನಿಮ್ಮಲ್ಲಿಗೆ ಬರಲು ಸಾಧ್ಯವಾಗಲಿಲ್ಲ. ದಯವಿಟ್ಟು ಕ್ಷಮಿಸಬೇಕು." ತನ್ನ ವಿಳಾಸವನ್ನು ಮಾತ್ರ ಬರೆಯಲಿಲ್ಲ.

ಮಾರನೆಯ ದಿನ ಆಲಿಪುರದ ನ್ಯಾಯಸ್ಥಾನವನ್ನು ವಕೀಲನಾಗಿ

ಪ್ರವೇಶಿಸಿದನು. ಅಲ್ಲಿಂದ ಹಿಂದಿರುಗುತ್ತಾ, ಒಂದುದಿನ ಮನೆಗೆ ಹೋಗಲು ಗಾಡಿಯನ್ನು ಗೊತ್ತುಮಾಡುತ್ತಿರುವಾಗ "ಅಪ್ಪಾ, ರಮೇಶ ಬಾಬು" ಎಂದ ಪರಿಚಿತ ದನಿಯೊಂದು ಕೇಳಿಸಿತು. ರಮೇಶ ನಿಂತಿದ್ದ ಕಡೆ ಒಂದು ಗಾಡಿ ನಿಂತಿತು. ಆಲಿಪುರದ ಮೃಗಾಲಯದಿಂದ ಆನಂದ ಬಾಬುವೂ ಆತನ ಮಗಳೂ ಹಿಂದಿರುಗುತ್ತಿದ್ದರು.

ಆ ಸುಂದರ ಶಾಂತಮುಖವನ್ನೂ, ಅವಳದೇ ಆದ ರೀತಿಯಲ್ಲಿ ಕಟ್ಟಿದ್ದ ಕೂದಲನ್ನೂ ಚಿರಪರಿಚಿತವಾದ ಬಳೆಗಳನ್ನೂ ನೋಡಿದೊಡನೆ ರಮೇಶನ ಹೃದಯದಲ್ಲಿ ವೇದನೆ ಉಕ್ಕಿ ಬಂದು ಗಂಟಲು ಕಟ್ಟಿತು.

"ಓ, ರಮೇಶಾ, ಬೀದಿಯಲ್ಲೇ ಸಿಕ್ಕಿದೆಯಲ್ಲಾ! ಬರೆಯುವುದನ್ನೂ ಬಿಟ್ಟುಬಿಟ್ಟೆ; ವಿಳಾಸವನ್ನೂ ಕೊಡಲಿಲ್ಲ! ಎಲ್ಲಿಗೆ ಹೊರಟೆ? ಏನಾದರೂ ಕೆಲಸವಿದೆಯೆ?" ಆನಂದಬಾಬುವೆಂದನು.

"ಏನೂ ಇಲ್ಲ. ಈಗತಾನೆ ನ್ಯಾಯಸ್ಥಾನದಿಂದ ಹಿಂದಿರುಗುತ್ತಿದ್ದೇನೆ."

"ಹಾಗಾದರೆ ನಮ್ಮ ಮನೆಯಲ್ಲಿ ಸ್ವಲ್ಪ ಚಹಾ ತೆಗೆದುಕೊಂಡು ಹೋಗು."

ರಮೇಶ ಅನುಮಾನಿಸಲಿಲ್ಲ. ಗಾಡಿಯಲ್ಲಿ ಕುಳಿತು ಹೇಮನಳಿನಿಯ ಯೋಗಕ್ಷೇಮವನ್ನು ವಿಚಾರಿಸಿದನು.

"ನಿಮಗೆ ತೇರ್ಗಡೆಯಾಯಿತೆಂದು ಏಕೆ ತಿಳಿಸಲಿಲ್ಲ?" ಹೇಮನಳಿನಿ ಕೇಳಿದಳು.

ಉತ್ತರ ಹೇಳಲು ತೋರದೆ ರಮೇಶ, "ನಿನಗೂ ತೇರ್ಗಡೆಯಾಯಿತೆಂದು ತಿಳಿಯಿತು." ಎಂದನು.

ಹೇಮನಳಿನಿ ನಕ್ಕು "ಹೋಗಲಿ, ನಮ್ಮನ್ನು ಸಂಪೂರ್ಣವಾಗಿ ಮರೆತುಬಿಡಲಿಲ್ಲವಲ್ಲಾ!"

"ಈಗ ನೀನು ಎಲ್ಲಿದ್ದೀ?" ಆನಂದಬಾಬು ಪ್ರಶ್ನಿಸಿದನು.

"ದರ್ಜಿಪುರದಲ್ಲಿ."

"ಏಕೆ, ಕಲುತೊಲದಲ್ಲಿ ನಿನ್ನ ಹಳೇ ಕೊಠಡಿ ಚೆನ್ನಾಗಿತ್ತಲ್ಲ?"

ಹೇಮನಳಿನಿ ಕುತೂಹಲದಿಂದ ಉತ್ತರವನ್ನು ನಿರೀಕ್ಷಿಸುತ್ತಿದ್ದಳು.

ರಮೇಶನಿಗೆ ಅವಳ ದೃಷ್ಟಿಯಲ್ಲಿದ್ದ ಆಕ್ಷೇಪಣೆಯು ಅರ್ಥವಾಯಿತು.

"ಅಲ್ಲಿಗೇ ಪುನಃ ಬರಬೇಕೆಂದಿದ್ದೇನೆ." ತಾನು ಮನೆಯನ್ನು ಬದಲಾಯಿಸಿದುದು ಹೇಮನಳಿನಿಗೆ ಅಸಮಾಧಾನವೆಂದು ಅವನಿಗೆ ತಿಳಿಯಿತು. ಆದರಿಂದ ನೋವುಂಟಾದರೂ ಸಮಾಧಾನವನ್ನೇನೂ ಹೇಳಲು ತಿಳಿಯಲಿಲ್ಲ. ಹೇಮನಳಿನಿ ಕಿಟಕಿಯಿಂದ ಹೊರಗೆ ನೋಡುತ್ತಾ ಕುಳಿತಿದ್ದಳು.

ಆ ಮೌನವನ್ನು ಸಹಿಸಲಾರದೆ ರಮೇಶ, "ನನ್ನ ಸಂಬಂಧಿಯೊಬ್ಬನು 'ಹೆಡುವ'ದಲ್ಲಿದ್ದಾನೆ. ಅವನ ಬಳಿಯಿರಬೇಕೆಂದು ದರ್ಜಿಪುರದಲ್ಲಿ ಮನೆ ಮಾಡಿದೆ."

ಇದು ಸುಳ್ಳಲ್ಲದಿದ್ದರೂ ಸಾಕಾದ ಕಾರಣವಾಗಿರಲಿಲ್ಲ. ದೂರದ ಸಂಬಂಧಿಯ ಯೋಗಕ್ಷೇಮವನ್ನು ಕಲುತೊಲದಿಂದಲೂ ವಿಚಾರಿಸಬಹುದಾಗಿತ್ತು. ಹೇಮನಳಿನಿ ತಿರುಗಲೇ ಇಲ್ಲ. ರಮೇಶ, ಏನಾದರೂ ಹೇಳಬೇಕೆಂದು ಯೋಚಿಸುತ್ತಿದ್ದು, ಏನೂ ತೋಚದೆ, ಕಡೆಗೆ "ಜೋಗೆನ್ ಹೇಗಿದ್ದಾನೆ? ಎಂದನು.

ಉತ್ತರವಿತ್ತವನು ಆನಂದಬಾಬು : "ಲಾ ಪರೀಕ್ಷೆಯಲ್ಲಿ ಉತ್ತೀರ್ಣನಾಗಲಿಲ್ಲ. ಹವಾಬದಲಾಯಿಸಲು ಉತ್ತರದ ಕಡೆ ಹೋಗಿದ್ದಾನೆ."

ಮನೆ ಸೇರಿದಾಗ ಹಿಂದಿನ ನೆನಪುಗಳು ರಮೇಶನನ್ನು ತಮ್ಮ ಮಾಯೆಯಲ್ಲಿ ಮುಚ್ಚಿದುವು. ವಿಷಾದವೂ ಸಮಾಧಾನವೂ ಮಿಳಿತವಾದೊಂದು ನಿಟ್ಟುಸಿರನ್ನು ಬಿಟ್ಟು ಕುಳಿತುಕೊಂಡನು.

ಆನಂದಬಾಬು ಇದ್ದಕಿದ್ದಂತೆ "ಊರಿನಲ್ಲಿ ಬಹಳ ಕೆಲಸವಿತ್ತೇನೋ. ಆದರಿಂದ ಮನೆಬಿಟ್ಟು ಹೊರಡಲಿಲ್ಲವೆಂತ ಕಾಣುತ್ತೆ ?" ಎಂದು ಕೇಳಿದನು.

"ನನ್ನ ತಂದೆ ಹೋಗಿಬಿಟ್ಟರು—" ರಮೇಶನೆಂದ.

"ಅಯ್ಯೋ, ತಿಳಿಯಲೇ ಇಲ್ಲ. ಏನಾಗಿತ್ತು?"

"ಪದ್ಮಾನದಿಯ ಮೇಲೆ ದೋಣಿಯಲ್ಲಿ ಬರುತ್ತಿದ್ದರು. ಬಿರುಗಾಳಿ ಎದ್ದು ದೋಣಿ ಮುಳುಗಿಹೋಯಿತು."

ಬಿರುಗಾಳಿಯೆದುರು ಮೋಡಗಳು ತೇಲಿ ಹೋಗಿ ಆಗಸ ಶುಭ್ರ

ವಾಗುವಂತೆ ರಮೇಶನ ಕಷ್ಟ, ಹೇಮನಳಿನಿಗೂ ಅವನಿಗೂ ನಡುವೆ ಇದ್ದ ಮನಸ್ತಾಪವನ್ನು ತೇಲಿಸಿತು.

ಹೇಮನಳಿನಿ, "ರಮೇಶಬಾಬುವಿನಲ್ಲಿ ತಪ್ಪು ತಿಳಿದುದು ಅನ್ಯಾಯ. ತಂದೆ ಹೋದ ದುಃಖದಲ್ಲಿ ಮುಳುಗಿರುವಾಗ ವಿಚಾರಿಸದೆ ಅವನ ಮೇಲೆ ತಪ್ಪು ಹೊರಿಸಿದೆವು" ಎಂದು ತನ್ನನ್ನು ತಾನೇ ತಿರಸ್ಕರಿಸಿಕೊಂಡಳು. ರಮೇಶನ ವಿಚಾರದಲ್ಲಿ ಹೆಚ್ಚು ಸಹಾನುಭೂತಿಯನ್ನು ತೋರಿಸಲಾರಂಭಿಸಿದಳು.

ರಮೇಶನಿಗೆ ಹಸಿವಿರಲಿಲ್ಲ. ಹೇಮನಳಿನಿ ಬಲವಂತಮಾಡಲು ಆರಂಭಿಸಿದಳು.

"ನಿಮ್ಮ ಆರೋಗ್ಯದ ಕಡೆ ಗಮನ ಕೊಡಬೇಕು," ಎಂದು, ತಂದೆಯ ಕಡೆ ತಿರುಗಿ,

"ರಮೇಶಬಾಬು ನಮ್ಮೊಡನೆ ಈ ರಾತ್ರಿ ಊಟಮಾಡಲಿ, ಅಲ್ಲವೆ, ಅಪ್ಪ?" ಎಂದಳು.

"ಖಂಡಿತವಾಗಿ," ಮುದುಕನೆಂದನು.

ಅಷ್ಟುಹೊತ್ತಿಗೆ ಅಲ್ಲಿಗೆ ಅಕ್ಷಯ ಬಂದನು. ರಮೇಶ ಪುನಃ ಆ ಮನೆಗೆ ಬಂದುದು ಅವನಿಗೆ ರುಚಿಸಲಿಲ್ಲ. ಅದನ್ನು ತೋರಗೊಡದೆ, "ಇದೇನು, ರಮೇಶಬಾಬು ಬಂದಿದ್ದಾರೆ? ನೀವು ನಮ್ಮನ್ನೆಲ್ಲಾ ಮರೆತುಬಿಟ್ಟಿದ್ದಿರಿ ಎಂದುಕೊಂಡೆ."

ರಮೇಶ ಸುಮ್ಮನೆ ನಕ್ಕನು.

ಅಕ್ಷಯ, "ನಿಮ್ಮ ತಂದೆ ಕರೆದುಕೊಂಡು ಹೋದ ರೀತಿಯನ್ನು ನೋಡಿ ಮದುವೆ ಮಾಡುವವರೆಗೂ ಹೊರಗೆ ಬಿಡುವುದಿಲ್ಲವೆಂದುಕೊಂಡೆ. ತಪ್ಪಿಸಿಕೊಂಡಿರಾ?"

ಹೇಮನಳಿನಿ ಕೋಪದಿಂದ ಅವನ ಕಡೆ ನೋಡಿದಳು.

ಆನಂದಬಾಬು, "ರಮೇಶನ ತಂದೆ ಹೋಗಿಬಿಟ್ಟರು," ಎಂದನು.

ರಮೇಶ ತಲೆ ತಗ್ಗಿಸಿದುದನ್ನು ನೋಡಿ ಹೇಮನಳಿನಿ, ಮಾತು ಮರೆಸಲು,

"ನೀವು ನನ್ನ ಚಿತ್ರಪಟಗಳ ಪುಸ್ತಕವನ್ನು ನೋಡಲೇ ಇಲ್ಲ,"

ಎಂದು ಪುಸ್ತಕವನ್ನು ರಮೇಶನ ಮುಂದಿಟ್ಟು ವಿವರಿಸತೊಡಗಿದಳು.

"ನಿಮ್ಮ ಮನೆಯಲ್ಲಿ ಒಬ್ಬರೇ ಇದ್ದೀರಾ?" ಎಂದು ಕೇಳಿದಳು.

"ಹೌದು, ಒಬ್ಬನೆ."

"ಪಕ್ಕದ ಮನೆಗೆ ಬೇಗ ಬಂದು ಬಿಡಿ."

"ಸೋಮವಾರ ಬರುತ್ತೇನೆ."

"ನೀವು ನನಗೆ ತತ್ತ್ವಶಾಸ್ತ್ರದ ಪಾಠದಲ್ಲಿ ಸಹಾಯಮಾಡಬೇಕು."

ರಮೇಶನಿಗೆ ಆನಂದವಾಯಿತು.

## ಅಧ್ಯಾಯ ೮

ರಮೇಶ ಮೊದಲಿದ್ದ ಕೊಠಡಿಗೆ ಬಂದನು. ಹೇಮನಳಿನಿಗೂ ಅವನಿಗೂ ನಡುವೆ ಇದ್ದ ಅಸಮಾಧಾನ ಸಂಪೂರ್ಣವಾಗಿ ಮಾಯವಾಗಿತ್ತು. ಅವರ ಮನೆಯಲ್ಲಿ ಮಗನಂತೆ ಸುಖದುಃಖಗಳಲ್ಲಿ ಸಮಭಾಗಿಯಾಗಿರುತ್ತಿದ್ದನು.

ಓದು ಹೆಚ್ಚಾಗಿ ಹೇಮನಳಿನಿ ಸಣ್ಣಗಾಗಿದ್ದಳು. ಮೊದಲೇ ಕಡಮೆ ಮಾತಿನವಳಾದುದರಿಂದ ಅವಳೊಡನೆ ಮಾತನಾಡಲು ಸ್ನೇಹಿತರೂ ಹೆದರುತ್ತಿದ್ದರು. ಈಚೆಗೆ ಅವಳಲ್ಲಿ ವ್ಯತ್ಯಾಸವುಂಟಾಗಿತ್ತು. ಮುಖದಲ್ಲಿ ಆನಂದದ ಚಿಹ್ನೆಗಳು ಕಾಣಲಾರಂಭಿಸಿದುವು. ಉಡುಪಿನಕಡೆ ಗಮನಕೊಡುವುದೇ ತಪ್ಪೆಂದು ಭಾವಿಸುತ್ತಿದ್ದವಳು ಈಗ ಹೆಚ್ಚು ಗಮನ ಕೊಡಲಾರಂಭಿಸಿದಳು.

ರಮೇಶನೂ ಗಾಂಭೀರ್ಯದಿಂದ ಇರುತ್ತಿದ್ದನು. ತಲೆಯ ಮೇಲೆ ಬಿದ್ದ ಹೊರೆಯ ಭಾರದಲ್ಲಿ ಕುಗ್ಗಿಹೋಗಿದ್ದನು. ನಕ್ಷತ್ರಗಳು ಚಲಿಸಿದರೂ ಜ್ಯೋತಿಷಿಯ ದೃಷ್ಟಿ ಚಲಿಸದಿರುವಂತೆ ಪ್ರಪಂಚದ ಪ್ರವಾಹ ವೇಗದಲ್ಲಿಯೂ ಮನಸ್ಸನ್ನು ಪುಸ್ತಕಗಳ ಮೇಲೆ ನಿಶ್ಚಲವಾಗಿಟ್ಟಿದ್ದನು. ಈಗ ಅವನ ಸ್ವಭಾವವೇ ಬದಲಾಗಿ ಉಲ್ಲಾಸದಿಂದ ತುಂಬಿದ್ದನು. ತಟ್ಟನೆ ಹಾಸ್ಯಕ್ಕೆ ಉತ್ತರಕೊಡಲು ಅಸಮರ್ಥನಾಗಿದ್ದರೂ ನಗುವುದಕ್ಕೆ ಹಿಂದೆಗೆಯುತ್ತಿರಲಿಲ್ಲ. ತಲೆಗೆ ಹೆಚ್ಚು ಎಣ್ಣೆ ಹಾಕಿಕೊಳ್ಳದಿದ್ದರೂ

ಉಡುಪು ಸೊಗಸಾಗಿರುತ್ತಿತ್ತು. ಮನಸ್ಸೂ ದೇಹವೂ ಕೂಡ ಹೆಚ್ಚು ಚಟುವಟಿಕೆಯಿಂದ ತುಂಬಿದ್ದುವು.

## ಅಧ್ಯಾಯ ೯

ಕಲ್ಕತ್ತೆಯಲ್ಲಿ ಪ್ರೇಮಿಗಳಿಗೆ ತಕ್ಕ ಸನ್ನಿವೇಶವಿಲ್ಲ. ಅಶೋಕ ಬಕುಳ ವೃಕ್ಷಗಳಾಗಲಿ, ಮಾಧವೀ ಲತೆಯಾಗಲಿ, ಕೋಗಿಲೆಯ ಇಂಪಾದ ಸ್ವರವಾಗಲಿ ಇಲ್ಲ. ಆದರೂ ಮನ್ಮಥನು ಆ ಸ್ಥಳದಲ್ಲಿರಲು ಹಿಂಜರಿಯುವುದಿಲ್ಲ. ಆ ಜನಸಂದಣಿಯಲ್ಲಿಯೂ, ಟ್ರಾಂ ಗಾಡಿಗಳ ನಡುವೆ, ಪೋಲೀಸರ ಎದುರಿಗೇ ಆ ಮಾಯಾವಿ ಸುಳಿಯುವನು.

ರಮೇಶನೂ ಹೇಮನಳಿನಿಯೂ, ಚಮ್ಮಾರನ ಅಂಗಡಿಯೆದುರು, ಕಿರಾಣಿ ಅಂಗಡಿಯ ಪಕ್ಕದಲ್ಲಿದ್ದ ಕೊಠಡಿಗಳಲ್ಲಿದ್ದರೂ ಅವರ ಪ್ರೇಮ, ಲತಾಪುಷ್ಪಗಳನಡುವೆ ಬೆಳೆಯುವಂತೆಯೇ ಬೆಳೆಯಿತು. ಆನಂದಬಾಬುವಿನ ಮನೆಯ ಚಹಾಮೇಜು ತಾವರೆಗಳಿಂದ ತುಂಬಿದ ಕೊಳದಂತೆಯೇ ಅವರಿಗೆ ತೋರುತ್ತಿತ್ತು. ಹೇಮನಳಿನಿಯ ಬೆಕ್ಕನ್ನು ಆಡಿಸುವಾಗ ಕಾದಂಬರೀ ಪ್ರೇಮಿ ತಮ್ಮ ಪ್ರೇಯಸಿಯ ಜಿಂಕೆಯನ್ನು ಸವರುವಾಗ ಪಡೆಯುತ್ತಿದ್ದ ಆನಂದವನ್ನೇ ರಮೇಶ ಅನುಭವಿಸುವನು. ಆ ಬೆಕ್ಕಿನಷ್ಟು ಸುಂದರವಾದ ಪ್ರಾಣಿ ಪ್ರಪಂಚದಲ್ಲೇ ಇಲ್ಲವೆಂದು ಭಾವಿಸುವನು.

ಪರೀಕ್ಷೆಯ ಸಮಯದಲ್ಲಿ ಹೇಮನಳಿನಿ ಹೊಲಿಗೆಯನ್ನು ಅಸಡ್ಡೆ ಮಾಡಿದ್ದುದರಿಂದ ಈಗ ಅದನ್ನು ಒಬ್ಬ ಗೆಳತಿಯಿಂದ ಕಲಿಯುತ್ತಿದ್ದಳು. ರಮೇಶನಿಗೆ ಇದು ಸರಿತೋರಲಿಲ್ಲ. ಸಾಹಿತ್ಯದ ವಿಚಾರವಾಗಿ ಮಾತನಾಡಿದಂತೆ ಹೊಲಿಗೆಯ ವಿಚಾರದಲ್ಲಿ ಅವನು ಆಡುವ ಮಾತೇ ಇರಲಿಲ್ಲ. "ಹೊಲಿಗೆಯಿಂದ ಏನು ಪ್ರಯೋಜನ? ಬೇರೆ ಕೆಲಸವಿಲ್ಲದವರಿಗೆ ಅದು ಬೇಕು." ಎನ್ನುವನು.

ಹೇಮನಳಿನಿ ಸುಮ್ಮನೆ ನಕ್ಕು ಹೊಲಿಗೆಯನ್ನು ಮುಂದುವರಿಸಿದಳು. ಅಕ್ಷಯನು ವ್ಯಂಗ್ಯವಾಗಿ, "ಉಪಯೋಗಕರವಾದ ಕೆಲಸಗಳಲ್ಲಿ

ರಮೇಶ ಬಾಬುವಿಗೆ ಅಸಡ್ಡೆ. ದೊಡ್ಡ ತತ್ತ್ವಜ್ಞಾನಿಯೂ ಕವಿಯೂ ಆದ ಮಾತ್ರಕ್ಕೆ ಬೇರೆ ವಿಚಾರಗಳನ್ನು ಅಸಡ್ಡೆ ಮಾಡಿದರೆ ಏನು ಪ್ರಯೋಜನ?" ಎಂದನು ರಮೇಶನೂ ವಾಗ್ಯುದ್ಧಕ್ಕೆ ಸಿದ್ಧನಾದನು.

ಹೇಮನಳಿನಿ, "ಸುಮ್ಮನೆ ಏತಕ್ಕೆ ಮಾತು? ಈ ಪ್ರಪಂಚದಲ್ಲಿ ಉಪಯೋಗವಿಲ್ಲದ ಮಾತುಗಳು ಬೇಕಾದಷ್ಟಿವೆ," ಎಂದು ತನ್ನ ಹೊಲಿಗೆಯ ಕಡೆ ಗಮನವಿಟ್ಟಳು. ಆ ಬಟ್ಟೆಯ ಒಂದು ಅಂಚಿನಲ್ಲಿ "ರ" ಎಂಬ ಅಕ್ಷರವೂ ಇನ್ನೊಂದು ಕಡೆ ಸರಿಗೆಯ ದಾರದಲ್ಲಿ ಹೊಲಿದ ತಾವರೆಯೂ ಇದ್ದುವು. ಆ ವಸ್ತ್ರವನ್ನು ಹೇಮನಳಿನಿ ಯಾರಿಗಾಗಿ ಹೊಲಿಯುತ್ತಿದ್ದಳೆಂಬ ವಿಚಾರದಲ್ಲಿ ರಮೇಶನಿಗೆ ಹೆಚ್ಚುಕಾಲ ಸಂದೇಹವುಳಿಯಲಿಲ್ಲ. ಹೊಲಿಗೆಯ ವಿಚಾರದಲ್ಲಿದ್ದ ತಿರಸ್ಕಾರವು ಮಾಯವಾಯಿತು. ಆ ವಸ್ತ್ರದಿಂದ ಹೊದೆಯಲ್ಪಟ್ಟ ಪುಸ್ತಕವನ್ನು ಎದೆಗೆ ಒತ್ತಿಕೊಂಡಾಗ, ಅಕ್ಷಯನೊಡನೆ ಕೂಡ, ತನ್ನ ತಪ್ಪನ್ನೊಪ್ಪಿಕೊಳ್ಳಲು ಅವನು ಹಿಂದೆಗೆಯುತ್ತಿರಲಿಲ್ಲ.

ಪುಸ್ತಕದಲ್ಲಿ ಒಂದು ಕಾಗದವನ್ನಿಟ್ಟು ಹೀಗೆ ಬರೆದನು. "ನಾನೊಬ್ಬ ಕವಿಯಾಗಿದ್ದರೆ ಕವಿತೆಯನ್ನು ನಿನಗರ್ಪಿಸುತ್ತಿದ್ದೆ. ಆ ಭಾಗ್ಯವನ್ನು ನಾನು ಪಡೆದುಬಂದಿಲ್ಲ. ಪುಸ್ತಕವನ್ನು ತೆಗೆದುಕೊಳ್ಳುವ ಯೋಗ ಮಾತ್ರವಿದೆ. ಅದರ ಬೆಲೆ ನನಗೂ ಪರಮಾತ್ಮನಿಗೂ ಇಬ್ಬರಿಗೇ ತಿಳಿದಿರುವುದು ಪುಸ್ತಕವನ್ನು ಮುಟ್ಟಿನೋಡಬಹುದು. ಆದರೆ ನನ್ನ ಕೃತಜ್ಞತೆಯ ಆಳವನ್ನು ಬಾಯಿಂದ ಮಾತ್ರ ಆಡಿ ತೋರಿಸಬಹುದು. ಎಂದೆಂದಿಗೂ ಋಣಿಯಾದ

ರಮೇಶ"

ಹೇಮನಳಿನಿಗೆ ಕಾಗದ ತಲುಪಿದರೂ ಆ ವಿಚಾರವಾಗಿ ಇಬ್ಬರೂ ಮಾತನಾಡಲಿಲ್ಲ.

ಮಳೆಗಾಲ ಸನ್ನಿಹಿತವಾಗಿತ್ತು ಪಟ್ಟಣಗಳಲ್ಲಿ ಮಳೆ ಅಷ್ಟು ಸುಖದಾಯಕವಾದುದಲ್ಲ ಕಿಟಕಿಗಳನ್ನು ಮುಚ್ಚಿ ಛಾವಣಿಗಳನ್ನು ಸರಿಪಡಿಸಬೇಕು. ದಾರಿಹೋಕರು ಛತ್ರಿಗಳನ್ನು ಅಡ್ಡಲಾಗಿ ಹಿಡಿದರೂ ಸ್ವಲ್ಪ ಹೊತ್ತಿನಲ್ಲಿ ಎಲ್ಲೆಲ್ಲೂ ಕೊಚ್ಚೆ ತುಂಬುತ್ತದೆ. ನದಿಗಳು, ಬೆಟ್ಟಗಳು,

ಕಾಡುಗಳು, ಹೊಲಗಳು ಸಂತೋಷದಿಂದ ಸ್ವಾಗತಿಸುತ್ತಿರಲು, ಆ ಸ್ವಾಭಾವಿಕ ಸನ್ನಿವೇಶದಲ್ಲಿ ಮಾತ್ರ ಮಳೆಯ ವೈಭವವನ್ನು ಕಾಣ ಬಹುದು. ಭೂಮ್ಯಾಕಾಶಗಳು ಒಮ್ಮನಸ್ಸಿನಿಂದ ಮೋಡಗಳ ಬರುವಿಕೆ ಯನ್ನು ಕಂಡು ಆನಂದಿಸುವಾಗ ಅಲ್ಲಿ ಅಪಸ್ವರದ ದನಿಯಿರುವುದಿಲ್ಲ. ಪ್ರೇಮಿಗಳು ಬೆಟ್ಟಗಳ ಹಾಗೆ. ಮಳೆಯಿಂದ ಆನಂದಬಾಬುವಿನ ಜೀರ್ಣ ಶಕ್ತಿ ನಾಶವಾದರೂ, ರಮೇಶ, ನಳಿನಿಯರ ಉತ್ಸಾಹ ಕಡಮೆಯಾಗಲಿಲ್ಲ. ಮಳೆಯಿಂದ ರಮೇಶ ನ್ಯಾಯಸ್ಥಾನಕ್ಕೆ ಹೋಗಲು ಆಗುತ್ತಿರಲಿಲ್ಲ. ಹೇಮನಳಿನಿ, "ಈ ಮಳೆಯಲ್ಲಿ ನೀವು ಪುನಃ ಮನೆ ಸೇರುವುದು ಹೇಗೆ, ರಮೇಶಬಾಬು?" ಎನ್ನುವಳು.

ರಮೇಶ "ಮಳೆಯೇನೂ ಹೆಚ್ಚಾಗಿಲ್ಲ."

"ನೆಗಡಿಯಾದರೆ ಏನು ಗತಿ! ಊಟಕ್ಕೆ ನಮ್ಮ ಮನೆಗೆ ಬಂದು ಬಿಡಿ."

ರಮೇಶನಿಗೆ ತನ್ನ ಆರೋಗ್ಯದ ವಿಚಾರದಲ್ಲಿ ಚಿಂತೆಯಿಲ್ಲದಿದ್ದರೂ ಹೇಮನಳಿನಿಯ ಮಾತಿಗೆ ಬದಲಾಡುತ್ತಿರಲಿಲ್ಲ. ಮಳೆಯಿಂದ ನೆಗಡಿ ಯಾಗಬಹುದೆಂಬ ಚಿಂತೆ ಹೇಮನಳಿನಿಗಿತ್ತೇ ಹೊರತು ತಾನು ಸಿದ್ಧ ಪಡಿಸಿದ ಆಹಾರಗಳಿಂದ ಅವನಿಗೆ ಅಜೀರ್ಣವಾಗಬಹುದೆಂಬ ಆಲೋ ಚನೆಯಿರಲಿಲ್ಲ. ಹೀಗೆ ಇಬ್ಬರೂ ಪರವಶರಾಗಿ ಕಾಲ ಕಳೆಯುತ್ತಿದ್ದರು. ಮುಂದೇನೆಂಬ ಚಿಂತೆಯನ್ನು ರಮೇಶನು ಮಾಡದಿದ್ದರೂ, ಆನಂದಬಾಬು ಮಾಡುತ್ತಿದ್ದನು. ಪ್ರಪಂಚಜ್ಞಾನವಿಲ್ಲದ ರಮೇಶನಿಂದ ಆನಂದಬಾಬು ವಿನ ನಿರೀಕ್ಷೆಗೆ ಯಾವ ಉತ್ತರವೂ ದೊರಕಲಿಲ್ಲ.

## ಅಧ್ಯಾಯ ೧೦

ಅಕ್ಷಯನ ಧ್ವನಿ ಚೆನ್ನಾಗಿಲ್ಲದಿದ್ದರೂ ಪಿಟೀಲಿನ ಜತೆಯಲ್ಲಿ ಚೆನ್ನಾ ಗಿಯೇ ಹಾಡುತ್ತಿದ್ದನು. ಆನಂದಬಾಬು ತನಗೆ ಸಂಗೀತದಲ್ಲಿ ಅಭಿರುಚಿ ಇಲ್ಲವೆಂದು ಒಪ್ಪಿಕೊಳ್ಳುತ್ತಿರಲಿಲ್ಲ. ಪುನಃ ಹಾಡಬೇಕೆಂದು ಅಕ್ಷಯ ನನ್ನು ಯಾರಾದರೂ ಕೇಳಿದರೆ "ಬೇಡ, ಬೇಡ! ಹಾಡುತ್ತಾನೆಂದು

ಎಷ್ಟಾದರೂ ಹಾಡಿಸಿದರೆ, ಪಾಪ, ಅವನ ಗತಿಯೇನು" ಎನ್ನುವನು.

ಅಕ್ಷಯ, "ಪರವಾಯಿಲ್ಲ! ಕಷ್ಟ, ಹಾಡುವವನದೋ, ಕೇಳುವವರದೋ, ಎಂಬುದೇ ಅನುಮಾನ."

ಯಾರಾದರೂ, "ಹಾಡು ಕೇಳಿದ ಮೇಲೆ ನಿನ್ನ ಪ್ರಶ್ನೆಗೆ ಉತ್ತರ ಕೊಡೋಣ" ಎನ್ನುವರು.

ಮಧ್ಯಾಹ್ನ ಮೋಡಮುಸುಕಿತ್ತು. ರಾತ್ರಿ ಸಮೀಪಿಸುತ್ತಿದ್ದರೂ ಮಳೆ ನಿಂತಿರಲಿಲ್ಲ. ಅಕ್ಷಯ ಹೊರಡಲಾಗಲಿಲ್ಲ. ಅವನನ್ನು ಹಾಡ ಹೇಳಿ ಹೇಮನಳಿನಿ ಹಾರ್ಮೋನಿಯಂ ಶ್ರುತಿ ಮಾಡಲಾರಂಭಿಸಿದಳು. ಅಕ್ಷಯ ಹಿಂದೂಸ್ಥಾನಿ ಪದವೊಂದನ್ನು ಹಾಡಲಾರಂಭಿಸಿದನು. ಹಾಡಿನ ಅರ್ಥ ಯಾರಿಗೂ ತಿಳಿಯದಿದ್ದರೂ ಅದರ ಭಾವ ಕೇಳುವವರ ಹೃದಯವನ್ನು ಕಲಕಿತು. ಮೋಡಗಳು ಮಳೆಗರೆಯುತ್ತಾ, ನವಿಲುಗಳು ಕೂಗುತ್ತಾ ಇರುವಾಗ ಪ್ರೇಮಿಯೊಬ್ಬನು ಪ್ರೇಯಸಿಗಾಗಿ ಹಂಬಲಿಸುವ ವೇದನೆಯನ್ನು ಅದು ಸೂಚಿಸುತ್ತಿತ್ತು. ಅಕ್ಷಯ ಆ ಪದವನ್ನು ಹಾಡಿದುದು ತನ್ನ ಮನಸ್ಸಿನ ಇಷ್ಟವನ್ನು ಹೊರಗೆಡಹಲು; ಆದರೆ ಅದು ಅಲ್ಲಿದ್ದ ಬೇರೆ ಇಬ್ಬರ ಹೃದಯದ ಆಸೆಯನ್ನು ಎಚ್ಚರಿಸಿತು. ಆ ರಾಗ ತರಂಗಗಳಲ್ಲಿ ಎರಡು ಹೃದಯಗಳೂ ಐಕ್ಯತೆಯನ್ನು ಹೊಂದಿ ತೇಲಿ ಹೋದುವು. ಅವರಿಗೆ ಪ್ರಪಂಚವೇ ಹೆಚ್ಚು ಸುಂದರವಾಗಿ ಕಾಣಲಾರಂಭಿಸಿತು. ಯುಗಯುಗಗಳ ಮಾನವ ಪ್ರೇಮ ಇಬ್ಬರ ಹೃದಯವನ್ನೂ ತುಂಬಿ, ಆನಂದ ವಿಷಾದದಲ್ಲಿ, ಆಸೆನಿರಾಸೆಗಳಲ್ಲಿ ಮುಳುಗಿಸಿತ್ತು.

ಮಳೆಯಾಗಲಿ ಗಾನವಾಗಲಿ ನಿಲ್ಲಲಿಲ್ಲ. ಹೇಮನಳಿನಿಗಾಗಿ ಅಕ್ಷಯನು ಹಾಡಿದನು. ಕರೀ ಮೋಡಗಳ ನಡುವೆ ಮಿಂಚು ಹೊಳೆದು ಹೋದಂತೆ ಆ ಪದವು ಮಾನವ ಹೃದಯದ ಆಕಾಂಕ್ಷೆಯನ್ನು ಚಿತ್ರಿಸಿದಂತಿತ್ತು. ಆ ರಾತ್ರಿ ಅಕ್ಷಯ ಮನೆಗೆ ಹೋದಾಗ ತುಂಬಾ ಹೊತ್ತಾಗಿ ಹೋಗಿತ್ತು.

ರಮೇಶ ರಾಗಗಳ ಮಬ್ಬಿನಲ್ಲಿ ಹೇಮನಳಿನಿಯನ್ನು ಒಂದು ಸಲ ದಿಟ್ಟಿಸಿ ನೋಡಿದನು. ಅವಳನ್ನೂ ಅದೇ ಮಾಯೆ ಮುಸುಕಿತ್ತು.

ಸ್ವಲ್ಪ ನಿಂತಿದ್ದ ಮಳೆ, ರಮೇಶ ಮನೆ ಸೇರಿದ ಮೇಲೆ, ಸುರಿಯ

ರಜೆ ಹತ್ತಿರ ಬರುತ್ತಾ ಆನಂದಬಾಬು ಪ್ರಯಾಣಕ್ಕೆ ಅಣಿಮಾಡ ಲಾರಂಭಿಸಿದನು. ಹೇಮನಳಿನಿ ಹೊರಟುಹೋದರೆ ಸಂಗೀತಪಾಠವಿಲ್ಲ ವೆಂದು ರಮೇಶ ಈಗಲೇ ಹೆಚ್ಚು ಹೊತ್ತು ಅಭ್ಯಾಸ ಮಾಡಲಾರಂಭಿ ಸಿದ್ದನು. ಒಂದು ದಿನ ಹೇಮನಳಿನಿ "ರಮೇಶಬಾಬುವೂ ಹವಾ ಬದ ಲಾಯಿಸಿದರೆ ಒಳ್ಳೆಯದಲ್ಲವೇನಪ್ಪಾ?" ಎಂದಳು. ಆನಂದಬಾಬು— ಸರಿಯೆಂದನು. "ಹವಾ ಬದಲಾಯಿಸಿದರೆ ಮನಸ್ಸಿನ ದುಗುಡ ಕಡಮೆ ಯಾಗುತ್ತೆ. ಎಲ್ಲಿಗೆ ಹೋದರೂ ಮೊದಲು ಕೆಲವು ದಿನ ಆರೋಗ್ಯ ಸರಿ ಯಾಗಿರುತ್ತೆ. ಹೆಚ್ಚುಕಾಲ ನಿಂತರೆ ಯಥಾಪ್ರಕಾರ ಹೊಟ್ಟೆಯಲ್ಲಿ ಸಂಕಟ—ಏನು ತಿಂದರೂ,—"

ಹೇಮನಳಿನಿ ಮಾತು ಬದಲಾಯಿಸಿ, "ನೀವು ನರ್ಮದಾ ನದಿ ಯನ್ನು ನೋಡಿದ್ದೀರಾ ?" ಎಂದಳು.

ರಮೇಶ—"ಇಲ್ಲ. ನಾನು ಅಲ್ಲಿಗೆ ಯಾವಾಗಲೂ ಹೋಗಿಲ್ಲ."

ಹೇಮ—"ನೋಡಬೇಕಾದ ಸ್ಥಳ. ಅಲ್ಲವೇನಪ್ಪಾ?"

ಆನಂದ—"ರಮೇಶ ನಮ್ಮ ಜತೆಯಲ್ಲೇ ಏಕೆ ಬರಬಾರದು? ಹವಾ ಬದಲಾಯಿಸಿದ ಹಾಗೂ ಆಗುತ್ತೆ ಅಮೃತಶಿಲೆಗಳನ್ನೂ ನೋಡಿದ ಹಾಗಾಗುತ್ತೆ."

ರಮೇಶನ ಆಕ್ಷೇಪಣೆಯೇನೂ ಇರಲಿಲ್ಲ. ಗಾಳಿಯಲ್ಲಿ ತೇಲಿ ಹೋದಂತೆ ಮನೆಯನ್ನು ಸೇರಿ ಹೃದಯದ ಬಡಿತವನ್ನು ನಿಲ್ಲಿಸಲು ಬಾಗಿಲು ಮುಚ್ಚಿ ಹಾರ್ಮೋನಿಯಮ್ಮಿನಲ್ಲಿ ಅಪಸ್ವರಗಳನ್ನು ಬಾರಿಸಿದನು. ಹೇಮನಳಿನಿ ಹೊರಟುಹೋಗುವಳೆಂದು ಉದ್ವಿಗ್ನನಾಗಿದ್ದನು. ಈ ಸಂತೋಷದಲ್ಲಿ ಕಲಿತ ಪಾಠವನ್ನೆಲ್ಲಾ ಮರೆತನು.

ಬಾಗಿಲನ್ನು ಯಾರೋ ತಟ್ಟಿ "ಸಧ್ಯ ನಿಲ್ಲಿಸಿ, ರಮೇಶಬಾಬು! ಇದೇನು ಅವಾಂತರ ?" ಎಂದು ಕೂಗಿದರು.

ರಮೇಶನ ಮುಖ ನಾಚಿಕೆಯಿಂದ ಕೆಂಪಾಯಿತು. ಬಾಗಿಲನ್ನು ತೆರೆಯಲು ಅಕ್ಷಯ–"ಹೀಗೆಲ್ಲಾ ನೀವು ಗಲಾಟೆಮಾಡಿದರೆ ಯಾರಾದರೂ ಕೋರ್ಟಿಗೆ ಎಳೆದುಕೊಂಡು ಹೋಗುತ್ತಾರೆ" ಎಂದನು.

ರಮೇಶ ನಕ್ಕು, "ತಪ್ಪಾಯಿತು," ಎಂದನು.

ಅಕ್ಷಯ—"ನೀವೇನೂ ತಪ್ಪು ತಿಳಿದುಕೊಳ್ಳದಿದ್ದರೆ ನಿಮ್ಮನ್ನೊಂದು ವಿಚಾರ ಕೇಳಬೇಕು "

ರಮೇಶ ಸುಮ್ಮನಿದ ನು.

ಅಕ್ಷಯ—"ನಾನು ಹೇಮನಳಿನಿಯ ವಿಚಾರದಲ್ಲಿ ಉದಾಸೀನನಲ್ಲವೆಂದು ನೀವು ತಿಳಿದಿರಬಹುದು."

ರಮೇಶ ಮಾತನಾಡಲಿಲ್ಲ.

ಅಕ್ಷಯ—ಆಕೆಯ ವಿಚಾರದಲ್ಲಿ ನಿಮ್ಮ ಅಭಿಪ್ರಾಯವೇನೆಂದು ತಿಳಿಯಲು ಅಪೇಕ್ಷಿಸುತ್ತೇನೆ.

ಅವನ ಮಾತಾಗಲಿ, ಅವನು ಆಡಿದ ರೀತಿಯಾಗಲಿ, ರಮೇಶನಿಗೆ ರುಚಿಸಲಿಲ್ಲ.

"ಕೆಟ್ಟ ಅಭಿಪ್ರಾಯವಿರುವುದೆಂದು ಅನುಮಾನವೇ?"

ಅಕ್ಷಯ—ನೀವು ವೈದಿಕರು. ನಿಮ್ಮ ತಂದೆ ವೈದಿಕರು. ಬ್ರಹ್ಮ ಸಮಾಜದ ಹುಡುಗಿಯನ್ನು ಮದುವೆಯಾಗುವಿರೆಂಬ ಹೆದರಿಕೆಯಿಂದಲೇ ನಿಮ್ಮ ತಂದೆ ನಿಮ್ಮನ್ನು ಮದುವೆಗೆ ಕರೆದುಕೊಂಡು ಹೋದುದು." ತಾನೇ ರಮೇಶನ ತಂದೆಗೆ ಎಚ್ಚರಿಕೆ ಕೊಟ್ಟದ್ದುದರಿಂದ ಅಕ್ಷಯನಿಗೆ ಈ ವಿಚಾರ ಚೆನ್ನಾಗಿ ತಿಳಿದಿತ್ತು. ಸ್ವಲ್ಪಹೊತ್ತು ರಮೇಶ ತಲೆಯೆತ್ತಿ ಅಕ್ಷಯನ ಮುಖವನ್ನು ನೋಡಲು ಅಸಮರ್ಥನಾದನು.

ಅಕ್ಷಯ—ನಿಮ್ಮ ತಂದೆಯ ಸಾವಿನಿಂದ ನೀವು ಸ್ವತಂತ್ರರಾದಿರೋ?—ಆತನ ಇಷ್ಟವನ್ನು,—"

ನಡುವೆ ಬಾಯಿ ಹಾಕಿ ರಮೇಶ, "ಅಕ್ಷಯಬಾಬು! ಬೇರೆ ವಿಚಾರದಲ್ಲಿ ನಿಮ್ಮ ಬುದ್ಧಿವಾದವನ್ನು ಕೇಳುತ್ತೇನೆ. ನಮ್ಮ ತಂದೆಯ ಮಾತನ್ನೆತ್ತಲು ನಿಮಗೆ ಅಧಿಕಾರವಿಲ್ಲ."

ಅಕ್ಷಯ—"ಸರಿ! ಬಿಟ್ಟುಬಿಡೋಣ. ಹೇಮನಳಿನಿಯನ್ನು ಮದುವೆಯಾಗಲು ಅಪೇಕ್ಷಿಸುವಿರಾ? ಸಮರ್ಥರಾಗಿದ್ದೀರ?"

ರಮೇಶನಿಗೆ ತಾಳ್ಮೆ ತಪ್ಪಿತು. "ನೀವು ಆನಂದಬಾಬುವಿನ ಸ್ನೇಹಿತರಾಗಿರಬಹುದು. ಇಷ್ಟು ಮಾತನಾಡುವ ಪರಿಚಯ ನನ್ನೊಡನೆ ಇಲ್ಲ. ಆ ವಿಚಾರವನ್ನೂ ಬಿಟ್ಟುಬಿಡಿ."

ಅಕ್ಷಯ–ನಾನೂ ಮಾತನಾಡದೆ, ನೀವೂ ಹೀಗೆಯೇ ಸುಖವಾಗಿ ಕಾಲಯಾಪನೆ ಮಾಡಬಹುದಾಗಿದ್ದರೆ ತಂಟೆಯೇ ಇರಲಿಲ್ಲ. ಆದರೆ ನಿಮ್ಮಂಥ ಮುಂದಾಲೋಚನೆಯಿಲ್ಲದ ತರುಣರು ಸುಖಪಡಲು ಸಮಾಜ ಒಪ್ಪುವುದಿಲ್ಲ. ನಿಮಗೆ ಸಮಾಜದ ಭೀತಿ ಇಲ್ಲದೆ ಇರಬಹುದು. ಆದರೆ ಹೇಮನಳಿನಿಯ ಮರ್ಯಾದೆಯ ಕಡೆಯೂ ಗಮನವಿರಬೇಕು.

ರಮೇಶ—ನಿಮಗೆ ತುಂಬಾ ತೊಂದರೆಯಾಯಿತು. ನಾನು ಯೋಚಿಸಿ ಸರಿಯಾಗಿ ನಿರ್ಧರಿಸುತ್ತೇನೆ. ನೀವಿನ್ನು ಚಿಂತಿಸಬೇಡಿ.

ಅಕ್ಷಯ—ಸಂತೋಷ! ನೀವೊಂದು ನಿರ್ಧಾರಕ್ಕೆ ಬರುವಿರೆಂಬುದು ತುಂಬಾ ಒಳ್ಳೆಯ ವರ್ತಮಾನ. ಸ್ವಲ್ಪ ಮೊದಲೇ ಈ ಆಲೋಚನೆ ಹೊಳೆದಿದ್ದರೆ ಚೆನ್ನಾಗಿತ್ತು. ನಾನಿನ್ನು ಆ ಮಾತನ್ನೆತ್ತುವುದಿಲ್ಲ. ನಿಮ್ಮ ಸಂಗೀತಕ್ಕೆ ಅಡಚಣೆಯುಂಟುಮಾಡಿದ್ದಕ್ಕೆ ಕ್ಷಮಿಸಿ" ಎಂದು ಹೇಳಿ ಹೊರಟು ಹೋದನು. ರಮೇಶನ ಮನಸ್ಸು ಸ್ವರವನ್ನಾಗಲಿ ಅಪಸ್ವರ ವನ್ನಾಗಲಿ ನುಡಿಸುವ ಸ್ಥಿತಿಯಲ್ಲಿರಲಿಲ್ಲ.

ತಲೆಯ ಕೆಳಗೆ ಕೈಯನ್ನಿರಿಸಿಕೊಂಡು ಚಾಪೆಯ ಮೇಲೆ ಬಹಳ ಹೊತ್ತು ಬಿದ್ದಿದ್ದನು. ಐದು ಘಂಟೆ ಬಾರಿಸಿದಾಗ ಗಾಬರಿಯಿಂದ ಎದ್ದನು. ಮದುವೆಯ ವಿಚಾರದಲ್ಲಿ ನಿರ್ಧರವು ಹೊಳೆಯದಿದ್ದರೂ, ಪಕ್ಕದ ಮನೆಗೆ ಚಹಕ್ಕೆ ಹೋಗುವ ವಿಚಾರದಲ್ಲಿ ಏನೂ ಅನುಮಾನ ವಿರಲಿಲ್ಲ.

ಹೇಮನಳಿನಿ ಅವನನ್ನು ನೋಡಿ, "ಮೈ ಸರಿಯಾಗಿಲ್ಲವೇ?" ಎಂದಳು.

"ಏನೂ ಇಲ್ಲ."

ಆನಂದ ಬಾಬು—"ಪಿತ್ಥದಿಂದ ಅಜೀರ್ಣವಾಗಿದೆ, ನಾನು ತೆಗೆದು ಕೊಳ್ಳುವ ಮಾತ್ರೆಯೊಂದನ್ನು ತೆಗೆದುಕೋ."

ಹೇಮನಳಿನಿ ನಕ್ಕು—"ಎಲ್ಲರೂ ನುಂಗಬೇಕು! ಒಬ್ಬರಿಗೂ ಆ ಮಾತ್ರೆಗಳಿಂದ ಗುಣವಾದದ್ದನ್ನು ನಾನು ಕಾಣೆ."

ಆನಂದ—"ಕೆಡಕಾಗಲಿಲ್ಲವಲ್ಲ! ಬೇರೆ ಯಾವ ಮಾತ್ರೆಯೂ ಇದ ರಷ್ಟು ಫಲಕಾರಿಯಲ್ಲವೆಂದು ಅನುಭವದಿಂದ ಹೇಳ ಬಲ್ಲೆ."

ಹೇಮ—"ಯಾವ ಮಾತ್ರೆಯನ್ನು ತೆಗೆದುಕೊಂಡರೂ ಹೊಸದರಲ್ಲಿ ಅದರ ಸಮಾನವಿಲ್ಲವೆಂದೇ ಹೇಳುತ್ತೀರಿ."

ಆನಂದ—"ನನ್ನ ಮಾತಿನಲ್ಲಿ ನಿಮಗೆ ನಂಬಿಕೆಯಿಲ್ಲ. ಅಕ್ಷಯನನ್ನು ಕೇಳಿದರೆ ತಿಳಿಯುತ್ತದೆ.

ಹೇಮನಳಿನಿ ಮಾತು ನಿಲ್ಲಿಸಿದಳು. ಆದರೆ ಅಷ್ಟು ಹೊತ್ತಿಗೆ ಸರಿಯಾಗಿ ಅಕ್ಷಯ ಬಂದು, "ಆನಂದಬಾಬು, ನನಗಿನ್ನೊಂದು ಮಾತ್ರೆ ಕೊಡಿ. ಬಹಳ ಒಳ್ಳೆಯ ಮಾತ್ರೆಗಳು" ಎಂದನು. ಗೆದ್ದ ನೋಟದಿಂದ ಆನಂದಬಾಬು ಮಗಳಕಡೆ ನೋಡಿದನು.

## ಅಧ್ಯಾಯ ೧೨

ಆನಂದಬಾಬು ಮಾತ್ರೆಕೊಟ್ಟು ಅಕ್ಷಯನನ್ನು ಕಳುಹಿಸಿಬಿಡಲಿಲ್ಲ. ಅವನೂ ಹೊರಡುವ ಆತುರದಲ್ಲಿರಲಿಲ್ಲ. ರಮೇಶನ ಕಡೆ ಅಸಮಾಧಾನದ ದೃಷ್ಟಿಯಿಂದ ನೋಡುತ್ತಿದ್ದುದರಿಂದ ಅವನ ಮನಸ್ಸು ಅಸ್ವಸ್ಥವಾಯಿತು. ಹೇಮನಳಿನಿ ಪ್ರಯಾಣದ ಉತ್ಸಾಹದಲ್ಲಿದ್ದಳು. ಅದರ ವಿವರಗಳನ್ನು ಚರ್ಚಿಸಿ, ಓದಲು ಬೇಕಾದ ಪುಸ್ತಕಗಳ ಪಟ್ಟಿಯನ್ನು ರಮೇಶನ ಸಹಾಯದಿಂದ ತಯಾರಿಸಬೇಕಾಗಿತ್ತು. ಅದರಿಂದಲೇ ರಮೇಶನನ್ನು ಬೇಗ ಬರಲು ಹೇಳಿದ್ದಳು. ಆದರೆ ಅವನು ಎಂದಿಗಿಂತ ಹೊತ್ತಾಗಿ ಬಂದುದೇ ಅಲ್ಲದೆ ಧಾರಾಳವಾಗಿ ಮಾತನ್ನೂ ಆಡಲಿಲ್ಲ. ಹೇಮನಳಿನಿ ಅಸಮಾಧಾನದಿಂದ ಮೆಲ್ಲನೆ, "ಏಕಿಷ್ಟು ಹೊತ್ತುಮಾಡಿದಿರಿ?" ಎಂದಳು. ರಮೇಶನ ಲಕ್ಷ್ಯವು ಎಲ್ಲಿಯೋ ಇತ್ತು. ನಿಧಾನವಾಗಿ, "ಹೌದು. ಸ್ವಲ್ಪ ಹೊತ್ತಾಯಿತು" ಎಂದನು.

ಹೇಮನಳಿನಿ ಆ ದಿನ ತನ್ನ ಅಲಂಕಾರವನ್ನು ಬೇಗ ಪೂರೈಸಿಕೊಂಡಿದ್ದಳು. ಬಟ್ಟೆ ಬದಲಾಯಿಸಿ ತಲೆ ಬಾಚಿಕೊಂಡು ಗಡಿಯಾರವನ್ನು ನೋಡುತ್ತಾ ಕುಳಿತಿದ್ದಳು. ರಮೇಶನ ಗಡಿಯಾರ ನಿಧಾನವಿರಬಹುದೆಂದುಕೊಂಡಳು. ಆ ಆಸೆ ಬರಿದಾದ ಮೇಲೆ ಹೊಲಿಗೆಯನ್ನು ಹಿಡಿದು ಕಿಟಕಿಯಲ್ಲಿ ಕುಳಿತಳು. ಅವನಿಗಾಗಿ ಇಷ್ಟು ಕಾದರೂ ರಮೇಶನು

ತಡಮಾಡಿದುದಕ್ಕೆ ಕಾರಣವನ್ನು ಕೂಡ ಹೇಳಲಿಲ್ಲ. ಬೇಗ ಬರುವುದಾಗಿ ಹೇಳಿದ್ದ ವಿಚಾರವನ್ನೇ ಮರೆತಿದ್ದನು.

ಚಹಾ ಕುಡಿದಾದಮೇಲೆ ರಮೇಶನ ಗಮನವನ್ನೆಳೆಯಲು ಮೇಜಿನ ಮೇಲಿದ್ದ ಕೆಲವು ಪುಸ್ತಕಗಳನ್ನು ತೆಗೆದುಕೊಂಡು ಹೊರಡಲನುವಾದಳು. ರಮೇಶನು ಎಚ್ಚತ್ತು, "ಎಲ್ಲಿಗೆ ತೆಗೆದುಕೊಂಡು ಹೋಗುತ್ತಿದ್ದೀ? ಪುಸ್ತಕಗಳನ್ನು ಓದಿಸಬೇಕಾಗಿತ್ತಲ್ಲವೆ?" ಎಂದನು.

ಹೇಮನಳಿನಿಯ ತುಟಿಗಳು ಅದುರುತ್ತಿದ್ದುವು. ಕಣ್ಣೀರನ್ನು ತಡೆಯುವುದೇ ಕಷ್ಟವಾಗಿತ್ತು. "ಪರವಾಯಿಲ್ಲ. ಈಗ ಆಗುವುದಿಲ್ಲ" ಎಂದು ಮಲಗುವ ಕೊಠಡಿಗೆ ಬೇಗ ಹೋಗಿ ಪುಸ್ತಕಗಳನ್ನು ಕೆಳಗೆ ಹಾಕಿದಳು.

ಅವಳು ಹೊರಟುಹೋದುದರಿಂದ ರಮೇಶನ ಅಸಮಾಧಾನ ಹೆಚ್ಚಿತು. ಅಕ್ಷಯನು ಒಳಗೊಳಗೇ ನಗುತ್ತ, "ಸ್ವಸ್ಥವಾಗಿಲ್ಲವೆ, ರಮೇಶ ಬಾಬು?" ಎಂದನು.

ರಮೇಶನ ಉತ್ತರ ಯಾರಿಗೂ ಕೇಳಿಸಲಿಲ್ಲ. ಆನಂದಬಾಬು, "ನೋಡಿದರೆ ಹಾಗೆಯೇ ತೋರುತ್ತದೆ" ಎಂದನು.

ಅಕ್ಷಯ "ರಮೇಶನಂತಹವರು ಆರೋಗ್ಯದ ಕಡೆ ಗಮನ ಕೊಡುವುದಿಲ್ಲ. ಜ್ಞಾನಪ್ರಪಂಚದಲ್ಲಿಯೇ ಇರುವ ಅವರು ಅಜೀರ್ಣವೆಂದು ಒಪ್ಪಿಕೊಳ್ಳಲು ಕೂಡ ನಾಚುತ್ತಾರೆ."

ಆನಂದಬಾಬು, ವೇದಾಂತಿಗಳಿಗೂ ಒಳ್ಳೆಯ ಜೀರ್ಣಶಕ್ತಿ ಅವಶ್ಯಕವೆಂದು ವಿವರಿಸಲಾರಂಭಿಸಿದನು. ರಮೇಶನಿಗೆ ಮನಸ್ಸಿನ ಉದ್ವೇಗವನ್ನು ತಡೆದುಕೊಳ್ಳುವುದೇ ಕಷ್ಟವಾಗಿತ್ತು.

ಅಕ್ಷಯ—"ಆನಂದಬಾಬುವಿನ ಮಾತ್ರೆಯೊಂದನ್ನು ನುಂಗಿ ಬೇಗ ಮಲಗಿದರೆ ಸರಿಹೋಗುತ್ತದೆ."

ರಮೇಶ—"ನಾನು ಆನಂದಬಾಬುವಿನೊಡನೆ ಮಾತನಾಡಲು ಕಾದಿದ್ದೇನೆ."

ಅಕ್ಷಯ ಎದ್ದು—"ಮೊದಲೇ ಹೇಳಬಾರದಾಗಿತ್ತೆ. ಇಷ್ಟು ಹೊತ್ತು ಕಾದಿದ್ದು ಮುಖದಮೇಲೆ ಹೊಡೆದಹಾಗೆ ಹೇಳಬೇಕೆ?" ಎಂದು ಹೊರಟುಹೋದನು.

ರಮೇಶ ತಲೆ ತಗ್ಗಿಸಿಕೊಂಡು–"ಆನಂದಬಾಬು, ನನ್ನನ್ನು ನಿಮ್ಮವ ನೆಂದೇ ತಿಳಿದಿದ್ದೀರಿ. ಅದಕ್ಕಾಗಿ ನಾನೆಷ್ಟು ಕೃತಜ್ಞನೆಂಬುದನ್ನು ಹೇಳ ಲಾರೆ."

ಆನಂದಬಾಬು—"ಅದರಲ್ಲೇನು! ನೀನು ನಮ್ಮ ಜೋಗೇಂದ್ರನ ಸ್ನೇಹಿತ. ಅವನ ಹಾಗೆಯೇ ನೀನೂ!"

ರಮೇಶನಿಗೆ ಮುಂದೆ ಮಾತನಾಡಲು ತೋರಲಿಲ್ಲ. ಆನಂದ ಬಾಬು, "ನಿನ್ನಂಥಾ ಒಳ್ಳೆ ಹುಡುಗನ ಪರಿಚಯವಾದುದು ನಮ್ಮ ಅದೃಷ್ಟ," ಎಂದನು.

ಆದರೂ ರಮೇಶನಿಗೆ ಮಾತು ಹೊರಡಲಿಲ್ಲ. "ಜನರೆಲ್ಲಾ ನಿನ್ನ ಹೆಸರಿನೊಡನೆ ಹೇಮನಳಿನಿಯ ಹೆಸರನ್ನು ಸೇರಿಸುತ್ತಾರೆ. ಮದುವೆಯ ವಯಸ್ಸಾದ ಹುಡುಗಿಯ ವಿಚಾರದಲ್ಲಿ ಹುಷಾರಾಗಿರಬೇಕೆನ್ನುತ್ತಾರೆ. ಆದರೆ ನಾನು ಎಲ್ಲರಿಗೂ–"ರಮೇಶನು ಅಂತಹ ಮೋಸಗಾರನಲ್ಲ— ಎಂದು ಹೇಳುತ್ತೇನೆ," ಎಂದು ಆನಂದಬಾಬು ಮಾತನ್ನು ಮುಂದು ವರಿಸಿದನು.

ರಮೇಶ—"ನನ್ನ ವಿಚಾರವನ್ನೆಲ್ಲಾ ತಿಳಿದಿದ್ದೀರಿ. ಹೇಮನಳಿನಿಗೆ ತಕ್ಕ ವರನೆಂದು ನಿಮಗೆ ತೋರಿದರೆ—

ಆನಂದ—"ನಾನು ಮನಸ್ಸುಮಾಡಿಯೇ ಇದ್ದೇನೆ. ನೀನಿನ್ನೂ ತಂದೆಗಾಗಿ ಕೊರಗುತ್ತಿದ್ದುದರಿಂದ ನಾನೂ ಸುಮ್ಮನಿದ್ದೆ. ಜನರ ಬಾಯನ್ನು ಮುಚ್ಚಿಸಲು ಇನ್ನು ತಡ ಬೇಡವಲ್ಲವೆ?"

ರಮೇಶ—"ನಿಮ್ಮಿಷ್ಟ. ನಿಮ್ಮ ಮಗಳನ್ನು ಕೇಳಬೇಕಲ್ಲ."

ಆನಂದ—"ನಿಜ.. ಆದರೆ ಅವಳಿಷ್ಟವನ್ನು ನಾನು ಬಲ್ಲೆ. ನಾಳೆ ಮಾತಾಡಿ ಎಲ್ಲಾ ಏರ್ಪಾಟೂ ಮಾಡೋಣ."

ರಮೇಶ—"ಹೊತ್ತಾಯಿತು, ಮನೆಗೆ ಹೊರಡುತ್ತೇನೆ."

ಆನಂದ—"ಸ್ವಲ್ಪ ತಾಳು. ಜಬ್ಬಲ್‌ಪುರಕ್ಕೆ ಹೋಗುವ ಮೊದಲೇ ಮದುವೆಯಾಗಿ ಹೋಗಲಿ."

ರಮೇಶ—"ಬಹಳ ಬೇಗ ಆಯಿತಲ್ಲವೆ."

ಆನಂದ—"ಹೌದು. ಹತ್ತೇ ದಿನ. ಮುಂದಿನ ಭಾನುವಾರ

ಮದುವೆಯಾದರೆ ಪ್ರಯಾಣ ಸಿದ್ಧತೆಗೆ ಮೂರು ನಾಲ್ಕು ದಿನಗಳಿರುತ್ತವೆ. ನಿನ್ನನ್ನು ಅವಸರಪಡಿಸಬೇಕೆಂಬ ಅಭಿಪ್ರಾಯವಲ್ಲ. ಆದರೆ ನನ್ನ ಆರೋಗ್ಯದ ಯೋಚನೆ ಮಾಡಬೇಕಾಗಿದೆ."

ರಮೇಶನು ಒಪ್ಪಿ, ಆನಂದಬಾಬುವಿನ ಮಾತ್ರೆಯೊಂದನ್ನು ನುಂಗಿ ಮನೆಗೆ ಹೋದನು.

## ಅಧ್ಯಾಯ ೧೩

ಕಮಲೆಯ ಪಾಠಶಾಲೆಗೆ ರಜಾ ಪ್ರಾರಂಭವಾಗಲು ಕೆಲವೇ ದಿನಗಳು ಉಳಿದಿದ್ದುವು. ಆದರೆ ಆಗಲೂ ಅವಳು ಅಲ್ಲಿಯೇ ಇರುವಂತೆ ರಮೇಶನು ಮುಖ್ಯೋಪಾಧ್ಯಾಯಿನಿಯೊಡನೆ ಗೊತ್ತುಮಾಡಿದ್ದನು.

ಆನಂದಬಾಬುವಿನೊಡನೆ ಮಾತನಾಡಿದ ಮಾರನೆಯ ದಿನ ಗಾಳಿ ಸಂಚಾರಕ್ಕೆ ಮೈದಾನದ ಕಡೆ ಹೊರಟನು. ಮದುವೆಯಾಗುವ ಮೊದಲು ಹೇಮನಳಿನಿಗೆ ಕಮಲೆಯ ವೃತ್ತಾಂತವನ್ನು ತಿಳಿಸುವುದು, ಕಮಲೆಗೆ ಅನಂತರ ವಿವರಿಸಬಹುದು; ಆಗ ಯಾರಿಗೂ ಅಸಮಾಧಾನವಿರುವುದಿಲ್ಲ. ಹೇಮನಳಿನಿ ಕಮಲೆಯ ಗೆಳತಿಯಾಗಿ ಮನೆಯಲ್ಲಿ ಆಸರೆ ಕೊಡುವಳು. ಹೊಸ ಸ್ಥಳವಾದ ಹಜಾರಿಬಾಗ್‌ನಲ್ಲಿ ವಕೀಲ ವೃತ್ತಿಯನ್ನಾರಂಭಿಸಬಹುದು.

ಹಿಂದಿರುಗುವಾಗ ಆನಂದಬಾಬುವಿನ ಮನೆಗೆ ಹೋದನು. ಹೇಮನಳಿನಿ ಮೆಟ್ಟಲನ್ನಿಳಿದು ಬರುತ್ತಿದ್ದಳು. ಮೊದಲಾಗಿದ್ದರೆ ಇಬ್ಬರೂ ಮಾತಿಗೆ ನಿಲ್ಲುತ್ತಿದ್ದರು. ಈಗ ಹೇಮನಳಿನಿಯ ಮುಖ ಕೆಂಪಾಗಿ ಪ್ರಾತಃಕಾಲದ ಕೆಂಬೆಳಕಿನಂತಿದ್ದ ಮಂದಹಾಸವು ಅದರ ಮೇಲೆ ಸುಳಿದು ಹೋಯಿತು. ತಲೆತಗ್ಗಿಸಿಕೊಂಡು ಓಡಿಹೋದಳು.

ರಮೇಶನು ತನ್ನ ಕೊಠಡಿಗೆ ಹಿಂತಿರುಗಿ ಹೇಮನಳಿನಿ ಕಲಿಸಿದ್ದ ಒಂದು ಪದವನ್ನು ಪುನಃಪುನಃ ಬಾರಿಸತೊಡಗಿದನು. ಅದು ಬೇಸರವಾದ ಮೇಲೆ ಕವನ ಸಂಗ್ರಹವನ್ನೊಂದನ್ನು ಕೈಗೆತ್ತಿಕೊಂಡನು. ಆದರೆ ಆಗಿನ ಸ್ಥಿತಿಯಲ್ಲಿ ಯಾವ ಕವನವೂ ತನ್ನ ಪ್ರೇಮದ ಮಟ್ಟವನ್ನು ಮುಟ್ಟಲಾರದೆಂದು ಅವನಿಗೆ ತೋರಿತು.

ಹೇಮನಳಿನಿಯೂ ಆದಿನ ಸ್ವರ್ಗ ಸುಖವನ್ನನುಭವಿಸುತ್ತಿದ್ದಳು. ಮಧ್ಯಾಹ್ನದ ವೇಳೆಗೆ ಮನೆಗೆಲಸಗಳನ್ನು ಮುಗಿಸಿಕೊಂಡು ಕೊಠಡಿಯಲ್ಲಿ ಬಾಗಿಲು ಹಾಕಿಕೊಂಡು ಹೊಲಿಯಲಾರಂಭಿಸಿದಳು. ಜೀವನ ಸೌಖ್ಯವನ್ನು ಕಂಡುಕೊಂಡ ಪರಮಾನಂದ ಅವಳ ಜೀವನವನ್ನು ತುಂಬಿತ್ತು.

ಚಹಾಸಮಯಕ್ಕೆ ಸ್ವಲ್ಪ ಮೊದಲೇ ಪುಸ್ತಕವನ್ನೂ ಹಾರ್ಮೋನಿಯಮ್ಮನ್ನೂ ಬಿಸುಟು ರಮೇಶ ಆನಂದಬಾಬುವಿನ ಮನೆಗೆ ಹೋದನು. ಪ್ರತಿದಿನವೂ ಸಂಭ್ರಮದಿಂದ ಇದಿರುಗೊಳ್ಳುತ್ತಿದ್ದ ಹೇಮನಳಿನಿಯಿನ್ನೂ ಕೊಠಡಿಯಲ್ಲೇ ಇದ್ದಳು. ಆನಂದಬಾಬು ಎಂದಿನಂತೆ ಮೇಜಿನ ಮುಂದೆ ಬಂದು ಕುಳಿತನು ರಮೇಶ ಬಾಗಿಲಕಡೆ ನೋಡುತ್ತಿದ್ದನು.

ಹೆಜ್ಜೆಯ ಸದ್ದಾಯಿತು. ಆದರೆ ಅಕ್ಷಯ ಬಂದು ರಮೇಶನನ್ನು ವಿಶ್ವಾಸದಿಂದ ಮಾತನಾಡಿಸಿದನು.

"ನಾನು ಈಗತಾನೆ ನಿಮ್ಮ ಕೊಠಡಿಗೆ ಹೋಗಿದ್ದೆ." ರಮೇಶನಿಗೆ ಗಾಬರಿಯಾಯಿತು. ಅಕ್ಷಯನು ನಗುತ್ತಾ "ಭಯವೇನೂ ಇಲ್ಲ. ಸಂತೋಷದ ಸುದ್ದಿಯನ್ನು ಕೇಳಿ ಅಭಿನಂದನೆಗಳನ್ನು ತಿಳಿಸಲು ಬಂದೆ."

ಆನಂದಬಾಬು, ಹೇಮನಳಿನಿ ಇಲ್ಲದುದನ್ನು ನೋಡಿ ಕೂಗಿದನು. ಉತ್ತರ ಬರದಿರಲು ತಾನೇ ಮಹಡಿಯ ಮೇಲೆ ಹೋಗಿ, "ಹೇಮಾ, ಏನಿದು? ಇನ್ನೂ ಹೊಲಿಯುತ್ತಿದ್ದೀ! ಟೀ ಸಿದ್ಧವಾಗಿದೆ. ಅಕ್ಷಯ ರಮೇಶ ಕಾದಿದ್ದಾರೆ."

"ನನ್ನ ಟೀ ಇಲ್ಲಿಗೇ ಕಳುಹಿಸಪ್ಪಾ. ಇದನ್ನ ಹೊಲಿದು ಮುಗಿಸಬೇಕು."

"ನೀನು ಯಾವಾಗಲೂ ಹೀಗೆಯೇ. ಏನಾದರೂ ಪ್ರಾರಂಭಿಸಿದರೆ ಅದನ್ನೇ ಹಿಡಿದುಬಿಡುತ್ತೀ. ಪರೀಕ್ಷೆಗೆ ಓದುವಾಗ ಪುಸ್ತಕವನ್ನು ಬಿಟ್ಟು ಏಳುತ್ತಿರಲಿಲ್ಲ. ಈಗ ಹೊಲಿಗೆ! ಹಾಗೆ ಮಾಡಬಾರದು. ಬಂದು ಟೀ ಕುಡಿದು ಹೋಗು." ಎಂದು ಅವಳ ಕೈ ಹಿಡಿದು ಎಳೆದುಕೊಂಡು ಬಂದನು. ತಲೆಯೆತ್ತದೆ ಅವಳು ಚಹವನ್ನು ಲೋಟಗಳಿಗೆ ಬಗ್ಗಿಸಲು ಆರಂಭಿಸಿದಳು.

"ಇದೇನಿದು, ಹೇಮಾ? ನನಗೆ ಸಕ್ಕರೆ ಹಾಕುತ್ತಿದ್ದೀ! ನಾನು ಹಾಕಿಕೊಳ್ಳುವುದಿಲ್ಲವೆಂದು ತಿಳಿಯದೆ!"

ಅಕ್ಷಯ ನಗುತ್ತಾ. "ಈದಿನ ಆಕೆ ಧಾರಾಳವಾಗಿ ಎಲ್ಲರಿಗೂ ಸಕ್ಕರೆ ಹಂಚುತ್ತಾರೆ" ಎಂದನು.

ಅಕ್ಷಯ ಹೇಮನಳಿನಿಯನ್ನು ಹಾಸ್ಯಮಾಡುವುದು ರಮೇಶನಿಗೆ ಇಷ್ಟವಾಗಲಿಲ್ಲ. ಮದುವೆಯಾದಮೇಲೆ ಅವನನ್ನು ತನ್ನ ಮನೆಗೆ ಸೇರಿಸ ಕೂಡದೆಂದು ನಿರ್ಧರಿಸಿದನು.

ಕೆಲವು ದಿನಗಳ ನಂತರ ಎಲ್ಲರೂ ಚಹಾಮೇಜಿನ ಬಳಿ ನೇರಿದಾಗ ಅಕ್ಷಯ, "ರಮೇಶಬಾಬು, ನಿಮ್ಮ ಹೆಸರನ್ನು ಬದಲಾಯಿಸಿಕೊಳ್ಳುವುದು ಒಳ್ಳೆಯದು" ಎಂದನು.

ರಮೇಶನಿಗೆ ಅಕ್ಷಯನ ಹಾಸ್ಯ ರುಚಿಸುತ್ತಿರಲಿಲ್ಲ. "ಏತಕ್ಕೆ?" ಎಂದನು. ಒಂದು ವೃತ್ತಾಂತಪತ್ರಿಕೆಯನ್ನು ತೆಗೆದು ಅಕ್ಷಯ, "ಇಲ್ಲಿ ನೋಡಿ! ರಮೇಶನೆಂಬ ಒಬ್ಬ ಹುಡುಗನು ಬೇರೊಬ್ಬನನ್ನು ತನ್ನ ಹೆಸರಿನಲ್ಲಿ ಉತ್ತರಗಳನ್ನು ಬರೆಯುವಂತೆ ಪ್ರೇರಿಸಿ ಉತ್ತೀರ್ಣನಾದನು. ಆದರೆ ಕೊನೆಗೆ ಸಿಕ್ಕಿಬಿದ್ದ." ತಟ್ಟನೆ ಬದಲುತ್ತರ ಕೊಡಲು ರಮೇಶನಿಗೆ ತೋರುವುದಿಲ್ಲವೆಂದು ತಿಳಿದಿದ್ದ ಹೇಮನಳಿನಿ, ತಾನೇ, "ಹಾಗಾದರೆ ಸೆರೆಮನೆಗಳ ತುಂಬ ಅಕ್ಷಯಬಾಬುಗಳಿರಬಹುದು," ಎಂದಳು.

ಅಕ್ಷಯ, "ನಾನೇನೋ ಎಚ್ಚರಿಕೆ ಕೊಡೋಣವೆಂದು ವಿಶ್ವಾಸದಿಂದ ಹೇಳಿದರೆ ನಿಮಗೆ ಕೋಪ ಬಂತು. ಹಾಗಾದರೆ ಕಥೆಯನ್ನೆಲ್ಲಾ, ಹೇಳುತ್ತೇನೆ. ನನ್ನ ತಂಗಿ, ಶರತ್ ಶಾಲೆಗೆ ಹೋಗುತ್ತಾಳೆ. ನಿನ್ನೆ 'ರಮೇಶಬಾಬುವಿನ ಹೆಂಡತಿ ನಮ್ಮ ಶಾಲೆಯಲ್ಲಿ ಓದುತ್ತಾಳೆ' ಎಂದಳು. ನಾನು—'ಹುಚ್ಚಿ! ಎಷ್ಟು ಜನ ರಮೇಶಬಾಬುಗಳಿದ್ದಾರೋ!' ಎಂದೆ. ಅವಳು—'ಯಾರೋ, ಏನೋ! ಅಂತೂ ಹೆಂಡತಿಯೆಂದರೆ ಪ್ರೀತಿಯಿಲ್ಲ. ಎಲ್ಲಾ ಹುಡುಗಿಯರೂ ರಜೆಗೆ ಮನೆಗೆ ಹೋಗುವಾಗ ಅವಳನ್ನು ಮಾತ್ರ ಅಲ್ಲೇ ಬಿಟ್ಟಿರುವ ಏರ್ಪಾಟು ಮಾಡಿದ್ದಾನೆ. ಪಾಪ! ಅತ್ತೂ ಅತ್ತೂ ಅವಳಿಗೆ ಸಾಕಾಯಿತು— ಎಂದಳು'." ಆನಂದಬಾಬು ನಗುತ್ತಾ "ಅಕ್ಷಯ್! ನಿನಗೆ ಹುಚ್ಚು! ಯಾರೋ ರಮೇಶನು ಹೆಂಡತಿಯನ್ನು

ಹಿಂಸಿಸಿದನೆಂದು ನಮ್ಮ ರಮೇಶನೇಕೆ ಹೆಸರು ಬದಲಾಯಿಸಬೇಕು?" ಆದರೆ ರಮೇಶ ಕೊಠಡಿಯನ್ನು ಬಿಟ್ಟು ಹೊರಟನು.

ಅಕ್ಷಯನೂ ಹಿಂದೆ ಹೋಗಿ, "ಎಲ್ಲಿಗೆ ಹೊರಟಿರಿ, ರಮೇಶಬಾಬು ತಮಾಷೆಗೆ ಆಡಿದ ಮಾತಿನಿಂದ ಕೋಪ ಬಂತೆ?" ಎಂದನು.

ಹೇಮನಳಿನಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಲು, ಆನಂದಬಾಬು "ಇದೇನು ಹೇಮಾ? ಅಳುವುದು ಏತಕ್ಕೆ," ಎಂದನು.

ಹೇಮನಳಿನಿ, "ಈ ಅಕ್ಷಯ ನಮ್ಮ ಮನೆಗೆ ಬಂದವರನ್ನು ಹೀಗೇಕೆ ಅಪಹಾಸ್ಯಮಾಡುವುದು?" ಎಂದಳು.

ಅವನು ತಮಾಷೆಗೆ ಆಡಿದ ಮಾತನ್ನು ಮನಸ್ಸಿಗೆ ಹಚ್ಚಿಕೊಳ್ಳುವುದೆ?"

"ಅಂತಹ ಹಾಸ್ಯ ನನಗಾಗುವುದಿಲ್ಲ" ಎಂದು ಹೇಮನಳಿನಿ ಮಹಡಿಯ ಮೇಲಕ್ಕೆ ಹೊರಟುಹೋದಳು.

ಕಲ್ಕತ್ತೆಗೆ ಬಂದಾರಭ್ಯ ಕಮಲೆಯ ಗಂಡನನ್ನು ಹುಡುಕಲು ರಮೇಶ ಸರ್ವ ಪ್ರಯತ್ನವನ್ನೂ ಮಾಡಿದ್ದನು. ಧೋಬಪುಕೂರನ್ನು ಕಂಡುಹಿಡಿದು ಅವಳ ಚಿಕ್ಕಪ್ಪನಿಗೆ ಕಾಗದ ಬರೆದಿದ್ದನು. ಹೇಳಿದ ಘಟನೆ ನಡೆದ ಮಾರನೆಯ ದಿನ ಉತ್ತರ ಬಂತು. ತಾರಿಣೀಚರಣನು— "ಅನಾಹುತವಾದಮೇಲೆ ಕಮಲೆಯ ಗಂಡ ನಳಿನಾಕ್ಷನ ಸುದ್ದಿಯೇ ತಿಳಿಯಲಿಲ್ಲ. ಆತನು ರಂಗಪುರದ ವೈದ್ಯ. ಅಲ್ಲಿ ವಿಚಾರಿಸಿದರೂ ಪತ್ತೆಯಿಲ್ಲ." ಎಂದು ಬರೆದಿದ್ದನು.

ಕಮಲೆಯ ಗಂಡ ಸತ್ತನೆಂದೇ ರಮೇಶ ನಿರ್ಧರಿಸಿದನು. ಆ ಟಪಾಲಿನಲ್ಲಿಯೇ ಅನೇಕ ಅಭಿನಂದನಾಪತ್ರಗಳೂ ಬಂದುವು—ರಮೇಶನಿಗೆ ಮದುವೆಯಾಗುವುದೆಂದು ಕೇಳಿ ಅವನ ಮಿತ್ರರು ಬರೆದಿದ್ದರು. ಕೆಲವರು ಹಾಸ್ಯಮಾಡಿ, ಔತಣಕ್ಕೆ ಕರೆಯಬೇಕೆಂದು ಬರೆದಿದ್ದರು. ಆ ವೇಳೆಗೆ ಆನಂದಬಾಬುವಿನ ಆಳು ಒಂದು ಕಾಗದವನ್ನು ತಂದನು. ವಿಳಾಸದ ಅಕ್ಷರಗಳನ್ನು ಕಂಡು ರಮೇಶನ ಹೃದಯ ಬಡಿದುಕೊಳ್ಳಲಾರಂಭಿಸಿತು. ಹೇಮನಳಿನಿ ಸಂದೇಹದಿಂದ ಕಾಗದ ಬರೆದಿರಬಹುದೆಂದುಕೊಂಡನು.

ಕಾಗದ ಸಂಕ್ಷೇಪವಾಗಿತ್ತು. "ಬೆಳಗ್ಗೆ ನಿಮಗಾಗಿ ಕಾದಿದ್ದೆ.

ಅಕ್ಷಯನ ಮಾತುಗಳಿಂದ ನಮಗಾಗಬೇಕಾದುದೇನು? ಈ ದಿನ ನನಗೆ ಹೊಲಿಗೆಯಿಲ್ಲ. ನೀವು ಬೇಗ ಬರಬೇಕು." ಹೇಮನಳಿನಿಯ ಮೃದು ಹೃದಯಕ್ಕಾದ ನೋವು ಅರ್ಥವಾಗಿ ರಮೇಶನ ಕಣ್ಣಲ್ಲಿ ನೀರು ಬಂತು. ಸಮಾಧಾನಪಡಿಸಲು ಕಾದಿದ್ದು, ಕಡೆಗೆ ತಡೆಯಲಾರದೆ ಈ ಕಾಗದವನ್ನು ಬರೆದಿದ್ದಳು.

ಹೇಮನಳಿನಿಗೆ ಎಲ್ಲಾ ವಿಚಾರವನ್ನೂ ತಿಳಿಸಬೇಕು. ಆದರೆ ಈಗ ಹಾಗೆ ಮಾಡಿದರೆ ತಪ್ಪು ಮುಚ್ಚಲು ಪ್ರಯತ್ನಿಸಿದಂತೆ ತೋರಿ ಅಕ್ಷಯನಿಗೆ ಜಯವಾದ ಹಾಗಾಗುವುದು. ಅಕ್ಷಯನಿಗೂ ನಿಜವಾದ ವೃತ್ತಾಂತ ತಿಳಿದಿರಲಾರದು ಆಲೋಚನೆ ಮಾಡಿ ನಿಜಸಂಗತಿಯನ್ನು ತಿಳಿಸಲು ಅವಕಾಶವಿದೆಯೆಂದು ಸುಮ್ಮನಾದನು.

ಅಷ್ಟುಹೊತ್ತಿಗೆ ಕಮಲೆಯ ಮುಖ್ಯೋಪಾಧ್ಯಾಯಿನಿಯಿಂದ ಒಂದು ಕಾಗದ ಬಂತು. ಕಮಲೆ ರಜದಲ್ಲಿ ನಿಲ್ಲಲು ಬಹಳ ಸಂಕಟಪಟ್ಟುದರಿಂದ ಶನಿವಾರ ಮನೆಗೆ ಕಳುಹಿಸುವುದಾಗಿ ಬರೆದಿದ್ದಳು.

ಕಮಲೆ ಬರುವುದು ಶನಿವಾರ! ತನ್ನಮದುವೆ ಭಾನುವಾರ! ಈ ವೇಳೆಗೆ ಅಕ್ಷಯ, "ಕ್ಷಮಿಸಿ, ರಮೇಶಬಾಬು! ಹಾಸ್ಯವನ್ನು ನೀವಿಷ್ಟು ಮನಸ್ಸಿಗೆ ಹಚ್ಚಿಕೊಳ್ಳುವಿರೆಂದು ತಿಳಿಯಲಿಲ್ಲ. ಸತ್ಯದ ಲವಲೇಶವೂ ಇಲ್ಲದಿದ್ದರೆ ಕೋಪಿಸಿಕೊಳ್ಳುವ ಕಾರಣವೇ ಇಲ್ಲ ಆನಂದಬಾಬು ಹೇಮನಳಿನಿ ಇಬ್ಬರಿಗೂ ನನ್ನಮೇಲೆ ಅಸಮಾಧಾನ. ಬೆಳಗ್ಗೆ ಹೋದಾಗ ಆಕೆ ಎದ್ದು ಹೊರಟುಹೋದರು. ಏಕಿಷ್ಟು ಕೋಪ?"

ರಮೇಶ.—"ಈಗ ಬಿಡುವಿಲ್ಲ. ದಯವಿಟ್ಟು ಕ್ಷಮಿಸಿ "

ಅಕ್ಷಯ:—"ಓ! ಮದುವೆಯ ಏರ್ಪಾಟೋ? ಹಾಗಾದರೆ ಅಡ್ಡಿ ಮಾಡುವುದಿಲ್ಲ. ಬರುತ್ತೇನೆ."

ಅಕ್ಷಯ ಹೊರಡುತ್ತಲೇ ರಮೇಶ ಆನಂದಬಾಬುವಿನ ಮನೆಗೆ ಹೋದನು. ಹೇಮನಳಿನಿ ಮುಂದಿನ ಕೋಣೆಯಲ್ಲೇ ಕಾದು ಕುಳಿತಿದ್ದಳು. ಹೊಲಿಗೆ ಮೇಜಿನಮೇಲೆ ಬಿದ್ದಿತ್ತು. ಪಕ್ಕದಲ್ಲಿ ಹಾರ್ಮೋನಿಯಂ ಇತ್ತು. ಅವಳ ಜೀವವು ಪ್ರೇಮದ ಮಧುರ ಸಂಗೀತಕ್ಕೆ ಹಾತೊರೆಯುತ್ತಿತ್ತು.

ರಮೇಶನನ್ನು ಕಂಡು ಅವಳ ಮುಖದಮೇಲೆ ಮಂದಹಾಸ ಸುಳಿಯಿತು. ಅವನು ಆತುರದಿಂದ ಬರುತ್ತಲೇ, "ನಿಮ್ಮ ತಂದೆಯೆಲ್ಲಿ?" ಎಂದು ಕೇಳಲು ಅದು ಮಾಯವಾಯಿತು.

"ಏಕೆ, ಬೇಕಾಗಿತ್ತೇನು? ಸ್ವಲ್ಪ ಹೊತ್ತಿಗೆ ಚಹಾ ಕುಡಿಯಲು ಬರುತ್ತಾರೆ."

"ಈಗಲೇ ನೋಡಬೇಕಾಗಿತ್ತು. ಕೆಲಸವಿದೆ."

"ಅವರ ಕೋಣೆಯಲ್ಲಿದ್ದಾರೆ."

ರಮೇಶ ಒಳಕ್ಕೆ ಹೋದನು.

ಮುಖ್ಯವಾದ ಕೆಲಸವೇ ! ಪ್ರೇಮಕ್ಕೂ ಸಮಯ ಕೊಡದ ಕೆಲಸ ! ಹೇಮನಳಿನಿಯ ಉಲ್ಲಾಸ ಮಾಯವಾಯಿತು. ಹೊಲಿಗೆಯನ್ನು ಕೈಗೆತ್ತಿಕೊಳ್ಳಲು ಸೂಜಿ ಹೃದಯವನ್ನೇ ಕೊರೆದುಹಾಕಿದಂತಿತ್ತು. ರಮೇಶನ ಕೆಲಸ ಬಹಳ ಹೊತ್ತು ಹಿಡಿಯಿತು. ಪ್ರೇಮದ ಯಾಚನೆಯ ಕರೆ ಕೇಳಿಸಲಿಲ್ಲ.

## ಅಧ್ಯಾಯ ೧೪

ಕೊರಡಿಯಲ್ಲಿ ಆನಂದಬಾಬು ಪತ್ರಿಕೆಯನ್ನು ಹಿಡಿದು ತೂಕಡಿಸುತ್ತಿದ್ದನು. ರಮೇಶ ಕೆಮ್ಮಿದಾಗ ಗಾಬರಿಯಿಂದ ಎಚ್ಚತ್ತು ಊರಿನಲ್ಲಿ ಕಾಲರಾ ಉಪದ್ರವದ ಮರಣ ಸಂಖ್ಯೆಯನ್ನು ಅವನಿಗೆ ತೋರಿಸಿದನು. ರಮೇಶ ತನ್ನ ಕಾರ್ಯವೇನೆಂಬುದನ್ನು ಹೇಳಲಾರಂಭಿಸಿದನು.

"ಮದುವೆ ಸ್ವಲ್ಪ ಮುಂದಕ್ಕೆ ಹಾಕಬೇಕು. ನನಗೆ ಮುಖ್ಯವಾದ ಕೆಲಸವಿದೆ."

ಆನಂದಬಾಬು ಗಾಬರಿಯಿಂದ, "ಏನೆಂದೆ? ಲಗ್ನಪತ್ರಿಕೆಗಳನ್ನು ಕೂಡ ಕಳುಹಿಸಿ ಆಯಿತು."

"ಇನ್ನೊಂದು ವಾರ ಮುಂದಕ್ಕೆ ಹಾಕಿದ್ದೇವೆಂದು ಬರೆಯಬಹುದು."

"ಸರಿಹೋಯಿತು! ಬೇಕಾದಾಗ ಮುಂದಕ್ಕೆ ತಳ್ಳಲು, ಇದೇನು ಕೋರ್ಟಿನ ಮೊಕದ್ದಮೆಯೇ? ಏನಂತಹ ಕೆಲಸ?"

"ಬಹಳ ಮುಖ್ಯವಾದ ಕೆಲಸ."

ಬಿರುಗಾಳಿಯಿಂದ ಮುರಿಯಲ್ಪಟ್ಟ ಮರದಂತೆ ಆನಂದಬಾಬು ಕುರ್ಚಿಯ ಮೇಲೆ ಕುಕ್ಕರಿಸಿದನು.

ಆನಂದ—ಸರಿಸರಿ! ಹಾಗೆಲ್ಲಾ ಮಾಡುವುದಕ್ಕಾಗುವುದಿಲ್ಲ. ಬಂದವರಿಗೆಲ್ಲಾ ನೀನೇ ಸಮಾಧಾನ ಹೇಳು. ನನಗೊಂದೂ ತಿಳಿಯದು. ರಮೇಶನ ದೃಷ್ಟಿ ನೆಲದಮೇಲಿತ್ತು.

"ಹೇಮನಳಿನಿಗೆ ಹೇಳಿದೆಯಾ?"

"ಇಲ್ಲ. ಅವಳಿಗಿನ್ನೂ ಏನೂ ಗೊತ್ತಿಲ್ಲ."

"ಮದುವೆ ಅವಳದೇತಾನೆ. ಈಗಲೇ ತಿಳಿಸಬೇಕು."

"ನಿಮಗೇ ಮೊದಲು ತಿಳಿಸೋಣವೆಂದು ಬಂದೆ"

ಆನಂದಬಾಬುವಿನ ಕರೆಯನ್ನು ಕೇಳಿ ಹೇಮನಳಿನಿ ಒಳಕ್ಕೆ ಬಂದಳು.

ಆನಂದ—"ರಮೇಶನಿಗೇನೋ ಮಹತ್ಕಾರ್ಯವಿದೆಯಂತೆ! ಮದುವೆ ಆಗಲು ಸಮಯವಿಲ್ಲವಂತೆ."

ಹೇಮನಳಿನಿ ಬಾಡಿದ ಮುಖದಿಂದ ರಮೇಶನ ಕಡೆ ನೋಡಿದಳು. ಅವನು ಅಪರಾಧಿಯಂತೆ ನಿಂತಿದ್ದನು. ಈ ಒರಟು ರೀತಿಯಲ್ಲಿ ವರ್ತಮಾನ ಅವಳ ಕಿವಿ ಮುಟ್ಟುವುದೆಂದು ಅವನು ಭಾವಿಸಿರಲಿಲ್ಲ. ಅವಳ ನೊಂದ ಹೃದಯದಲ್ಲಿ ನಾಟಿದ ಬಾಣವನ್ನು ತೆಗೆಯಲು ಅವನು ಸಮರ್ಥನಾಗಿರಲಿಲ್ಲ. ಯಾವ ಕೆಲಸಕ್ಕಾಗಿ ಮದುವೆ ನಿಲ್ಲಬೇಕಾಗಿತ್ತೆಂದು ಹೇಳಲು ಅವನು ಸಿದ್ಧನಾಗಿರಲಿಲ್ಲ.

ಆನಂದಬಾಬು ಹೇಮನಳಿನಿಯ ಕಡೆ ತಿರುಗಿ, "ನೀವೇ ಆಲೋಚಿಸಿ ನಿರ್ಧರಿಸಿ. ನನಗೊಂದೂ ತಿಳಿಯುವುದಿಲ್ಲ." ಎಂದನು.

ಹೇಮನಳಿನಿ, ಅಸ್ತಮಿಸುವ ಸೂರ್ಯನು ಕಾರ್ಮೋಡದ ಮೇಲೆ ಬೀರುವ ಮ್ಲಾನ ಕಿರಣದಂತಿದ್ದ ನೋಟವನ್ನು ರಮೇಶನ ಕಡೆ ತಿರುಗಿಸಿ, "ನನಗೂ ಒಂದೂ ಗೊತ್ತಿಲ್ಲ," ಎಂದು ಹೇಳಿ ಹೊರಗೆ ಹೋದಳು.

ಆನಂದಬಾಬು ಪತ್ರಿಕೆಯನ್ನು ತೆಗೆದುಕೊಳ್ಳಲು, ರಮೇಶ ಒಂದೆರಡು ನಿಮಿಷ ಸುಮ್ಮನೆ ಕುಳಿತಿದ್ದು ಎದ್ದು ಹೋದನು.

ಮುಂದಿನ ಕೊಠಡಿಯಲ್ಲಿ ಕಿಟಕಿಯ ಬಳಿ ಹೇಮನಳಿನಿ ಬೀದಿಯ ಕಡೆ ನೋಡುತ್ತಾ ನಿಂತಿದ್ದಳು. ನದಿಯ ಪ್ರವಾಹದಂತೆ ಜನಸಂದಣಿ ಸರಿದು ಹೋಗುತ್ತಿತ್ತು. ಹೊಸಲಮೇಲೆ ರಮೇಶ ಅನುಮಾನದಿಂದ ನಿಂತನು. ಆ ನಸುಬೆಳಕಿನಲ್ಲಿ ಕಿಟಕಿಯಬಳಿ ನಿಂತಿದ್ದ ಹೇಮನಳಿನಿಯ ಆಗಿನ ಚಿತ್ರ ಅವನ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತಿತು. ಅವಳ ಕೆನ್ನೆ, ತುರುಬು, ಕತ್ತಿನ ಮೇಲೆ ಅಲೆದಾಡುತ್ತಿದ್ದ ಸುಳಿಗುರುಳು, ಅದರ ಕೆಳಗೆ ಮಿಂಚುತ್ತಿದ್ದ ಸರ, ಎಡಭುಜದ ಮೇಲೆ ಸುಂದರವಾಗಿ ಇಳಿಬಿದ್ದ ಸೆರಗು ಇವು ಮರೆಯಲಾಗದಂತೆ ಅವನ ಮನಸ್ಸಿನಲ್ಲಿ ಚಿತ್ರಿತವಾದುವು.

ನಿಧಾನವಾಗಿ ಅವಳ ಹತ್ತಿರ ಹೋದನು. ಅವಳು ತಿರುಗದೆ ಬೀದಿಯ ಕಡೆಯೇ ನೋಡುತ್ತಿದ್ದಳು. ರಮೇಶ ನಡುಗುವ ದನಿಯಲ್ಲಿ "ನಿನ್ನಲ್ಲಿ ಒಂದು ಭಿಕ್ಷೆಯಿದೆ!" ಎಂದನು.

ದನಿಯಲ್ಲಡಗಿದ್ದ ನೋವನ್ನರಿತು ಹೇಮನಳಿನಿ ತಿರುಗಿದಳು. "ನನ್ನಲ್ಲಿ ಸಂದೇಹಪಡಬೇಡ. ಪಡುವುದಿಲ್ಲವೆಂದು ಹೇಳು. ಈಶ್ವರ ಸಾಕ್ಷಿಯಾಗಿ ನಾನು ನಿನಗೆ ದ್ರೋಹಮಾಡುವುದಿಲ್ಲ." ಗಂಟಲು ಕಟ್ಟಿ ಅವನ ಕಣ್ಣಲ್ಲಿ ನೀರುಕ್ಕಿತು.

ಹೇಮನಳಿನಿಯ ಕಣ್ಣುಗಳಿಂದಲೂ ನೀರು ಹರಿಯಲಾರಂಭಿಸಿತು. ಒಬ್ಬರ ಪಕ್ಕದಲ್ಲೊಬ್ಬರು ನಿಂತು ದೃಷ್ಟಿ ಸೇರಿದಾಗ ಹೃದಯಗಳು ಶಾಂತಿಯಿಂದ ತುಂಬಿ, ಇಬ್ಬರೂ ಸ್ವರ್ಗಸುಖವನ್ನನುಭವಿಸಿದರು. ಸಮಾಧಾನದಿಂದ ನಿಟ್ಟುಸಿರುಬಿಟ್ಟು ರಮೇಶ, "ಮದುವೆಯನ್ನು ಒಂದು ವಾರ ಮುಂದೆ ಹಾಕಿದುದೇಕೆ, ಗೊತ್ತೆ?" ಹೇಮನಳಿನಿ ತಲೆಯಾಡಿಸಿದಳು. ಅವಳಿಗೆ ತಿಳಿಯಬೇಬೇಕೆಂಬ ಕುತೂಹಲವೂ ಇರಲಿಲ್ಲ.

"ಮದುವೆಯಾದ ಮೇಲೆ ಎಲ್ಲಾ ಸಂಗತಿಯನ್ನೂ ಹೇಳುತ್ತೇನೆ."

ಹೇಮನಳಿನಿ ನಾಚಿಕೆಯಿಂದ ತಲೆತಗ್ಗಿಸಿದಳು. ರಮೇಶನೊಡನೆ ಆಡುವ ಮಾತು, ಮುಂದಿನ ಜೀವನದ ಸವಿ ಚಿತ್ರಗಳು—ಮುಂತಾದುವನ್ನು ಕಲ್ಪಿಸಿಕೊಂಡು ಹೇಮನಳಿನಿ ಸಂತೋಷಪಟ್ಟಿದ್ದಳು. ಇಷ್ಟು ಬೇಗ ಕಣ್ಣೀರು ಹರಿಸಿ ಪ್ರಣಯ ಪ್ರಮಾಣಗಳನ್ನು ಮಾಡಿ ಹೀಗೆ ನಿಲ್ಲಬೇಕಾಗಬಹುದೆಂಬ ಕಲ್ಪನೆಯೂ ಅವಳಿಗಿರಲಿಲ್ಲ.

ಹೇಮನಳಿನಿ, "ನಮ್ಮ ತಂದೆಗೆ ಅಸಮಾಧಾನವಾಗಿದೆ. ಹೇಳಬೇಕು," ಎಂದಳು. ಪ್ರಪಂಚದ ಅವಹೇಳನಗಳಿಗೆ ಎದೆಯೊಡ್ಡುವ ಶಕ್ತಿ ತನಗಿದೆಯೆಂಬ ಧೈರ್ಯದಿಂದ ರಮೇಶ ಆನಂದಬಾಬುವಿನ ಬಳಿಗೆ ಹೋದನು.

## ಅಧ್ಯಾಯ ೧೫

ರಮೇಶ ಪುನಃ ಬಂದುದನ್ನು ನೋಡಿ ಆನಂದಬಾಬು ಗಾಬರಿಯಿಂದ ತಲೆಯೆತ್ತಿದನು.

"ಮದುವೆಗೆ ಕರೆದಿರುವವರ ಹೆಸರಿನ ಪಟ್ಟಿಯನ್ನು ಕೊಟ್ಟರೆ ಲಗ್ನವನ್ನು ಮುಂದೆಹಾಕಿರುವುದಾಗಿ ಅವರಿಗೆ ಬರೆಯುತ್ತೇನೆ."

"ಮುಂದಕ್ಕೆ ಹಾಕಲೇ ಬೇಕೆ?"

"ಹಾಕದೆ ವಿಧಿಯೇ ಇಲ್ಲ."

"ನನಗೊಂದೂ ತಿಳಿಯುವುದಿಲ್ಲ! ಹುಡುಗಾಟದ ವಯಸ್ಸು ನನಗೆ ಕಳೆದುಹೋಯಿತು. ಪಟ್ಟಿ ಹಿಡಿ. ಅನ್ಯಾಯವಾಗಿ ಎಷ್ಟೋ ದುಡ್ಡು ಖರ್ಚಾಯಿತು." ಖರ್ಚಿನ ಭಾರವನ್ನು ಹೊರಲು ರಮೇಶ ಒಪ್ಪಿದನು.

"ಮದುವೆಯಾದ ಮೇಲೆ ಕಲ್ಕತ್ತೆಯಲ್ಲಿಯೇ ವಕೀಲನಾಗಿರುವೆಯೋ?"

"ಇಲ್ಲ. ಬೇರೆ ಎಲ್ಲಾದರೂ ಹೋಗಬೇಕೆಂದಿದ್ದೇನೆ."

"ಅದೇ ಸರಿ. ಎಟಾವ ಒಳ್ಳೆ ಊರು. ಅಲ್ಲಿ ನಾನು ಒಂದು ತಿಂಗಳಿದ್ದೆ. ಹವಾ ಬಹಳ ಒಳ್ಳೆಯದು. ನಾನಂತೂ ಹೇಮನಳಿನಿಯನ್ನು ಬಿಟ್ಟು ಒಬ್ಬನೇ ಇರಲಾರೆ. ಆದ್ದರಿಂದ ನನ್ನ ಆರೋಗ್ಯಕ್ಕೆ ಸರಿಹೋಗುವ ಊರನ್ನೇ ಆರಿಸು. ಆಗಿನ ಸ್ಥಿತಿಯಲ್ಲಿ ಚರಾಪುಂಜಿಯಲ್ಲಾಗಲಿ ಬೇರೊಂದು ಪರ್ವತ ಶಿಖರಕ್ಕಾಗಲಿ ಹೋಗಿ ನೆಲಸೆಂದು ಆನಂದಬಾಬು ಹೇಳಿದ್ದರೂ ರಮೇಶ ಒಪ್ಪಲು ಸಿದ್ಧನಾಗಿದ್ದನು."

"ಹಾಗೇ ಆಗಲಿ. ಎಟಾವಕ್ಕೇ ಹೋಗೋಣ."

ಸ್ವಲ್ಪ ಹೊತ್ತಿಗೆ ಅಕ್ಷಯ ಬಂದು ಮದುವೆ ಮುಂದೆಹಾಕಿದ ವಿಚಾರ

ವನ್ನು ತಿಳಿದನು.

"ನಾಡಿದ್ದೆಂದು ಎಲ್ಲರಿಗೂ ಹೇಳಿ ಈಗ ಮುಂದೆಹಾಕುವುದು ಹೇಗೆ ?"

"ಈಗಿನ ಕಾಲದವರು ಏನಾದರೂ ಮಾಡುತ್ತಾರೆ"

ಅಕ್ಷಯು ಸ್ವಲ್ಪ ಯೋಚಿಸಿ. "ಹೇಮನಳಿನಿಗೆ ಒಳ್ಳೆಯ ಗಂಡ ಸಿಕ್ಕಿದನೆಂದು ನೀವು ಕಣ್ಣು ಮುಚ್ಚಿಕೊಂಡಿದ್ದೀರಿ. ಅವನ ಸ್ಥಿತಿಗತಿಗಳನ್ನು ಸರಿಯಾಗಿ ವಿಚಾರಿಸುವುದು ಒಳ್ಳೆಯದು.

ಆನಂದ—"ರಮೇಶನನ್ನೇ ನಂಬದೆ ಯಾರನ್ನು ನಂಬುವುದು ?"

ಅಕ್ಷಯು–"ಮದುವೆ ಮುಂದೆ ಹಾಕಿದುದಕ್ಕೆ ಕಾರಣ ಹೇಳಿದನೋ?"

ತಲೆಯನ್ನು ಸವರಿಕೊಳ್ಳುತ್ತಾ ಆನಂದಬಾಬು "ಏನೋ ಮುಖ್ಯವಾದ ಕೆಲಸವಿದೆಯೆಂದು ಹೇಳಿದ."

ಅಕ್ಷಯು—"ನಿಮ್ಮ ಮಗಳಿಗೆ ತಿಳಿದಿರಬಹುದು."

ಆನಂದ—' ಇರಬಹುದು."

ಅಕ್ಷಯು—"ಕರೆದು ಕೇಳಬಹುದಲ್ಲಾ."

ಆನಂದಬಾಬು ಒಪ್ಪಿ ಹೇಮನಳಿನಿಯನ್ನು ಕರೆದನು.

ಹೇಮನಳಿನಿ ಅಕ್ಷಯುನಿಗೆ ಕಾಣಿಸದಂತೆ ತಂದೆಯ ಮರೆಯಲ್ಲಿ ನಿಂತಳು.

ಆನಂದ—"ಮದುವೆ ಮುಂದೆಹಾಕಿದುದಕ್ಕೆ ರಮೇಶನೇನಾದರೂ ಕಾರಣ ತಿಳಿಸಿದನೇ?"

ಹೇಮನಳಿನಿ "ಇಲ್ಲ"ವೆಂದು ತಲೆಯಾಡಿಸಿದಳು.

ಆನಂವ—"ನೀನು ಕೇಳಲಿಲ್ಲವೆ?"

ಹೇಮ—"ಇಲ್ಲ."

ಆನಂದ—"ಇಬ್ಬರೂ ಸರಿಯೆ! ವಿಚಿತ್ರ ವ್ಯಕ್ತಿಗಳು. ಅವನು ಮದುವೆಯಾಗಲು ತನಗೆ ಹೊತ್ತಿಲ್ಲವೆನ್ನುವುದು. ನೀನು ಒಪ್ಪಿಕೊಂಡು ಸುಮ್ಮನಾಗುವುದು."

ಹೇಮನಳಿನಿಯನ್ನು ಸಂಬೋಧಿಸಿ ಅಕ್ಷಯು—"ಹೇಳದಿದ್ದರೆ ಕಾರಣ ಹೇಗೆ ಕೇಳುವುದು? ಹೇಳುವ ವಿಚಾರವಾಗಿದ್ದರೆ ಅವನೇ

ತಿಳಿಸುತ್ತಿದ್ದ."

ಹೇಮನಳಿನಿ ಕೋಪದಿಂದ, "ಬೇರೆಯವರ ಅಭಿಪ್ರಾಯದ ಅವಶ್ಯಕತೆಯಿಲ್ಲ. ನನಗೆ ಸಮಾಧಾನವಿದ್ದರೆ ಸರಿ-" ಎಂದು ಹೊರಟು ಹೋದಳು.

ಅಕ್ಷಯ—"ಪ್ರಪಂಚವೇ ಹೀಗೆ! ಒಳ್ಳೆಯದಕ್ಕಾಗಿ ಹೇಳಿದರೆ ಉರಿದುಬೀಳುತ್ತಾರೆ. ನೀವೆಲ್ಲಾ ಶಪಿಸಿದರೂ ಸರಿಯೆ. ನನಗೇನೋ ರಮೇಶನ ನಡತೆ ಸಂಶಯಾಸ್ಪದವಾಗಿದೆ. ನಿಮಗೆ ತೊಂದರೆ ಸಂಭವಿಸ ಬಹುದೆಂದು ತಿಳಿದೂ ನಾನು ಸುಮ್ಮನಿರಲಾರೆ. ಹೇಗಿದ್ದರೂ ನಾಳೆ ಜೋಗೇಂದ್ರ ಬರುತ್ತಾನೆ. ಅವನೂ ಇದನ್ನೇ ಒಪ್ಪಿಕೊಂಡು ಸುಮ್ಮನಿದ್ದರೆ ನಾನು ಮುಂದೆ ಮಾತನಾಡುವುದಿಲ್ಲ".

ಆನಂದಬಾಬು ಅಕ್ಷಯನ ಸಂಶಯುಗಳೇನೆಂದು ಕೇಳಿ ಮಾತುಗಳ ಸುರಿಮಳೆಗೆ ಸಿಕ್ಕಲು ಇಷ್ಟಪಡದೆ "ಸಮ್ಮನೆ ಅನುಮಾನ ಪಡುತ್ತೀ," ಎಂದನು.

ಅಕ್ಷಯನೂ ತಾಳ್ಮೆತಪ್ಪಿ, "ನನ್ನಲ್ಲಿ ನಿಮಗೆ ಅನುಮಾನ. ನಿಮ್ಮ ಅಳಿಯನ ಮೇಲೆ ನನಗೇನೋ ಕ್ರೋಧವಿದೆಯೆಂದು ತಿಳಿದಿದ್ದೀರಿ. ಹೆಂಗಸರಿಗೆ ತತ್ವಶಾಸ್ತ್ರವಾರ ಹೇಳುವುದಕ್ಕೂ, ಕವನಗಳನ್ನು ಚರ್ಚಿ ಸುವುದಕ್ಕೂ ನನಗೆ ಒರದೆ ಇರಬಹುದು. ನಾನು ಸಾಧಾರಣ ಮನುಷ ನಾದರೂ ನಿಮ್ಮೆಲ್ಲರ ಮೇಲೆ ಮಮತೆಯುಳ್ಳವನು. ಬಚ್ಚಿಡಬೇಕಾದ ಸಂಗತಿ ಯಾವುದೂ ನನ್ನಲ್ಲಿಲ್ಲ. ಭಿಕ್ಷ ಬೇಡುವೆನೇ ಹೊರತು ಕಳ್ಳತನ ಮಾಡುವುದಿಲ್ಲ. ನನ್ನ ಮಾತಿನ ಅರ್ಥ ನಿಮಗೆ ನಾಳೆ ತಿಳಿಯುತ್ತೆ." ಎಂದನು.

## ಅಧ್ಯಾಯ ೧೬

ರಮೇಶ ಎಲ್ಲರಿಗೂ ಕಾಗದಗಳನ್ನು ಬರೆದು ಮುಗಿಸುವವೇಳೆಗೆ ಕತ್ತಲಾಗಿತ್ತು. ಆಮೇಲೆ ಮಲಗಿದರೂ ನಿದ್ರೆಬರಲಿಲ್ಲ. ಗಂಗಾ ಯಮುನಾ ನದಿಗಳಂತೆ ತಿಳಿ ಮತ್ತು ಕಲಕಿದ ಪ್ರವಾಹಗಳಾಗಿ ಅವನ ಆಲೋಚನೆಗಳು ಹರಿಯುತ್ತಿದ್ದುವು. ಎರಡು ಪ್ರವಾಹಗಳೂ ಸೇರಿ ನಿದ್ರಾಭಂಗವನ್ನುಂಟುಮಾಡಿದುದರಿಂದ ಸ್ವಲ್ಪ ಹೊತ್ತು ಹೊರಳುತ್ತಿದ್ದು ಮೇಲಕ್ಕೆದ್ದನು. ಕಿಟಕಿಯ ಬಳಿ ನಿಂತು ನೋಡಲು ಕೆಲವು ಮನೆಗಳು ನೆರಳಿನಲ್ಲಿಯೂ, ಎದುರುಮನೆಗಳು ಬೆಳದಿಂಗಳಿನಲ್ಲಿಯೂ ಇದ್ದುವು. ರಮೇಶ ಚಿಂತಿಸುತ್ತಿದ್ದನು. ಅವನ ಆತ್ಮ ಇಹಲೋಕ ವ್ಯಾಪಾರವನ್ನು ಮರೆತು ಶಾಂತತೆಯ ವಿಶ್ವತೇಜಸ್ಸಿನಲ್ಲಿ ಲೀನವಾದಂತಿತ್ತು.

ಹುಟ್ಟು, ಸಾವು, ಕೆಲಸ, ವಿಶ್ರಾಂತಿ ಎಲ್ಲಾ ವಿಶ್ವದ ಅನಂತ ಸಂಗೀತದ ಗತಿಗೆ ಸರಿಯಾಗಿ ನಡೆಯುತ್ತಿರುವಂತೆ ತೋರಿತು. ನೇಪಥ್ಯದ ಹಿಂದಿನ ಕತ್ತಲೆ ಬೆಳಕುಗಳಿಲ್ಲದ ವೇದಿಕೆಯಿಂದ ಸ್ತ್ರೀಪುರುಷರ ಪ್ರೇಮ ಜ್ಯೋತಿ ಈ ಲೋಕಕ್ಕೆ ಇಳಿದು ಬಂದಹಾಗೆ ತೋರಿತು

ಮಾಳಿಗೆಯ ಮೇಲೆ ಹೋದನು. ಆನಂದಬಾಬುವಿನ ಮನೆ ನಿಶ್ಶಬ್ದ ವಾಗಿತ್ತು. ಬೆಳದಿಂಗಳಿನಲ್ಲಿ ಆ ಮನೆಯ ಗೋಡೆ ಕಿಟಕಿಗಳ ಮೇಲೆ ನೆರಳು ಬೆಳಕಿನ ಚಿತ್ರಗಳನ್ನು ಬರೆದಂತಿತ್ತು. ಆ ಮನೆಯಲ್ಲಿ ಅವನ ಹೃದಯಾಧಿದೇವತೆ ಇದ್ದಳು

ಆ ಊರಿನಲ್ಲಿ ತನ್ನಂಥವರು ಎಷ್ಟೋ ಜನರಿದ್ದರೂ ಭಗವಂತನ ಕೃಪಾಕಟಾಕ್ಷ ತನ್ನ ಮೇಲೇ ಬೀಳಲು ಕಾರಣವೇನು? ಆ ಹುಡುಗಿಯ ಪಕ್ಕದಲ್ಲಿ ಕಿಟಕಿಯ ಬಳಿ ನಿಂತು ಜಗತ್ತೆಲ್ಲಾ ಆನಂದ ಸಾಗರದಲ್ಲಿ ತೇಲು ತ್ತಿರುವುದನ್ನು ಅರಿಯುವ ಭಾಗ್ಯವು ತನ್ನೊಬ್ಬನದೇ ಏಕಾಗಬೇಕು? ಆಶ್ಚರ್ಯ! ಆ ಮಾಯೆ ಆತ್ಮವನ್ನೇ ಕೊಚ್ಚಿಕೊಂಡು ಹೋಗಿತ್ತು. ಲೋಕವನ್ನೇ ಬದಲಾಯಿಸಿತ್ತು.

ರಾತ್ರಿ ಬಹಳ ಹೊತ್ತಿನವರೆಗೂ ಮಾಳಿಗೆಯ ಮೇಲೆ ಓಡಾಡುತ್ತಿ

ದ್ದನು. ಚಂದ್ರ ಒಂದು ಮನೆಯ ಹಿಂದೆ ಕಣ್ಮರೆಯಾಗಿದ್ದನು ಅವನ ಕಿರಣಗಳಿನ್ನೂ ಆಗಸವನ್ನು ಬೆಳಗುತ್ತಿರುವ ಹಾಗೇ ಭೂಮಿಯನ್ನು ಕತ್ತಲೆಯು ಆವರಿಸಿತು.

ಇದ್ದಕ್ಕಿದ್ದಂತೆ ಛಳಿಯಾಗಿ ರಮೇಶನ ಹೃದಯ ಭಯಗ್ರಸ್ತವಾಯಿತು. ಜೀವನದ ತುಮುಲಯುದ್ಧಕ್ಕಿಳಿಯಬೇಕು. ಸೃಷ್ಟಿಯಲ್ಲಿ ಎಲ್ಲೆಲ್ಲಿಯೂ ಶಾಂತಿ. ಪ್ರಶಾಂತವಾದ ಬೆಳದಿಂಗಳು; ನಿಶ್ಶಬ್ದವಾದ ರಾತ್ರಿ. ಸದಾ ಸುತ್ತುವ ನಕ್ಷತ್ರಗಳು ಗಾಢ ನಿದ್ರೆಯಲ್ಲಿ ಮುಳುಗಿದ್ದಂತೆ ಇದ್ದವು. ಮನುಷ್ಯ ಜೀವನಕ್ಕೆ ಮಾತ್ರ ವಿಶ್ರಾಂತಿಯಿಲ್ಲ. ಸುಖವಿರಲಿ, ದುಃಖವಿರಲಿ, ಮಾನವನ ಹೃದಯಕ್ಕೆ ನೆಮ್ಮದಿಯಿಲ್ಲ. ಒಂದೆಡೆ ಸೃಷ್ಟಿಯ ಅಮಿತ ಶಾಂತಿ; ಇನ್ನೊಂದೆಡೆ ಪ್ರಪಂಚದ ಕೊನೆ ಮೊದಲಿಲ್ಲದ ಗೋಳು! ಎರಡೂ ಒಟ್ಟಿಗಿರಲು ಸಾಧ್ಯವೆ? ತನ್ನ ತೊಂದರೆಯನ್ನು ಕ್ಷಣ ಕಾಲ ಮರೆತು ರಮೇಶ ಈ ಅಗಾಧ ಸಮಸ್ಯೆಯನ್ನು ವಿಚಾರ ಮಾಡ ತೊಡಗಿದನು. ಶಾಂತವಾದ ಸೃಷ್ಟಿ ತನಗೆ ಪ್ರೇಮಜ್ಯೋತಿಯನ್ನು ನೀಡಿತು. ಪ್ರಪಂಚದ ತೊಡಕುಗಳಿಗೆ ಸಿಕ್ಕಿ ಅದು ನಲುಗುವುದೇ? ಯಾವುದು ನಿಜ, ಯಾವುದು ಮಾಯೆ?

## ಅಧ್ಯಾಯ ೧೭

ಮಾರನೆಯ ದಿನ ಜೋಗೇಂದ್ರ ಬಂದನು. ಅಂದು ಶನಿವಾರ. ಹೇಮನಳಿನಿಯ ಮದುವೆ ಭಾನುವಾರ ನಡೆಯಬೇಕಾಗಿತ್ತು ಮನೆ ಸದ್ದಿಲ್ಲವೆ, ಅಲಂಕಾರವಿಲ್ಲದೆ ಮಿಕ್ಕ ಮನೆಗಳಂತೆಯೇ ಇತ್ತು.

ಯಾರಿಗಾದರೂ ಕಾಯಿಲೆಯಿರಬಹುದೆಂದು ಜೋಗೇಂದ್ರ ಗಾಬರಿಯಾದನು. ಊಟ ಸಿದ್ಧವಾಗಿತ್ತು. ಆನಂದಬಾಬು ಅರ್ಧ ಮುಗಿಸಿದ ಚಹದ ಲೋಟವನ್ನು ಮುಂದಿಟ್ಟುಕೊಂಡು ಪತ್ರಿಕೆಯನ್ನೋದುತ್ತಾ ಕುಳಿತಿದ್ದ.

"ಹೇಮ ಆರೋಗ್ಯವೇ?" ಜೋಗೇಂದ್ರ ಕೇಳಿದನು.

"ಇದ್ದಾಳೆ."

"ಮದುವೆಯ ಸಮಾಚಾರವೇನು?"

"ಮುಂದಿನ ಭಾನುವಾರ."

"ಏಕೆ?"

"ನಿನ್ನ ಸ್ನೇಹಿತನನ್ನೇ ಕೇಳು. ಏನೋ ಭಾರಿ ಕೆಲಸವಂತೆ! ಈ ಭಾನುವಾರ ಮದುವೆಯಾಗಲು ಸಾಧ್ಯವಿಲ್ಲವಂತೆ."

"ನಾನಿಲ್ಲದೆ ಹೋದರೆ ಏನೇನೋ ಫಜೀತಿ! ಅಂಥಾ ಕೆಲಸವೇನು? ಅವನಿಗೆ ಬಂಧುಗಳೂ ಇಲ್ಲ. ಕೇಳಬಾರದಾಗಿತ್ತೆ?"

"ಅವನೆಲ್ಲೂ ಪರಾರಿಯಾಗಿಲ್ಲ. ನೀನೇ ಹೋಗಿ ಕೇಳು "

ಅವಸರದಿಂದ ಚಹಾ ಮುಗಿಸಿ ಜೋಗೇಂದ್ರ ಹೊರಟನು. "ಏನಾದರೂ ತಿಂದು ಹೋಗು," ಎಂದು ಆನಂದಬಾಬು ಕೂಗುತ್ತಿದ್ದರೂ ಲಕ್ಷಿಸದೆ ಪಕ್ಕದ ಮನೆಗೆ ಬೇಗ ಬೇಗ ಹೋದನು.

"ರಮೇಶಾ," ಎಂಬ ಕೂಗಿಗೆ ಯಾರೂ ಪ್ರತ್ಯುತ್ತರ ಕೊಡಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಆಳು, "ಅವರು ಬೆಳಗ್ಗೆ ಹೊತ್ತಿಗೆ ಮುಂಚೆ ಹೊರಟು ಹೋದರು," ಎಂದು ತಿಳಿಸಿದನು

"ಯಾವಾಗ ಬರುತ್ತಾರೆ?"

"ಹಾಸಿಗೆ ತೆಗೆದುಕೊಂಡು ಹೋಗಿದ್ದಾರೆ. ನಾಲ್ಕೈದು ದಿನಗಳಾಗಬಹುದು. ಎಲ್ಲಿಗೆ ಹೋದರೋ ಗೊತ್ತಿಲ್ಲ."

ಜೋಗೇಂದ್ರ ಚಿಂತಿಸುತ್ತಾ ಹಿಂತಿರುಗಿ ಬಂದುದನ್ನು ನೋಡಿ ಆನಂದಬಾಬು, "ಏನಾಯಿತು?" ಎಂದನು.

"ಆಗುವುದೇನು? ಅಳಿಯನಾಗುವವನು ಎಲ್ಲಿದ್ದಾನೆ, ಎಲ್ಲಿಗೆ ಹೋದ ಎಂಬ ಆಲೋಚನೆ ಕೂಡ ನಿಮಗಿಲ್ಲ; ಪಕ್ಕದ ಮನೆಯಲ್ಲಿದ್ದೂ ಕೂಡ!"

"ನಿನ್ನೆ ರಾತ್ರಿ ಇದ್ದನಲ್ಲಾ."

"ಎಲ್ಲಿಗಾದರೂ ಹೊರಡುವನೆಂದು ನಿಮಗೆ ತಿಳಿದಿತ್ತೆ? ಅವನ ಆಳಿಗೂ ಗೊತ್ತಿಲ್ಲ. ನನಗೇನೋ ಸಂಶಯ ! ನೀವಂತೂ ಹಾಯಾಗಿ ಇದ್ದೀರಿ !" ಆನಂದಬಾಬು ಸುಮ್ಮನಿರಲು ಸಾಧ್ಯವಿಲ್ಲದೆ, "ಏನಿದು, ಮತ್ತೆ ?" ಎಂದನು. ರಮೇಶನನ್ನು ಆತನು ಹೆಚ್ಚು ಪ್ರಶ್ನಿಸಿರಲಿಲ್ಲ. ಅವನೂ ಆಲೋಚಿಸದೆ ಕೆಲಸವಿದೆಯೆಂದು ಮಾತ್ರ ಹೇಳಿ ಸುಮ್ಮ

ನಾಗಿದ್ದನು.

ಜೋಗೇಂದ್ರ—"ಹೇಮನಳಿನಿಯೆಲ್ಲಿ ?"

ಆನಂದ—"ಆಗಲೇ ಚಹಾಕುಡಿದು ತನ್ನ ಕೊಠಡಿಗೆ ಹೊರಟು ಹೋದಳು."

ಜೋಗೇಂದ್ರ—"ಪಾಪ! ಅವಳಿಗೂ ಇವನ ನಡತೆಯಿಂದ ಬೇಸರ ವಾಗಿರಬೇಕು." ಎಂದು ಮಹಡಿಯ ಮೇಲಕ್ಕೆ ಹೋದನು.

ಹೇಮನಳಿನಿಯೊಬ್ಬಳೇ ಕುಳಿತಿದ್ದಳು. ಜೋಗೇಂದ್ರನ ಹೆಜ್ಜೆಯ ಸದ್ದನ್ನು ಕೇಳಿ ಕೈಗೊಂದು ಪುಸ್ತಕವನ್ನು ತೆಗೆದುಕೊಂಡು ಓದುವಂತೆ ನಟಿಸಿದಳು. ಅವನು ಒಳಗೆ ಬರಲು ಅದನ್ನು ಕೆಳಗಿರಿಸಿ, "ಯಾವಾಗ ಬಂದೆ? ಚನ್ನಾಗಿದ್ದೀಯಾ"? ಎಂದಳು.

ಜೋಗೇಂದ್ರ ಒಂದು ಕುರ್ಚಿಯ ಮೇಲೆ ಕುಳಿತು "ನನಗೆಲ್ಲಾ ತಿಳಿಯಿತು ಹೇಮಾ, ಆಲೋಚಿಸಬೇಡ. ನಾನಿಲ್ಲೇ ಇದ್ದಿದ್ದರೆ ಹೀಗಾಗು ತ್ತಿರಲಿಲ್ಲ. ಎಲ್ಲಾ ಈಗ ಸರಿಮಾಡುತ್ತೇನೆ. ಮದುವೆ ಮುಂದೆ ಹಾಕಿದುದೇಕೆ, ನಿನಗೆ ತಿಳಿದಿದೆಯೆ ?"

ಹೇಮನಳಿನಿ ತೊಂದರೆಗೆ ಸಿಕ್ಕಿದಳು. ರಮೇಶನ ವಿಚಾರದಲ್ಲಿ, ಜೋಗೇಂದ್ರ ಅಕ್ಷಯರು ಅನುಮಾನಪಡುವುದು ಅವಳಿಗಿಷ್ಟವಿರಲಿಲ್ಲ. ಮದುವೆ ಮುಂದೆ ಹೋದ ಕಾರಣ ತನಗೆ ತಿಳಿಯದೆಂದು ಒಪ್ಪಿಕೊಳ್ಳಲು ಮನಸ್ಸಿರಲಿಲ್ಲ. ಸುಳ್ಳು ಹೇಳುವುದೂ ಕಷ್ಟ.

"ಅವರು ಹೇಳುವೆನೆಂದರು. ನನಗೇ ಅವಶ್ಯತೋರಲಿಲ್ಲ."

ಮನುಸ್ಸಿನಲ್ಲೇ "ದುರಭಿಮಾನ!" ಎಂದುಕೊಂಡು ಜೋಗೇಂದ್ರ, "ಪರವಾಯಿಲ್ಲ ಬಿಡು. ಈವತ್ತೇ ತಿಳಿದು ಬರುತ್ತೇನೆ."

"ನನಗೇನೂ ಬೇಕಾಗಿಲ್ಲ. ಅವರನ್ನು ಸುಮ್ಮನೆ ಹಿಂಸಿಸಬೇಡ."

"ಏನೂ ಇಲ್ಲ." ಎಂದು ಜೋಗೇಂದ್ರ ಎದ್ದನು.

ಹೇಮನಳಿನಿಯೂ ಎದ್ದು, "ನನಗೆ ಅವರಲ್ಲಿ ಸಂಪೂರ್ಣ ನಂಬಿಕೆ ಯಿದೆ. ಈ ವಿಚಾರವಾಗಿ ನೀನು ಅವರನ್ನೇನೂ ಕೇಳಕೂಡದು."

ತಂಗಿಯ ಕಾತರತೆಯನ್ನು ನೋಡಿ ಜೋಗೇಂದ್ರ, "ಓದಿದ ಹುಡು ಗಿಯರಿಗೆ ಪ್ರಪಂಚಜ್ಞಾನವೇ ಇರುವುದಿಲ್ಲ. ಎಳೆಯ ಮಗುವಿನ ಹಾಗೆ

ಆಡುತ್ತಾಳೆ." ಎಂದುಕೊಂಡನು. ಇಷ್ಟು ನಂಬಿದವಳಿಗೆ ದ್ರೋಹಮಾಡು ತ್ತಿದ್ದ ರಮೇಶನ ವಿಚಾರದಲ್ಲಿ ಅವನ ಎದೆ ಕಲ್ಲಾಯಿತು. ಹೇಗಾದರೂ ಕಾರಣವನ್ನು ತಿಳಿಯಬೇಬೇಕೆಂದು ನಿರ್ಧರಿಸಿ ಹೊರಡಲನುವಾದನು. ಹೇಮನಳಿನಿ ಅವನ ಕೈಹಿಡಿದು, "ಅವರನ್ನು ಈ ವಿಚಾರವಾಗಿ ಪ್ರಶ್ನಿಸು ವುದಿಲ್ಲವೆಂದು ಮಾತುಕೊಡು" ಎಂದಳು.

"ನೋಡೋಣ."

"ನೋಡುವದೇನು? ಮಾತುಕೊಟ್ಟು ಹೋಗು. ಅನುಮಾನಕ್ಕೇನೂ ಆಸ್ಪದವಿಲ್ಲ. ನನಗೋಸ್ಕರ ಇಷ್ಟು ಮಾಡಲಾರೆಯಾ?"

ಇಷ್ಟು ಒತ್ತಿ ಹೇಳಿದುದರಿಂದ ಅವಳಿಗೆ ಕಾರಣ ತಿಳಿದಿರಬಹು ದೆಂದು ಜೋಗೇಂದ್ರನು ಭಾವಿಸಿದನು. ಆದರೆ ಅದು ನಿಜವೆಂಬ ನಂಬಿಕೆ ಯೇನು? ಏನಾದರೂ ಹೇಳಿ ರಮೇಶ ಅವಳನ್ನು ಮೋಸಪಡಿಸಿರಬಹುದು.

"ನೋಡು ಹೇಮಾ, ಇದರಲ್ಲಿ ಅಪನಂಬಿಕೆಯೇನು? ಮದುವೆ ಮಾಡಬೇಕಾದರೆ ಎಲ್ಲಾ ವಿಚಾರಿಸಬೇಕು. ನಿನಗೆ ಮಾತ್ರ ಕಾರಣ ತಿಳಿದರೆ ಸಾಲದು. ಮುಖ್ಯವಾಗಿ ನಮಗೇ ತಿಳಿಯಬೇಕು. ಮದುವೆ ಯಾದ ಮೇಲಂತೂ ಮಾತನಾಡುವಹಾಗಿಲ್ಲ." ಎಂದು ಹೇಳಿ ಹೊರಟು ಹೋದನು.

ಪ್ರೇಮಿಗಳಿಗೆ ಮರೆಯಾಗಿದ್ದ ಮುಸುಕಿನ ಚೂರೂ ಉಳಿಯಲಿಲ್ಲ. ತಮ್ಮದೇ ಪ್ರಪಂಚವನ್ನು ಸೃಷ್ಟಿಸಬೇಕೆಂದಿದ್ದ ಅವರ ನಿರ್ಧಾರವನ್ನು ಎಲ್ಲರೂ ಮುರಿಯಲು ಪ್ರಯತ್ನಿಸುತ್ತಿದ್ದರು.

ಹೇಮನಳಿನಿಗೆ ಬಂಧುಗಳನ್ನು ಕೂಡ ನೋಡಲು ಇಷ್ಟವಿರಲಿಲ್ಲ. ಜೋಗೇಂದ್ರ ಹೊರಟು ಹೋದ ಮೇಲೆ ಕುರ್ಚಿಯಮೇಲೆ ಮಲಗಿ ದಿನ ವನ್ನೆಲ್ಲಾ ಕೊರಡಿಯಲ್ಲೇ ಕಳೆದಳು.

ಮನೆಯನ್ನು ಬಿಟ್ಟು ಹೊರಡುತ್ತಲೇ ಜೋಗೇಂದ್ರನಿಗೆ ಅಕ್ಷಯ ಸಿಕ್ಕಿದನು. "ಸಮಾಚಾರ ಕೇಳಿದೆಯಾ ಜೋಗೇನ್? ಏನೆನ್ನುತ್ತೀ ?"

ಜೋಗೇಂದ್ರ—"ಬರಿಯ ಬಾಯಿ ಮಾತುಗಳಿಂದ ಏನು ಪ್ರಯೋ ಜನ? ಹರಟೆಗೆ ಹೊತ್ತಿಲ್ಲ."

ಅಕ್ಷಯ—ನನಗೂ ಹರಟೆ ಇಷ್ಟವಿಲ್ಲ. ತತ್ವಶಾಸ್ತ್ರವೂ ಕವಿತೆಗಳೂ

ನನಗೆ ಬರುವುದಿಲ್ಲ. ಕೆಲಸದಲ್ಲಿಯೇ ನನಗೂ ಆಸಕ್ತಿ.

ಜೋಗೇ—ರಮೇಶನೆಲ್ಲಿಗೆ ಹೋಗಿದ್ದಾನೆ?

ಅಕ್ಷಯ—ನನಗೆ ಗೊತ್ತು.

ಜೋಗೇ—ಎಲ್ಲಿದ್ದಾನೆ?

ಅಕ್ಷಯ—ಈಗಲೇ ಹೇಳುವುದಿಲ್ಲ. ಮೂರು ಘಂಟೆಗೆ ಬಂದರೆ ಅವನನ್ನೇ ತೋರಿಸುತ್ತೇನೆ.

ಜೋಗೇ—ಸಂಗತಿ ತಿಳಿಸಬಾರದೆ? ರಹಸ್ಯವಿರುವ ಹಾಗೆ ಆಡುತ್ತೀ! ನಾನೆಲ್ಲಾದರೂ ಸ್ವಲ್ಪದಿನ ಹೋದರೆ ಏನೇನೋ ಅವಾಂತರ ಗಳು. ಹೇಳು, ಏನು ಸಮಾಚಾರ?

ಅಕ್ಷಯ—ಅಷ್ಟು ಕೇಳಿದರೆ ಸಾಕು. ನಾನು ಬಾಯಿ ಬಿಚ್ಚಿ ಮಾತ ನಾಡುವುದರಿಂದ ಯಾರಿಗೂ ನನ್ನನ್ನು ಕಂಡರೆ ಆಗುವುದಿಲ್ಲ. ನಿನ್ನ ತಂಗಿ ನನ್ನ ಕಡೆ ನೋಡುವುದಿಲ್ಲ, ನಿಮ್ಮ ತಂದೆ ಗದರಿಸುತ್ತಾರೆ. ರಮೇಶ ಬಾಬುವಿಗೆ ನನ್ನ ನೆರಳು ಕಂಡರೂ ಸಹಿಸುವುದಿಲ್ಲ. ನೀನೂ ಹಾಗೇ ಆದರೆ ನನ್ನ ಗತಿಯೇನು? ನೀನು ಜಗಳಕ್ಕೆದ್ದರೆ ತಡೆದುಕೊಳ್ಳುವ ಶಕ್ತಿ ಕೂಡ ನನಗಿಲ್ಲ.

ಜೋಗೇ—ತಲೆಕೆಳಗು ಮಾತುಗಳು ನನಗೆ ಸರಿಬೀಳುವುದಿಲ್ಲ. ಏನಿದೆಯೋ ಹೇಳಿಬಿಡು.

ಅಕ್ಷಯ—ಹಾಗಾದರೆ ಎಲ್ಲಾ ಕಥೆಯನ್ನೂ ಹೇಳುತ್ತೇನೆ. ನಿನ ಗೊಂದೂ ತಿಳಿಯದು.

## ಅಧ್ಯಾಯ ೧೮

ದರ್ಜಿಪುರದ ಕೊಠಡಿಗಳೂ ರಮೇಶನ ವಶದಲ್ಲೇ ಇದ್ದುವು. ಖರ್ಚಿನ ವಿಚಾರವಾಗಿ ಯೋಚಿಸುವ ಸ್ಥಿತಿಯಲ್ಲಿ ಅವನಿರಲಿಲ್ಲ. ಅಲ್ಲಿ ಮನೆ ಗುಡಿಸಿ, ಊಟದ ಸಾಮಾನುಗಳನ್ನು ಕೊಂಡು ತಂದು ಕಮಲೆಯ ಬರುವಿಕೆಗೆ ಅಣಿಮಾಡಿದನು.

ಅವಳು ಬರುವವರೆಗೂ ಮುಂದೇನೆಂಬ ಚಿಂತೆಯಿಂದ ಒಂದು

ಬೆಂಚಿನ ಮೇಲೆ ಬಿದ್ದುಕೊಂಡಿದ್ದನು. ಎಟಾವದಲ್ಲಿ ತನ್ನ ಮನೆಯನ್ನು ಚಿತ್ರಿಸಿಕೊಂಡನು. ಊರಿಂದಾಚೆ ಮರಗಳಿಂದ ಸುತ್ತಲ್ಪಟ್ಟ ಬಂಗಲೆ; ಎದುರಿಗೆ ವಿಸ್ತಾರವಾದ ಗದ್ದೆಗಳು; ಎತ್ತುಗಳು ನೀರೆತ್ತುವ ಸದ್ದು, ಗಂಟೆಗಳ ಸದ್ದು ಮಾಡಿಕೊಂಡು ಹೋಗುವ ಗಾಡಿಗಳು; ಅಂತಹ ಸ್ಥಳದಲ್ಲಿ ಹೇಮನಳಿನಿಯೊಡನೆ ಕಮಲೆಯಿದ್ದರೆ ಅವಳಿಗೆ ಬೇಸರವಾಗಲಾರದು.

ಮದುವೆಯಾಗುವವರೆಗೂ ಕಮಲೆಗೆ ಸಂಗತಿಯನ್ನು ತಿಳಿಸಬಾರದೆಂದು ನಿರ್ಧರಿಸಿದ್ದನು. ಹೇಮನಳಿನಿಯೇ ಸಮಯ ನೋಡಿ, ಪ್ರೀತಿಯಿಂದ ಎದೆಗಪ್ಪಿಕೊಂಡು ಅವಳ ದುರಂತ ಕಥೆಯನ್ನು ಹೇಳಬಹುದು. ಕಮಲೆಗೂ ಆ ಜೀವನವೇ ಅಭ್ಯಾಸವಾಗಬಹುದು.

ಮಧ್ಯಾಹ್ನ ನಿಶ್ಶಬ್ದವಾಗಿದ್ದಿತು. ಕೆಲಸಗಾರರು ಕೆಲಸಗಳಿಗೆ ಹೋಗಿದ್ದರು. ಶ್ರೀಮಂತರು ವಿಶ್ರಮಿಸಿಕೊಳ್ಳುತ್ತಿದ್ದರು. ನೆಕೆ ಕಡಮೆಯಾಗಿ ಹಬ್ಬವನ್ನು ಸ್ವಾಗತಿಸುವಂತಿತ್ತು. ರಮೇಶ ತನ್ನ ಭವಿಷ್ಯ ಸುಖವನ್ನು ಚಿತ್ರಿಸಿಕೊಂಡು ಆನಂದಿಸುತ್ತಿದ್ದನು.

ಗಾಡಿಯ ಸದ್ದು ಮನೆಯ ಮುಂದೆ ನಿಂತಿತು. ಕಮಲೆ ಬಂದಳೆಂದರಿತು ಅವನ ಹೃದಯ ಬಡಿದುಕೊಳ್ಳಲಾರಂಭಿಸಿತು. ಹೇಗೆ ಎದುರುಗೊಳ್ಳುವುದು; ಏನು ಮಾತನಾಡುವುದು? ಗಾಬರಿಯಾಯಿತು. ಇಬ್ಬರು ಆಳುಗಳು ಕಮಲೆಯ ಪೆಟ್ಟಿಗೆಯನ್ನು ಹೊತ್ತು ತಂದರು. ಕಮಲೆ ಹಿಂದೆ ಬಂದು ಬಾಗಿಲಲ್ಲಿ ನಿಂತಳು.

ರಮೇಶ—ಒಳಗೆ ಬಾ, ಕಮಲಾ.

ಕಮಲೆ ಅನುಮಾನಿಸಿ ಒಳಗೆ ಬಂದಳು. ವಾಠಶಾಲೆಯಲ್ಲೇ ಇರಬೇಕೆಂದು ರಮೇಶ ಹೇಳಿದುದು ಅವಳಿಗೆ ತುಂಬಾ ಸಂಕಟವನ್ನುಂಟುಮಾಡಿದ್ದಿತು. ಆ ನೆನಪೂ, ಅಷ್ಟು ದಿನ ದೂರವಿದ್ದುದೂ, ರಮೇಶ ಹೊಸಬನೆಂಬ ಭಾವನೆಯನ್ನು ತಂದಿತ್ತು. ಕಮಲೆ ತಲೆತಗ್ಗಿಸಿ ನಿಂತಿದ್ದಳು.

ಅವಳನ್ನು ನೋಡಿ ರಮೇಶನಿಗೆ ಆಶ್ಚರ್ಯವಾಯಿತು. ಈ ಕೆಲವು ತಿಂಗಳಲ್ಲಿ ಅವಳು ತುಂಬ ಬದಲಾಯಿಸಿದ್ದಳು. ಹಳ್ಳಿಯ ಹುಡುಗಿ ಕಮಲೆ ಮಾಯವಾಗಿದ್ದಳು. ಬೆಳೆದು ದೊಡ್ಡವಳಾಗಿದ್ದಳು. ಕಿಟಕಿಯ ಕಡೆ ತಿರುಗಿ ನಿಂತಿದ್ದ ಅವಳ ಮುಖದ ಮೇಲೆ ಮಧ್ಯಾಹ್ನದ ಬೆಳಕು

ಬಿದ್ದಿದ್ದಿತು. ಸುಂದರವಾದ ಕೂದಲನ್ನು ಕಟ್ಟಿ ಬೆನ್ನಿನ ಮೇಲೆ ಇಳಿಬಿಟ್ಟಿದ್ದಳು ಕೇಸರಿಬಣ್ಣದ ಸೀರೆ ಬಿಗಿಯಾಗಿ ಅವಳ ದೇಹವನ್ನಪ್ಪಿತ್ತು.

ರಮೇಶ ಕೆಲಹೊತ್ತು ಅವಳನ್ನು ಅವಾಕ್ಕಾಗಿ ನೋಡಿದನು.

ಕಮಲೆ ಎಷ್ಟು ಸುಂದರಿಯೆಂಬುದನ್ನು ಮರೆತಿದ್ದುದರಿಂದ ಇಷ್ಟು ಸೌಂದರ್ಯವನ್ನು ಅವನು ನಿರೀಕ್ಷಿಸಿರಲಿಲ್ಲ.

ರಮೇಶ—ಕುಳಿತುಕೋ, ಕಮಲಾ.

ಕಮಲೆ ಸುಮ್ಮನೆ ಕುಳಿತಳು.

ಏನೂ ಹೇಳಲು ತೋರದೆ ರಮೇಶ, "ಏನಾದರೂ ತಿಂಡಿ ತರಲೆ?" ಎಂದನು.

"ಬೇಡ. ನಾನು ತಿಂದು ಬಂದೆ."

ರಮೇಶ—ಸೇಬು, ದಾಳಿಂಬೆಗಳಿವೆ. ಬೇಕಾದರೆ ತರಿಸುತ್ತೇನೆ.

ಕಮಲೆ ತಲೆಯಾಡಿಸಿದಳು.

ರಮೇಶ ಅವಳನ್ನೇ ದೃಷ್ಟಿಸಿ ನೋಡಿದನು. ತಲೆತಗ್ಗಿಸಿಕೊಂಡು ತನ್ನ ಇಂಗ್ಲಿಷ್ ಪುಸ್ತಕದಲ್ಲಿದ್ದ ಪರಗಳನ್ನು ನೋಡುತ್ತಿದ್ದಳು. ಅವಳ ಸೌಂದರ್ಯ ಸುತ್ತಮುತ್ತಲಿನ ಸನ್ನಿವೇಶಕ್ಕೂ ಪ್ರಸರಿಸಿದಂತಿತ್ತು. ಸೂರ್ಯನ ಬೆಳಕೂ ಕೂಡ ಜೀವಕಳೆಯಿಂದ ತುಂಬಿದಂತಿತ್ತು. ಸೂರ್ಯ ಗ್ರಹಗಳನ್ನಾಕರ್ಷಿಸುವಂತೆ ಈ ಹುಡುಗಿ ಗಾಳಿ ಬೆಳಕುಗಳನ್ನೆಲ್ಲಾ ಸೆಳೆದುಕೊಂಡು ಏನೂ ಅರಿಯದವಳಂತೆ ಚಿತ್ರಗಳನ್ನು ನೋಡುತ್ತಾ ಕುಳಿತಿದ್ದಳು.

ರಮೇಶ ಎದ್ದುಹೋಗಿ ಕೆಲವು ಹಣ್ಣುಗಳನ್ನು ತಂದನು. "ನಿನಗೇನೋ ಹಸಿವಿಲ್ಲ, ಕಮಲ; ನನಗೆ ಹಸಿವನ್ನು ತಡೆಯಲು ಸಾಧ್ಯವಿಲ್ಲ."

ಕಮಲೆ ನಕ್ಕಳು. ಆ ನಗು ಅವರ ನಡುವೆ ಇದ್ದ ಪರಕೀಯತೆಯನ್ನು ಹೋಗಲಾಡಿಸಿತು. ರಮೇಶ ಅವಸರದಿಂದ ಸೇಬನ್ನು ಒರಟಾಗಿ ಕತ್ತರಿಸುವುದನ್ನು ನೋಡಿ ಕಮಲೆ ಗಟ್ಟಿಯಾಗಿ ನಗತೊಡಗಿದಳು.

ಅವಳ ನಗು ರಮೇಶನಿಗೆ ಸಂತೋಷವನ್ನುಂಟುಮಾಡಿತು.

"ನನ್ನನ್ನು ನೋಡಿ ನಗುತ್ತೀಯಲ್ಲಾ; ನೀನು ಕತ್ತರಿಸು

ನೋಡೋಣ."

"ಚಾಕುವಿನಿಂದ ನನ್ನ ಕೈಲಾಗುವುದಿಲ್ಲ."

"ಈಳಿಗೆಮಣೆ ಇರಬಹುದು," ಎಂದು ಆಳನ್ನು ಕೂಗಿದನು.

ಆಳು—ನಿನ್ನೆ ಕೊಂಡು ತಂದೆವು.

ರಮೇಶ—ಚೊಕ್ಕಟವಾಗಿ ತೊಳೆದು ತೆಗೆದುಕೊಂಡು ಬಾ.

ಈಳಿಗೆ ಮಣೆ ಬರಲು, ಕಮಲೆ ಜೋಡುಗಳನ್ನು ದೂರ ಬಿಟ್ಟು, ಕುಳಿತು ಹಣ್ಣಿನ ಸಿಪ್ಪೆಯನ್ನು ತೆಗೆದಳು. ರಮೇಶ ಹೋಳುಗಳನ್ನು ತಟ್ಟೆಯಲ್ಲಿಟ್ಟುಕೊಂಡು, "ನೀನು ಸ್ವಲ್ಪ ತಿನ್ನು" ಎಂದನು.

ಕಮಲೆ "ನನಗೇನೂ ಬೇಡ" ಎಂದಳು.

"ಹಾಗಾದರೆ ನಾನೂ ತಿನ್ನುವುದಿಲ್ಲ."

ಕಮಲೆ ತಲೆಯೆತ್ತಿ, "ನೀವು ಮೊದಲು ತಿನ್ನಿ. ಆಮೇಲೆ ನಾನು ತೆಗೆದುಕೊಳ್ಳುತ್ತೇನೆ."

"ತಿನ್ನದೆ ಇರಕೂಡದು."

"ಇಲ್ಲ. ಸತ್ಯವಾಗಿ ತಿನ್ನುತ್ತೇನೆ.

ರಮೇಶ ಒಂದು ಹೋಳನ್ನು ಬಾಯಲ್ಲಿ ಹಾಕಿಕೊಂಡನು. ಜೋಗೇಂದ್ರನೂ, ಅಕ್ಷಯನೂ ಬಾಗಿಲಲ್ಲಿ ನಿಂತಿದ್ದರು.

ಅಕ್ಷಯ—ತಪ್ಪಾಯಿತು, ರಮೇಶಬಾಬು! ಒಬ್ಬರೇ ಇದ್ದೀರಿ ಎಂದುಕೊಂಡೆವು. ತಿಳಿಸದೆ ನಾವು ಹೀಗೆ ಬರಬಾರದಾಗಿತ್ತು. ಜೋಗೆನ್! ಬಾ ಕೆಳಗೆ ಹೋಗಿ ಕಾದಿರೋಣ."

ಕಮಲೆ ಗಾಬರಿಯಿಂದ ಎದ್ದುನಿಂತಳು. ಬಾಗಿಲಿಗೆ ಅಡ್ಡಲಾಗಿ ಇಬ್ಬರೂ ನಿಂತಿದ್ದರು. ಜೋಗೇಂದ್ರನು ಎವೆಯಿಕ್ಕದೆ ಅವಳನ್ನೇ ನೋಡುತ್ತಿದ್ದನು. ಅವನೇ ಸ್ವಲ್ಪ ಪಕ್ಕಕ್ಕೆ ಸರಿಯಲು ಕಮಲೆ ಪಕ್ಕದ ಕೊಠಡಿಗೆ ಓಡಿದಳು.

## ಅಧ್ಯಾಯ ೧೯

ಜೋಗೇಂದ್ರ—ಆ ಹುಡುಗಿ ಯಾರು ರಮೇಶ?

ರಮೇಶ—ನನ್ನ ಸಂಬಂಧಿಕಳು.

ಜೋಗೇ—ನಿನ್ನ ಸಂಬಂಧಿಕರೆಲ್ಲಾ ನನಗೆ ತಿಳಿದವರೇ. ಈ ಹುಡುಗಿ ಗೊತ್ತಿಲ್ಲವಲ್ಲಾ?

ಅಕ್ಷಯ—ಹಾಗೆಲ್ಲಾ ಕೇಳಬಾರದು, ಜೋಗೆನ್. ಸ್ನೇಹಿತರಿಗೂ ತಿಳಿಸಬಾರದ ರಹಸ್ಯಗಳು ಕೆಲವಿರುತ್ತವೆ.

ಜೋಗೇ—ಇದು ಅಂತಹ ರಹಸ್ಯವೆ, ರಮೇಶ?

ರಮೇಶನ ಮುಖ ಕೆಂಪಾಯಿತು. "ಹೌದು, ರಹಸ್ಯವೇ. ಈ ಹುಡುಗಿಯ ವೃತ್ತಾಂತವನ್ನು ನಿಮ್ಮೊಡನೆ ಚರ್ಚಿಸಲು ನನಗಿಷ್ಟವಿಲ್ಲ.

ಜೋಗೇ—ಆದರೂ ನಾನು ಚರ್ಚಿಸಬೇಕಾಗಿದೆ. ಹೇಮನಳಿನಿ ಯೊಡನೆ ಮದುವೆಯ ಮಾತಿಲ್ಲದಿದ್ದರೆ ನಿನ್ನ ರಹಸ್ಯಗಳಲ್ಲಿ ನಾನು ತಲೆ ಹಾಕುತ್ತಿರಲಿಲ್ಲ.

ರಮೇಶ—ಆ ಮದುವೆಗೆ ಅಡ್ಡಿ ಬರುವಂತಹ ಯಾವ ಸಂಬಂಧ ವನ್ನೂ ನಾನು ಮಾಡಿಕೊಂಡಿಲ್ಲವೆಂದು ಪ್ರಮಾಣಪೂರ್ವಕವಾಗಿ ಹೇಳ ಬಲ್ಲೆನು.

ಜೋಗೇ—ನಿನಗೆ ಹಾಗೆ ತೋರಬಹುದು. ನಮಗೆ ಸಮಾಧಾನ ವಿಲ್ಲವಲ್ಲಾ! ನನಗೆ ತಿಳಿಯಬೇಕಾಗಿರುವುದಿಷ್ಟೆ. ಆಕೆ ಸಂಬಂಧಿಯಾಗಿರಲಿ ಇಲ್ಲದಿರಲಿ; ಇಲ್ಲಿ ಬಚ್ಚಿಟ್ಟಿರುವುದೇಕೆ?

ರಮೇಶ—ಅದನ್ನು ಹೇಳಿದರೆ ರಹಸ್ಯವನ್ನು ಹೊರಗೆಡವಿದಂತಾಗು ತ್ತದೆ. ನನ್ನ ಮಾತಿನಲ್ಲಿ ನಂಬಿಕೆಯಿಲ್ಲವೆ?

ಜೋಗೇ—ಈಕೆಯ ಹೆಸರು ಕಮಲೆಯಲ್ಲವೆ?

ರಮೇಶ—ಹೌದು.

ಜೋಗೇ—ಆಕೆಯನ್ನು ಹೆಂಡತಿಯೆಂದು ಎಲ್ಲರೊಡನೆ ಹೇಳಿರು ವೆಯೋ, ಇಲ್ಲವೋ?

ರಮೇಶ—ಹೇಳಿದ್ದೇನೆ.

ಜೋಗೇ—ನಿನ್ನನ್ನು ಹೇಗೆ ನಂಬುವುದು? ಎಲ್ಲರೊಡನೆ ಹೆಂಡತಿಯೆಂದು ಹೇಳಿ ನಮ್ಮೊಡನೆ ಅಲ್ಲವೆನ್ನುತ್ತೀಯಲ್ಲಾ.

ಅಕ್ಷಯ—ಒಂದು ಕತೆಯಂತೂ ನಿಜವಿರಬೇಕು. ನಮಗೆ ಹೇಳುತ್ತಿರುವುದೇ ನಿಜವಿರಬಹುದು.

ರಮೇಶ—ನಾನು ಏನೂ ಹೇಳುವುದಿಲ್ಲ. ಹೇಮನಳಿನಿಗೆ ಅನ್ಯಾಯ ಮಾಡುವುದಿಲ್ಲವೆಂದು ಮಾತ್ರ ಹೇಳಬಲ್ಲೆ. ಕಮಲೆಯ ಸಂಗತಿಯನ್ನು ನಾನು ಚರ್ಚಿಸುವುದಿಲ್ಲ. ನಿಮಗೆ ನನ್ನಲ್ಲಿ ಅನುಮಾನ ಹುಟ್ಟಿದರೂ ಚಿಂತೆಯಿಲ್ಲ. ನನಗೊಬ್ಬನಿಗೇ ತೊಂದರೆಯಾಗುವ ಹಾಗಿದ್ದರೆ ಹೇಳಿಬಿಡುತ್ತಿದ್ದೆ. ಆಕೆಯನ್ನು ತೊಂದರೆಗೆ ಸಿಕ್ಕಿಸುವ ಹಕ್ಕು ನನಗಿಲ್ಲ.

ಜೋಗೇ—ಎಲ್ಲವನ್ನೂ ಹೇಮನಳಿನಿಗೆ ತಿಳಿಸಿದ್ದೀಯೋ?

ರಮೇಶ—ಮದುವೆಯಾದಮೇಲೆ ಹೇಳುತ್ತೇನೆ. ಅವಳು ಕೇಳಿದರೆ ಈಗಲೇ ಹೇಳಲು ಸಿದ್ಧನಾಗಿದ್ದೇನೆ.

ಜೋಗೇ—ಕಮಲೆಯನ್ನು ನಾನು ಪ್ರಶ್ನಿಸಬಹುದೋ?

ರಮೇಶ—ಕೂಡದು! ತಪ್ಪಿದ್ದರೆ ನನ್ನನ್ನು ಶಿಕ್ಷಿಸಿ. ಕಮಲೆ ನಿರಪರಾಧಿನಿ. ಆಕೆಯನ್ನು ಪ್ರಶ್ನಿಸಿ ಹಿಂಸೆ ಮಾಡಕೂಡದು.

ಜೋಗೇ—ಯಾರನ್ನೂ ಪ್ರಶ್ನಿಸಬೇಕಾಗಿಲ್ಲ ತಿಳಿಯಬೇಕಾದುದೆಲ್ಲಾ ತಿಳಿದಹಾಗಾಯಿತು. ತಿರುಗಿ ನೀನು ನಮ್ಮ ಮನೆಯೊಳಕ್ಕೆ ಬಂದರೆ ಅವಮಾನವಾದೀತು!

ರಮೇಶ ಮಾತನಾಡಲಿಲ್ಲ.

ಜೋಗೇ—ಇನ್ನೊಂದು ಮಾತು. ನೀನು ಹೇಮನಳಿನಿಗೆ ಕಾಗದವನ್ನೂ ಬರೆಯಕೂಡದು. ಬರೆದರೆ ನಿನ್ನ ರಹಸ್ಯವನ್ನೆಲ್ಲಾ ಹೊರಗೆಡಹುತ್ತೇನೆ. ಈಗ ಯಾರಾದರೂ ಮದುವೆಯೇಕೆ ನಿಂತಿತೆಂದು ವಿಚಾರಿಸಿದರೆ ನನಗಿಷ್ಟಬರಲಿಲ್ಲವೆಂದು ಹೇಳುತ್ತೇನೆ. ನಿಜವಾದ ಕಾರಣವನ್ನು ಹೇಳುವುದಿಲ್ಲ. ನೀನು ಎಚ್ಚರಿಕೆಯಿಂದ ಇರದಿದ್ದರೆ ಮಾತ್ರ ನಿನ್ನ ಕಥೆಯೆಲ್ಲಾ ಹೊರಕ್ಕೆ ಬರುತ್ತದೆ. ನಿನ್ನೊಡನೆ ನಾನು ಸಹಾನುಭೂತಿ ತೋರಿಸುತ್ತಿರುವೆನೆಂದುಕೊಳ್ಳಬೇಡ. ಹೇಮನಳಿನಿಗೋಸ್ಕರ ಸುಮ್ಮನಿರ

ಬೇಕಾಗಿದೆ. ನಿನಗೆ ಅವಮಾನದ ಭಯವೇನಾದರೂ ಇದ್ದರೆ ಎಚ್ಚರಿಕೆಯಾಗಿರು.

ಅಕ್ಷಯ—ಎಷ್ಟು ನಿಷ್ಠುರವಾಗಿ ಮಾತನಾಡುತ್ತೀ, ಜೋಗೆನ್! ಪಾಪ, ರಮೇಶಬಾಬು ಎದುರುತ್ತರ ಕೂಡ ಕೊಡಲಿಲ್ಲ. ಹೋಗಲಿ, ಹೊರಡೋಣ, ಬಾ.

ರಮೇಶ ಕದಲಲಿಲ್ಲ. ಜೋಗೇಂದ್ರ ಅಕ್ಷಯರು ಹೊರಟು ಹೋದಮೇಲೆ ಹೊರಗೆ ಸುತ್ತಾಡಿ ಬರಬೇಕೆಂದು ರಮೇಶನಿಗೆನಿಸಿತು. ಆದರೆ ಹೊಸಸ್ಥಳದಲ್ಲಿ ಕಮಲೆಯೊಬ್ಬಳನ್ನೇ ಬಿಟ್ಟು ಹೇಗೆ ಹೋಗುವುದು. ಪಕ್ಕದ ಕೊಠಡಿಯಲ್ಲಿ ಕಮಲೆ ಕಿಟಕಿಯಲ್ಲಿ ಕುಳಿತು ಹೊರಗೆ ನೋಡುತ್ತಿದ್ದಳು ರಮೇಶ ಬರಲು ತಿರುಗಿದಳು. ಅವನು ನೆಲದ ಮೇಲೆ ಕುಳಿತನು.

ಕಮಲ—ಈಗ ಬಂದವರು ಯಾರು? ನಮ್ಮ ಸ್ಕೂಲಿಗೂ ಬಂದಿದ್ದರು.

ರಮೇಶ—ಸ್ಕೂಲಿಗೆ ಬಂದಿದ್ದರೆ?

ಕಮಲ—ಹೌದು. ನಿಮ್ಮೊಡನೆ ಏನು ಹೇಳಿದರು?

ರಮೇಶ—ನೀನು ನನಗೇನಾಗಬೇಕೆಂದು ಕೇಳಿದರು. ಏನೂ ಇಲ್ಲವೆಂದು ಹೇಳಿದೆ.

ಕಮಲೆಗೆ ಈ ತಮಾಷೆ ಸರಿಬೀಳದೆ "ಹುಡುಗಾಟವಾಡಬೇಡಿ." ಎಂದಳು.

ನಿಜ ಸಂಗತಿಯನ್ನು ಅವಳಿಗೆ ಹೇಗೆ ಹೇಳುವುದೋ ರಮೇಶನಿಗೆ ತಿಳಿಯಲಿಲ್ಲ.

ಕಮಲೆ, "ಅಯ್ಯೋ! ಕಾಗೆ ಹಣ್ಣನ್ನು ಕಚ್ಚಿಕೊಂಡು ಹೋಯಿತು" ಎಂದು ಪಕ್ಕದ ಕೊಠಡಿಗೆ ಓಡಿಹೋಗಿ ಹಣ್ಣನ್ನು ತಂದು, "ತಿನ್ನುವುದಿಲ್ಲವೆ?" ಎಂದು ಅವನ ಮುಂದೆ ತಟ್ಟೆಯನ್ನಿಟ್ಟಳು.

ರಮೇಶ ತಿನ್ನುವ ಸ್ಥಿತಿಯಲ್ಲಿರಲಿಲ್ಲ. ಆದರೆ ಅವಳನ್ನು ನೋಡಿ ಕನಿಕರದಿಂದ, "ನೀನೂ ತಿನ್ನು ಕಮಲಾ" ಎಂದನು.

"ನಿಮ್ಮದಾಗಲಿ," ಎಂದಳು. ಹಿಂದೂ ಸ್ತ್ರೀ ಗಂಡನಿಗಿಂತ ಮೊದಲು

ತಿನ್ನುವುದಿಲ್ಲವಷ್ಟೆ. ಅವಳ ಈ ನಡತೆಯನ್ನು ನೋಡಿ ರಮೇಶನ ಕಣ್ಣಲ್ಲಿ ನೀರು ಬಂತು. ಮಾತನಾಡದೆ ತಿನ್ನಲಾರಂಭಿಸಿದನು.

"ಈ ರಾತ್ರಿ ಊರಿಗೆ ಹೊರಡಬೇಕು, ಕಮಲಾ."

ಕಮಲೆಗೆ ಇಷ್ಟವಿಲ್ಲದೆ "ನನಗೆ ಬೇಜಾರು" ಎಂದಳು.

ರಮೇಶ—ಹಾಗಾದರೆ ಸ್ಕೂಲಿನಲ್ಲೇ ಇರುತ್ತೀಯಾ?

ಕಮಲೆ—ಅಲ್ಲಿಗೆ ಮಾತ್ರ ಕಳುಹಿಸಬೇಡಿ. ಹುಡುಗಿಯರೆಲ್ಲಾ ನಿಮ್ಮ ವಿಚಾರ ಕೇಳುತ್ತಾರೆ. ನನಗೆ ನಾಚಿಕೆಯಾಗುತ್ತದೆ.

ರಮೇಶ—ನೀನೇನು ಹೇಳಿದೆ.

ಕಮಲ—ಏನೂ ಇಲ್ಲ. ನನ್ನನ್ನು ರಜದಲ್ಲಿ ಏಕೆ ಕರೆದುಕೊಂಡು ಹೋಗಲಿಲ್ಲ ಎಂದು ಕೇಳಿದರು. ನಾನು. . . ." ಕಮಲೆಗೆ ಗಂಟಲು ಕಟ್ಟಿಬಂತು

ರಮೇಶ—ನನಗೂ ನಿನಗೂ ಏನೂ ಸಂಬಂಧವಿಲ್ಲವೆಂದು ಏಕೆ ಹೇಳಲಿಲ್ಲ?

ಕಮಲೆ ಬೇಸರದಿಂದ ಪುನಃ "ಹಡುಗಾಟವಾಡಬೇಡಿ." ಎಂದಳು.

ರಮೇಶನಿಗೆ ಏನುಮಾಡಬೇಕೆಂದು ತೋರಲಿಲ್ಲ. ಮನಸ್ಸು ಉದ್ವಿಗ್ನವಾಗಿತ್ತು. ಜೋಗೇಂದ್ರ ಹೇಮನಳಿನಿಯೊಡನೆ ಏನೆಂದು ಹೇಳಿರಬಹುದು. ಅವಳಿಗೆ ನಿಜ ಸಂಗತಿಯನ್ನು ತಿಳಿಸುವುದು ಹೇಗೆ? ಎಂದೆಂದಿಗೂ ಅವಳಿಂದ ದೂರವಾಗಿರುವುದು ಹೇಗೆ? ಪ್ರಶ್ನೆಗಳೊಂದಕ್ಕೂ ಉತ್ತರ ಹೇಳುವ ಸ್ಥಿತಿಯಲ್ಲಿರಲಿಲ್ಲ. ಕಲ್ಕತ್ತೆಯ ಪರಿಚಿತರೆಲ್ಲಾ ಕಮಲೆ ಮತ್ತು ತನ್ನ ವಿಚಾರವನ್ನು ಚರ್ಚಿಸುತ್ತಿರಬಹುದು. ಕಮಲೆಯನ್ನು ಹೆಂಡತಿಯೆಂದು ಹೇಳಿದಮೇಲೆ ಅಲ್ಲಿರಲು ಸಾಧ್ಯವಿಲ್ಲ.

ಅವನು ಅನ್ಯಮನಸ್ಕನಾಗಿದ್ದುದನ್ನು ಕಮಲೆ ನೋಡಿ, "ಏನು ಆಲೋಚನೆ? ಬೇಕಾದರೆ ಊರಿಗೇ ಹೋಗೋಣ."

ತನ್ನ ಸುಖದಕಡೆಗೇ ಗಮನಕೊಡುತ್ತಿದ್ದ ಕಮಲೆಯನ್ನು ನೋಡಿ ರಮೇಶನಿಗೆ ತುಂಬಾ ಕನಿಕರವುಂಟಾಯಿತು. ಮಾತನಾಡದೆ ಅವಳನ್ನೇ ದೃಷ್ಟಿಸಿ ನೋಡಿದನು.

ಕಮಲೆ ಗಂಭೀರವಾಗಿ, "ನಾನು ಶಾಲೆಯಲ್ಲಿ ನಿಲ್ಲದೆ ಬಂದುದಕೆ

ಅಸಮಾಧಾನವೆ ?" ಎಂದಳು.

ರಮೇಶ—ನಿನ್ನ ಮೇಲೆ ಅಸಮಾಧಾನವಿಲ್ಲ, ಕಮಲಾ. ನನ್ನ ಮೇಲೇ ಜುಗುಪ್ಸೆ.

ಕಷ್ಟದಿಂದ ಕಮಲೆಯ ಮಾತುಗಳಿಗೆ ಗಮನಕೊಡಲಾರಂಭಿಸಿದನು.

"ಶಾಲೆಯಲ್ಲಿ ಏನೇನು ಕಲಿತೆ ?"

ಕಮಲೆಗೆ ಸಂತೋಷವಾಯಿತು. ಭೂಮಿ ಗುಂಡಾಗಿರುವುದೆಂದಳು. ರಮೇಶ ನಂಬದಂತೆ ನಟಿಸಿದನು.

"ನಮ್ಮ ಪುಸ್ತಕದಲ್ಲಿದೆ."

"ನಿಜವಾಗಿ ? ಎಷ್ಟು ದೊಡ್ಡ ಪುಸ್ತಕ !"

"ಅಷ್ಟೇನೂ ದೊಡ್ಡದಲ್ಲ. ಆದರೆ ಮುದ್ರಿಸಿದ ಪುಸ್ತಕ. ಪಠಗಳೂ ಇವೆ."

ಇಷ್ಟೆಲ್ಲಾ ಆದಮೇಲೆ ರಮೇಶ ಸೋಲನ್ನೊಪ್ಪಿಕೊಳ್ಳಲೇ ಬೇಕಾಯಿತು. ಕಮಲೆ ತನ್ನ ಸಂಗಾತಿಯರ ಮತ್ತು ಉಪಾಧ್ಯಾಯಿನಿಯರ ವಿಚಾರವನ್ನು ಹೇಳತೊಡಗಿದಳು. ರಮೇಶ ಅನ್ಯಮನಸ್ಕನಾಗಿ ಹೊಗುಟ್ಟುತ್ತಿದ್ದನು. ಕಮಲೆ "ನೀವು ಕೇಳುತ್ತಲೇ ಇಲ್ಲ" ಎಂದು ಬೇಸರದಿಂದ ಎದ್ದು ನಿಂತಳು.

ರಮೇಶ—ಕೋಪಿಸಿಕೊಳ್ಳಬೇಡ. ನನಗೆ ಸ್ವಸ್ಥವಾಗಿಲ್ಲ."

ಕಮಲೆ ಗಾಬರಿಯಿಂದ, "ಏನಾಗಿದೆ?" ಎಂದಳು.

"ಖಾಯಿಲೆ ಏನೂ ಇಲ್ಲ. ಒಂದೊಂದು ಸಲ ಹಾಗಾಗುತ್ತೆ. ಮುಂದಕ್ಕೆ ಹೇಳು."

"ನನ್ನ ಭೂಗೋಳದಲ್ಲಿರುವ ಚಿತ್ರಗಳನ್ನು ತೋರಿಸಲೇ?"

ರಮೇಶ ಒಪ್ಪಿದನು.

ಕಮಲೆ ಪುಸ್ತಕವನ್ನು ಅವನ ಮುಂದೆ ಹಿಡಿದು, "ಈ ಎರಡು ಗೋಳಗಳೂ ಒಂದೇ. ಗುಂಡಾದ ಪದಾರ್ಥದ ಎರಡು ಕಡೆಯೂ ಒಂದೇಸಲ ಕಾಣಿಸುವುದಿಲ್ಲ," ಎಂದಳು.

ರಮೇಶ ಆಲೋಚಿಸಿ, "ಚಪ್ಪಟೆಯಾದ ಪದಾರ್ಥವೂ ಹಾಗೆಯೇ,"

ಎಂದನು.

ಕಮಲೆ, "ಅದರಿಂದಲೇ ಎರಡು ಗೋಳಗಳನ್ನೂ ಹೀಗೆ ಬೇರೆ ಬೇರೆಯಾಗಿ ತೋರಿಸಿದೆ," ಎಂದು ಹೇಳಲಾರಂಭಿಸಿದಳು. ರಜೆಯ ಮೊದಲನೆ ಸಂಜೆ ಹೀಗೆ ಕಳೆಯಿತು.

## ಅಧ್ಯಾಯ ೨೦

ವಿಚಾರಿಸಿ ಎಲ್ಲಾ ಸರಿಯಾಗಿದೆಯೆಂದು ಜೋಗೇಂದ್ರ ಹೇಳುವನೆಂದು ಆನಂದಬಾಬು ನಿರೀಕ್ಷಿಸುತ್ತಿದ್ದನು.

ಪ್ರಾರಂಭಿಸುವಾಗಲೇ, "ಹೀಗೆಂದು ತಿಳಿದಿದ್ದರೆ ನಾನು ರಮೇಶನನ್ನು ನಿಮಗೆಲ್ಲಾ ಪರಿಚಯಮಾಡಿಕೊಡುತ್ತಲೇ ಇರಲಿಲ್ಲ," ಎಂದು ಜೋಗೇಂದ್ರನೆಂದನು.

ಆನಂದಬಾಬು—ಹೇಮನಳಿನಿಗೆ ತಕ್ಕ ವರ ರಮೇಶನೇ ಎಂದು ನೀನೇ ಹೇಳುತ್ತಿದ್ದೆ?

ಜೋಗೇ—ನನಗೂ ತಿಳಿಯಲಿಲ್ಲ. ಆದರೆ........

ಆನಂದ—'ಆದರೆ' ಏನು ಬಂತು? ತಪ್ಪೇನು?

ಜೋಗೇ--ಇಷ್ಟುದೂರ ಹೋಗಲು ಬಿಡಬಾರದಾಗಿತ್ತು.

ಅಕ್ಷಯ – ಕೆಲವು ವಿಚಾರಗಳು ಕೈಮೀರಿ ಹೋಗುತ್ತವೆ. ಚಲ್ಲಿದ ಹಾಲನ್ನು ಕುರಿತು ದುಃಖಪಟ್ಟೇನು ಪ್ರಯೋಜನ? ಮುಂದಿನ ವಿಚಾರ ಆಲೋಚಿಸು.

ಆನಂದ—ರಮೇಶ ಸಿಕ್ಕಿದನೇ?

ಜೋಗೇ—ಸಿಕ್ಕದೆ ಏನು? ಅವನ ಹೆಂಡತಿಯನ್ನೂ ನೋಡಿ ಬಂದೆವು.

ಆನಂದಬಾಬು ಗಾಬರಿಯಿಂದ, "ಹೆಂಡತಿ!!" ಎಂದನು.

ಜೋಗೇ—ಹೌದು. ರಮೇಶನ ಹೆಂಡತಿ.

ಆನಂದ—ನನಗೆ ಅರ್ಥವಾಗಲಿಲ್ಲ. ಯಾವ ರಮೇಶನ ಹೆಂಡತಿ?

ಜೋಗೇ—ನಮ್ಮ ರಮೇಶನ ಹೆಂಡತಿ. ಆಗ ಅವನು ಊರಿಗೆ

ಹೋಗಿದ್ದು ಮದುವೆಗೆ.

ಆನಂದ—ತಂದೆ ಸತ್ತುದರಿಂದ ಆ ಮದುವೆ ನಿಂತು ಹೋಯಿ ತೆಂದಿದ್ದೆವಲ್ಲಾ.

ಜೋಗೇ—ಸಾಯುವ ಮೊದಲೇ ಇವನ ಮದುವೆಯಾಗಿತ್ತು.

ಆನಂದಬಾಬು ಮಾತಿಲ್ಲದೆ ತಲೆ ಸವರಿಕೊಳ್ಳುತ್ತಿದ್ದನು. "ಹಾಗಾದರೆ ಅವನು ನಮ್ಮ ಹೇಮಾನ ಮದುವೆಯಾಗುವ ಹಾಗಿಲ್ಲ?" ಸ್ವಲ್ಪ ಹೊತ್ತು ಬಿಟ್ಟು ಕೇಳಿದನು.

ಜೋಗೇ—ಅದರಿಂದಲೇ ..........

ಆನಂದ—ಮದುವೆ ಏರ್ಪಾಟೆಲ್ಲಾ ಆಗಿದೆ. ಒಂದು ವಾರ ಮುಂದೆ ಹಾಕಿದ್ದೆವು. ಈಗ ನಿಂತುಹೋಯಿತೆಂದು ಎಲ್ಲರಿಗೂ ಬರೆಯಬೇಕು.

ಜೋಗೇ—ನಿಲ್ಲಿಸಬೇಕಾಗಿಲ್ಲ. ಸ್ವಲ್ಪ ಬದಲಾಯಿಸಬೇಕು ಅಷ್ಟೆ.

ಆಶ್ಚರ್ಯದಿಂದ ಆನಂದಬಾಬು, "ಏನು ಬದಲಾವಣೆ?" ಎಂದನು.

ಜೋಗೇ—ವರನ ಹೆಸರು. ಮುಂದಿನ ವಾರವಾದರೂ ಮದುವೆ ಆಗದಿದ್ದರೆ ಜನರೆದುರಿಗೆ ತಲೆಯೆತ್ತುವ ಹಾಗೇ ಇಲ್ಲ.

ಅಕ್ಷಯ ತಲೆತಗ್ಗಿಸಿ ನಿಂತಿದ್ದನು.

ಆನಂದ—ಅಷ್ಟು ಬೇಗ ಇನ್ನೊಬ್ಬ ವರನೆಲ್ಲಿ ಸಿಕ್ಕುತ್ತಾನೆ?

ಜೋಗೇ—ಅದೇನೂ ಚಿಂತೆಯಿಲ್ಲ.

ಆನಂದ—ಹೇಮ ಒಪ್ಪಬೇಕಲ್ಲಾ?

ಜೋಗೇ—ರಮೇಶನ ನಡತೆ ತಿಳಿದರೆ ಖಂಡಿತ ಒಪ್ಪುತ್ತಾಳೆ.

ಆನಂದ—ನಿನಗೆ ತೋರಿದ ಹಾಗೆ ಮಾಡು. ರಮೇಶ ಬುದ್ಧಿವಂತ. ಎಟಾವಕ್ಕೆ ಹೋಗೋಣವೆಂದು ನಿನ್ನೆ ತಾನೆ ಹೇಳಿದ್ದ.

ಜೋಗೇ—ಎಲ್ಲಿ ಬೇಕಾದರೆ ಅಲ್ಲಿ ಹೋಗಲಿ. ಹೇಮಾನ ಕರೆಯಿರಿ. ನಿರ್ಧರಿಸೋಣ.

ಜೋಗೇಂದ್ರನೇ ಹೇಮನಳಿನಿಯನ್ನು ಕರೆತಂದನು. ಅಕ್ಷಯ ಬೀರುವಿನ ಹಿಂದೆ ನಿಂತನು.

ಹೇಮನಳಿನಿ ಬೇಸರದಿಂದ ಕುರ್ಚಿಯ ಮೇಲೆ ಕುಳಿತಳು.

ಜೋಗೇಂದ್ರ ನಿಧಾನವಾಗಿ, "ರಮೇಶನಲ್ಲಿ ನಿನಗೂ ಏನೂ

ಅಪನಂಬಿಕೆ ತೋರಲಿಲ್ಲವೆ?"

ಹೇಮ ತಲೆಯಾಡಿಸಿದಳು.

"ಮದುವೆ ಒಂದು ವಾರ ಮುಂದೆ ಹಾಕಿಸಲು ನಮಗೆ ಹೇಳಬಾರದ ಕಾರಣವೇನಿರಬಹುದು?"

ತಲೆಯೆತ್ತದೆ ಹೇಮ, "ಏನೋ ಇರಬೇಕು" ಎಂದಳು.

"ಕಾರಣವೇನೋ ಇದೆ. ಅದೇ ಅನುಮಾನ ಬರಲಿಲ್ಲವೆ?"

ಹೇಮನಳಿನಿ ಇಲ್ಲವೆಂದು ತಲೆಯಾಡಿಸಿದಳು.

ಎಲ್ಲರಿಗೂ ರಮೇಶನಲ್ಲಿದ್ದ ನಂಬಿಕೆಯನ್ನು ಕಂಡು ಬೇಸರದಿಂದ ಜೋಗೇಂದ್ರ ಕಠಿಣವಾಗಿ, "ಆಗ ತಂದೆಯೊಡನೆ ರಮೇಶ ಹೋದ. ಅನೇಕ ದಿನಗಳವರೆಗೆ ನಮ್ಮ ಮನೆಗೆ ಬರಲಿಲ್ಲ. ದೂರವಾಗಿ ಮನೆ ಮಾಡಿದ. ಆದರೂ ನಿಮಗೆ ಅನುಮಾನ ಬರಲಿಲ್ಲ. ನಾನಿಲ್ಲೇ ಇದ್ದಿದ್ದರೆ ಹೀಗಾಗುತ್ತಿರಲಿಲ್ಲ."

ಹೇಮನಳಿನಿ ಮಾತನಾಡಲಿಲ್ಲ.

ಜೋಗೇ—ಅವನನ್ನು ಕೇಳಬೇಡವೇ? ನಿಮ್ಮ ಕುರುಡು ನಂಬಿಕೆ ನೋಡಿ ನನಗಾಶ್ಚರ್ಯವಾಗುತ್ತೆ.

ಆದರೂ ಹೇಮ ಮೌನ.

ಜೋಗೇ—ನನ್ನ ಮಾತನ್ನು ನಂಬು. ನಾನೇ ಹೆಂಗಸರ ಶಾಲೆಗೆ ಹೋಗಿ ಅಲ್ಲಿ ರಮೇಶನ ಹೆಂಡತಿಯನ್ನು ನೋಡಿದೆ. ರಜೆಯಲ್ಲಿ ಅವಳನ್ನು ಅಲ್ಲೇ ಬಿಡಲು ಏರ್ಪಾಟು ಮಾಡಿದ್ದ. ಎರಡು ಮೂರು ದಿನಗಳ ಕೆಳಗೆ ಕಮಲೆಯನ್ನು ಶಾಲೆಯಲ್ಲಿ ಇಟ್ಟುಕೊಳ್ಳಲು ಸಾಧ್ಯವಿಲ್ಲವೆಂದು ಮುಖ್ಯೋಪಾಧ್ಯಾಯಿನಿ ಬರೆದಳು. ಈ ದಿನ ಶಾಲೆ ಮುಚ್ಚಿದಾಗ ಕಮಲೆ ದರ್ಜಿಪುರಕ್ಕೆ ಹೋದಳು. ನಾನು ಅಲ್ಲಿಗೆ ಹೋದಾಗ ಅವಳು ಕತ್ತರಿಸಿ ಕೊಡುತ್ತಿದ್ದ ಹಣ್ಣನ್ನು ರಮೇಶ ತಿನ್ನುತ್ತಾ ಕುಳಿತಿದ್ದ. ಕೇಳಿದರೆ ಅವನು ಏನೂ ಹೇಳಲಿಲ್ಲ. ಕಮಲೆ ಹೆಂಡತಿಯಲ್ಲವೆಂದು ಅವನು ಹೇಳಿದ್ದರೆ ನಂಬುತ್ತಿದ್ದೆವು. ನಿಮಗಿನ್ನೂ ಅವನಲ್ಲಿ ನಂಬಿಕೆಯೆ?"

ಜೋಗೇಂದ್ರ ತಂಗಿಯ ಮುಖವನ್ನು ನೋಡುತ್ತಾ ಉತ್ತರಕ್ಕೆ ಕಾದನು. ಅವಳು ಬಲವನ್ನೆಲ್ಲಾ ಬಿಟ್ಟು ಕುರ್ಚಿಯ ಕೈಗಳನ್ನು

ಅಮುಕಿ ಹಿಡಿದಿದ್ದಳು. ಮರುಕ್ಷಣ ಜ್ಞಾನತಪ್ಪಿ ನೆಲಕ್ಕೆ ಬಿದ್ದಳು. ಆನಂದಬಾಬು ಮಗಳನ್ನು ತೊಡೆಯ ಮೇಲಿಟ್ಟುಕೊಂಡು, "ಏನಮ್ಮಾ, ಏನಾಯಿತು? ಅವರ ಮಾತು ನಂಬಬೇಡ. ಎಲ್ಲಾ ಸುಳ್ಳು" ಎಂದು ಸಮಾಧಾನಮಾಡಲು ಪ್ರಯತ್ನಮಾಡಿದನು.

ಜೋಗೇಂದ್ರ ತಂದೆಯನ್ನು ತಳ್ಳಿ ಹೇಮನಳಿನಿಯನ್ನು ಸೋಫಾದ ಮೇಲೆ ಮಲಗಿಸಿ ಅಲ್ಲಿಯೇ ಇದ್ದ ತಣ್ಣೀರನ್ನು ಅವಳ ತಲೆಯ ಮೇಲೆ ಚಿಮುಕಿಸಿದನು. ಅಕ್ಷಯ ಗಾಳಿ ಹಾಕಲಾರಂಭಿಸಿದನು. ಹೇಮನಳಿನಿ ಗಾಬರಿಯಿಂದ ತಂದೆಯನ್ನು ನೋಡಿ "ಅಕ್ಷಯಬಾಬುವನ್ನು ಹೊರಗೆ ಕಳಿಸಪ್ಪಾ" ಎಂದಳು.

ಅಕ್ಷಯ ಬೀಸಣಿಗೆಯನ್ನು ಅಲ್ಲೇ ಹಾಕಿ ಹೊರಗೆ ಹೋದನು. ಆನಂದಬಾಬು ಪಕ್ಕದಲ್ಲಿ ಕುಳಿತು ತಲೆ ಸವರುತ್ತಾ, "ಅಮ್ಮಾ, ಅಮ್ಮಾ," ಎಂದು ನಿಟ್ಟುಸಿರು ಬಿಡುತ್ತಿದ್ದನು.

ಅವಳು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಆನಂದಬಾಬು, "ಅಳಬೇಡಮ್ಮಾ. ರಮೇಶ ಅಂತಹವನಲ್ಲ, ಜೋಗೇಂದ್ರ ಎಲ್ಲಿಯೋ ತಪ್ಪು ತಿಳಿದುಕೊಂಡಿದ್ದಾನೆ" ಎಂದನು.

ಜೋಗೇಂದ್ರ ತಾಳ್ಮೆತಪ್ಪಿ, "ಇಲ್ಲದ ಆಸೆ ತೋರಿಸಬೇಡಿ. ಈಗ ಸಮಾಧಾನ ಮಾಡಲು ಸುಳ್ಳಾಡಿದರೆ ಮುಂದಕ್ಕೆ ತೊಂದರೆಯಾಗುತ್ತದೆ. ಆಲೋಚಿಸಲಿ, ಸುಮ್ಮನಿರಿ."

ಹೇಮ ಎದ್ದುಕುಳಿತು ಜೋಗೇಂದ್ರನನ್ನು ನಿಟ್ಟಿಸಿನೋಡುತ್ತಾ "ಆತನೇ ಇದು ನಿಜವೆಂದು ಹೇಳುವವರೆಗೂ ನಾನು ನಂಬುವುದಿಲ್ಲ" ಎಂದು ಹೇಳಿ ಮೇಲಕ್ಕೆದ್ದಳು. ಆನಂದಬಾಬು ಅವಳು ಬೀಳದಂತೆ ಹಿಡಿದುಕೊಂಡನು. ಇಬ್ಬರೂ ಅವಳ ಕೊಠಡಿಗೆ ಹೊರಟುಹೋದರು. "ನನ್ನೊಬ್ಬಳನ್ನೇ ಬಿಡು ಅಪ್ಪ. ಸ್ವಲ್ಪ ಮಲಗಿಕೊಳ್ಳುತ್ತೇನೆ."

"ದಾದಿಯನ್ನು ಕಳುಹಿಸಲೆ?"

"ಬೇಡ. ಯಾರೂ ಬೇಡ."

ಆನಂದಬಾಬು ಪಕ್ಕದ ಕೊಠಡಿಗೆ ಹೋದನು. ಹೇಮನಳಿನಿಯ ತಾಯಿಯನ್ನೂ ಆಕೆಯ ತಾಳ್ಮೆ, ಪ್ರೀತಿ, ವಿಶ್ವಾಸಗಳನ್ನೂ ಜ್ಞಾಪಿಸಿ

ಕೊಂಡನು. ಮಗಳ ದುಃಖ ಆತನ ಹೃದಯವನ್ನು ಬಿರಿಯುತ್ತಿತ್ತು. "ದೇವರ ದಯದಿಂದ ನಿನ್ನ ಪ್ರಿಯನನ್ನು ಸೇರಿ ಸುಖಿಸುವುದನ್ನು ನೋಡಿ ನಾನು ಸಾಯುವಂತಾಗಲಮ್ಮಾ" ಎಂದು ಕಣ್ಣೀರನ್ನೊರಸಿಕೊಂಡನು.

ಜೋಗೇಂದ್ರನಿಗೆ ಹೆಂಗಸರ ಬುದ್ಧಿ, ವಿವೇಕವೆಂದರೆ ಯಾವಾಗಲೂ ತಿರಸ್ಕಾರವೇ. ಕಣ್ಣಾರೆ ನೋಡಿದುದನ್ನು ನಂಬದಿದ್ದರೆ ಮಾಡುವುದೇನು? ತನ್ನ ಸುಖಕ್ಕೆ ಅಡ್ಡಬರುವ ಯಾವ ವಿಚಾರವನ್ನೂ ಹೆಂಗಸು ನಂಬಳು. ಅಕ್ಷಯನನ್ನು ಕೂಗಿ,"ಎಲ್ಲವನ್ನೂ ಕೇಳಿದೆಯಾ ? ಏನು ಮಾಡುವುದು?" ಎಂದನು.

"ನನ್ನನ್ನೇಕೆ ಕೇಳುತ್ತೀ ? ಈ ತೊಂದರೆಗೆಲ್ಲಾ ನನ್ನನ್ನು ಸಿಕ್ಕಿಸುವುದು ನ್ಯಾಯವಲ್ಲ "

ಜೋಗೇ—ಅದಿರಲಿ. ರಮೇಶ ಒಪ್ಪಿಕೊಳ್ಳದಿದ್ದರೆ ಹೇಮನಳಿನಿ ನಂಬುವುದಿಲ್ಲ.

ಅಕ್ಷಯ—ನಿನಗೆ ಹುಚ್ಚು. ಅವನೆಲ್ಲಿ ಒಪ್ಪಿಕೊಳ್ಳುತ್ತಾನೆ ?

ಜೋಗೇ—ಬರೆದರೆ ಇನ್ನೂ ಉತ್ತಮ. ಅವನು ಬರೆಯುವಂತೆ ಮಾಡುವ ಕೆಲಸ ನಿನ್ನದು.

ಅಕ್ಷಯ—ಪ್ರಯತ್ನ ಮಾಡಿ ನೋಡುತ್ತೇನೆ.

## ಅಧ್ಯಾಯ ೨೧

ಆ ರಾತ್ರಿ ಒಂಬತ್ತು ಗಂಟೆಗೆ ರಮೇಶ ಕಮಲೆ ಸಿಯಾಲ್ದ ನಿಲ್ದಾಣಕ್ಕೆ ಹೋದರು. ಗಾಡಿ ಕಲುತೊಲದ ಮೇಲೆಯೇ ಹಾದುಹೋಯಿತು. ಹೇಮನಳಿನಿಯ ಮನೆಯಲ್ಲಿ ಬದಲಾವಣೆಯೇನೂ ಇರಲಿಲ್ಲ. ಅವನ ನಿಟ್ಟುಸಿರನ್ನು ಕೇಳಿ ಕಮಲೆ, "ಏನು ?" ಎಂದಳು.

"ಏನೂ ಇಲ್ಲ" ಎಂದು ಹಿಂದಕ್ಕೆ ಒರಗಿಕೊಂಡನು. ಕಮಲೆ ತೂಕಡಿಸುತ್ತಿದ್ದಳು. ಅರೆಕ್ಷಣ, "ಇವಳೇಕೆ ಬದುಕಿದ್ದಾಳೆ," ಎಂದು ರಮೇಶನಿಗೆನಿಸಿತು-

ನಿಲ್ದಾಣವನ್ನು ಸೇರಿ ಎರಡನೆ ತರಗತಿಯಲ್ಲಿ ಕುಳಿತರು.

ಕಮಲೆಯ ಹಾಸಿಗೆಯನ್ನು ಸರಿಮಾಡಿ, ಕಿಟಕಿಗಳನ್ನು ಮುಚ್ಚಿ "ಹೊತ್ತಾಯಿತು, ಕಮಲ ನಿದ್ದೆ ಹೋಗು" ಎಂದನು.

"ರೈಲು ಹೊರಡುವವರೆಗೂ ಕುಳಿತಿದ್ದು ಮಲಗುತ್ತೇನೆ."

ರಮೇಶ ಒಪ್ಪಲು ಮುಖದಮೇಲೆ ಪರದೆಯನ್ನೆಳೆದುಕೊಂಡು ಹೊರಗೆ ನೋಡುತ್ತಿದ್ದಳು. ರೈಲು ಜರುಗುತ್ತಿರುವಾಗ ಯಾರೋ ಪರಿಚಿತ ಬೇಗ ಬೇಗ ಬರುತ್ತಿದ್ದುದು ಕಾಣಿಸಿತು. ಕಮಲೆ ನಗಲಾರಂಭಿಸಿದಳು. ಆ ಮನುಷ್ಯನನ್ನು ಪೋರ್ಟರುಗಳು ತಡೆಯುತ್ತಿದ್ದರು. ಹೊದ್ದಿದ್ದ ಶಾಲು ಅವರ ಕೈಯಲ್ಲೇ ನಿಂತರೂ ಆತನೇನೋ ರೈಲು ಹತ್ತಿದನು. ಶಾಲುವಿಗಾಗಿ ಕೈನೀಡಲು ರಮೇಶ ಅಕ್ಷಯನನ್ನು ಗುರ್ತಿಸಿದನು. ಕಮಲೆಯ ನಗು ನಿಂತಿರಲಿಲ್ಲ.

"ಹತ್ತುವರೆ ಘಂಟೆಯಾಯಿತು, ಮಲಗು" ರಮೇಶನೆಂದನು.

ಮಲಗಿದರೂ ನಗುತ್ತಲೇ ಇದ್ದಳು. ರಮೇಶನಿಗೆ ಅವಳ ತಮಾಷೆ ಅರ್ಥವಾಗಲಿಲ್ಲ. ಅಕ್ಷಯನ ಜನರೆಲ್ಲಾ ಕಲ್ಕತ್ತೆಯಲ್ಲಿದ್ದರು ಅವನು ಅವಸರದಿಂದ ಈ ರೈಲು ಹತ್ತಿದುದು ತನ್ನನ್ನು ಹಿಂಬಾಲಿಸಲೆಂದೇ? ಅಕ್ಷಯ ತನ್ನ ಹಳ್ಳಿಯವರನ್ನು ಪ್ರಶ್ನಿಸಿದರೆ ಮಾನ ಹೋಗುವುದು. ಹಳ್ಳಿ ಕಲ್ಕತ್ತೆಯಂತಲ್ಲ. ಕಲ್ಕತ್ತೆಯಲ್ಲಿ ಎಂತಹ ವಿಚಾರವನ್ನಾದರೂ ಮರೆಸಬಹುದು. ಬಾರಕ್ ಪುರದಲ್ಲಿ ಅಕ್ಷಯ ಇಳಿಯಲಿಲ್ಲ. ನೈಹತಿಯಲ್ಲಿಯೂ ಇಳಿಯಲಿಲ್ಲ. ಬಗೂಲವನ್ನೂ ದಾಟಿ ಬಂದುದರಿಂದ ಬೇರೆಲ್ಲಿಯೂ ಇಳಿಯುವಂತೆ ಕಾಣಲಿಲ್ಲ.

ಆಯಾಸವಾಗಿದ್ದರೂ ರಮೇಶನಿಗೆ ನಿದ್ದೆ ಬರಲಿಲ್ಲ. ಗೋಲಂಡದಲ್ಲಿ ಅಕ್ಷಯನು ಶಾಲುವಿನಿಂದ ಮುಖಮರೆಸಿಕೊಂಡು ಹಡಗಿನ ಕಡೆ ಬೇಗ ಬೇಗ ಹೋಗುತ್ತಿದ್ದುದು ಕಾಣಿಸಿತು. ರಮೇಶನ ಹಳ್ಳಿಗೆ ಹಡಗು ಹೊರಡಲು ಹೊತ್ತಾಗಿರಲಿಲ್ಲ. ಬೇರೊಂದು ಹಡಗು ಹೊರಡಲು ಸಿದ್ಧವಾಗಿತ್ತು.

"ಇದೆಲ್ಲಿಗೆ?" ರಮೇಶ ಪ್ರಶ್ನಿಸಿದನು.

"ಪಶ್ಚಿಮದ ಕಡೆ".

"ಎಷ್ಟು ದೂರ?"

"ನದಿಯಲ್ಲಿ ಸಾಕಾದಷ್ಟು ನೀರಿದ್ದರೆ ಕಾಶಿಯವರೆಗೂ ಹೋಗುತ್ತದೆ."

ರಮೇಶ ಕಮಲೆಯನ್ನು ಆ ಹಡಗಿನಲ್ಲಿ ಕೂಡಿಸಿ ಊಟದ ಪದಾರ್ಥಗಳನ್ನು ತರಲು ಹೋದನು.

ಎಲ್ಲರಿಗಿಂತ ಮುಂಚೆ ಅಕ್ಷಯ ಇನ್ನೊಂದು ಹಡಗಿನಲ್ಲಿ ಕುಳಿತನು. ಹಡಗು ಹೊರಡಲು ನಿಧಾನವಿದ್ದುದರಿಂದ ಪ್ರಯಾಣಿಕರು ಸಾವಕಾಶವಾಗಿ ಹತ್ತುತ್ತಿದ್ದರು. ಕೆಲವರು ಸ್ನಾನ, ಕೆಲವರು ಅಡುಗೆಗಳಲ್ಲಿ ನಿರತರಾಗಿದ್ದರು.

ರಮೇಶ ಕಮಲೆಯೊಡನೆ ಯಾವುದಾದರೂ ಭೋಜನಗೃಹಕ್ಕೆ ಹೋಗಿರಬಹುದೆಂದು ಅಕ್ಷಯ ಊಹಿಸಿದನು. ಆ ಊರಿನ ಪರಿಚಯವಿಲ್ಲದುದರಿಂದ ಇಳಿದು ನೋಡುವ ಸಾಹಸಕ್ಕೆ ಹೋಗಲಿಲ್ಲ.

ಹಡಗು ಹೊರಡಲು ಸಿಳ್ಳೆಯಾದರೂ ರಮೇಶ ಬರಲಿಲ್ಲ. ಪ್ರಯಾಣಿಕರೆಲ್ಲಾ ಹತ್ತಿ ಎಷ್ಟೋ ಹೊತ್ತಾದರೂ ರಮೇಶನ ವರ್ತಮಾನವೇ ಇಲ್ಲ.

ಹಡಗು ಹೊರಡಲು ಸಿದ್ಧವಾಯಿತು. ಅಕ್ಷಯ ಹಡಗಿನಿಂದ ದಡಕ್ಕೆ ಹಾರಿದನು. ಅಲ್ಲೂ ರಮೇಶನಿರಲಿಲ್ಲ. ಆಗತಾನೆ ಕಲ್ಕತ್ತೆಯ ರೈಲು ಹೋಗಿದ್ದುದರಿಂದ ರಮೇಶ ಪುನಃ ಅಲ್ಲಿಗೇ ಹೋಗಿರಬೇಕೆಂದು ಅಕ್ಷಯ ಊಹಿಸಿದನು. ಕಲ್ಕತ್ತೆಯಲ್ಲಿ ಪತ್ತೆಹಚ್ಚುವುದು ಕಷ್ಟದ ಕೆಲಸ.

## ಅಧ್ಯಾಯ ೨೨

ಆ ದಿನವನ್ನೆಲ್ಲಾ ಗೋಲಂಡದಲ್ಲಿ ಕಳೆದು ಅಕ್ಷಯ ಕಲ್ಕತ್ತೆಗೆ ಸಾಯಂಕಾಲ ಹೋದನು. ಇಳಿಯುತ್ತಲೇ ದರ್ಜಿಪುರದಲ್ಲಿ ರಮೇಶನ ಕೊಠಡಿಗೆ ಹೋಗಿ ನೋಡಿದನು. ಬೀಗ ಹಾಕಿದ್ದಿತು. ಕಲುತೊಲದಲ್ಲಿಯೂ ಅವನಿರಲಿಲ್ಲ. ಆನಂದಬಾಬುವಿನ ಮನೆಗೆ ಹೋಗಿ ಜೋಗೇಂದ್ರನೊಡನೆ, "ಓಡಿಬಿಟ್ಟ. ಸಿಕ್ಕಲಿಲ್ಲ," ಎಂದನು.

"ಹಾಗೆಂದರೆ?"

ಎಲ್ಲವನ್ನೂ ಅಕ್ಷಯ ವಿವರಿಸಿದನು. ಅಕ್ಷಯನನ್ನು ನೋಡಿ ರಮೇಶ ಪರಾರಿಯಾದನೆಂದು ಕೇಳುತ್ತಲೇ ಜೋಗೇಂದ್ರನಿಗೆ ಅವನ ಮೇಲಿದ್ದ ಅನುಮಾನ ಸ್ಥಿರಪಟ್ಟಿತು.

"ಈ ಸಾಕ್ಷ್ಯದಿಂದ ನಮಗೇನೂ ಪ್ರಯೋಜನವಿಲ್ಲ. ಹೇಮನಳಿನಿಯೊಬ್ಬಳೇ ಅಲ್ಲ. ನಮ್ಮ ತಂದೆಗೂ ರಮೇಶನಲ್ಲಿ ಪೂರ್ತಿ ನಂಬಿಕೆಯಿದೆ. ಈಗ ಬಂದು ರಮೇಶ, "ಎಲ್ಲವನ್ನೂ ಹೇಳಲು ಸಾಧ್ಯವಿಲ್ಲ," ಎಂದರೆ, ಹೇಮನಳಿನಿಯನ್ನು ಅವನು ಮದುವೆಯಾಗಲು ತಂದೆ ಅಡ್ಡಿ ಬರುವುದಿಲ್ಲ. ಇಂಥವರನ್ನೇನು ಮಾಡುವುದು? ಹೇಮನಳಿನಿಯನ್ನು ನೋಯಿಸಲು ನಮ್ಮ ತಂದೆಗೆ ಸಾಧ್ಯವಿಲ್ಲ. ಎರಡನೆ ಹೆಂಡತಿಯಾಗಿಯಾದರೂ ರಮೇಶನನ್ನೇ ಮದುವೆಯಾಗುವೆನೆಂದು ಅವಳು ಹೇಳಿದರೆ ಅದಕ್ಕೂ ತಂದೆ ಒಪ್ಪುವನು. ರಮೇಶನೇ ತನ್ನ ತಪ್ಪನ್ನೊಪ್ಪಿಕೊಳ್ಳಬೇಕು. ನಾನು ಈ ಕೆಲಸದಲ್ಲಿ ಕೈಹಾಕಿದರೆ ಅವನಿಗೂ ನನಗೂ ದೊಡ್ಡ ಕುಸ್ತಿಯೇ ನಡೆಯಬಹುದು. ನೀನು ಸ್ನಾನಮಾಡಿ ಚಹಾ ತೆಗೆದುಕೋ."

ಅಕ್ಷಯ ಆಲೋಚಿಸುತ್ತಾ ಚಹ ಕುಡಿದನು. ಆನಂದಬಾಬು ಮಗಳೊಡನೆ ಅಲ್ಲಿಗೆ ಬಂದನು. ಅಕ್ಷಯನನ್ನು ನೋಡಿ ಹೇಮನಳಿನಿ ತಟ್ಟನೆ ಹಿಂದಕ್ಕೆ ಹೋದಳು.

ಜೋಗೇಂದ್ರ ಕೋಪದಿಂದ, "ಬಹಳ ಚನ್ನಾಯ್ತು. ನೀನಾದರೂ ಅವಳಿಗೆ ಬುದ್ಧಿ ಹೇಳಬೇಡವೇ?" ಎಂದು, "ಹೇಮಾ, ಹೇಮಾ," ಎಂದು ಕೂಗಿದನು. ಹೇಮನಳಿನಿ ತನ್ನ ಕೊಠಡಿಗೆ ಹೊರಟುಹೋಗಿದ್ದಳು.

ಅಕ್ಷಯ, "ನೀನು ಸುಮ್ಮನಿದ್ದರೆ ಎಲ್ಲಾ ಸರಿ ಹೋಗುತ್ತೆ. ಅವಳನ್ನ ಸುಮ್ಮನೆ ಬಲವಂತಮಾಡಿದರೆ ಕೆಲಸ ಕೆಡುತ್ತದೆ," ಎಂದನು.

ಅಕ್ಷಯ ಚಹಾ ಕುಡಿದು ಹೊರಟುಹೋದನು. ಅವನ ತಾಳ್ಮೆಗೆ ಕೊನೆಮೊದಲಿರಲಿಲ್ಲ. ಅವಮಾನಮಾಡಿದರೂ ಅಸಮಾಧಾನ ಮಾಡಿಕೊಳ್ಳುತ್ತಿರಲಿಲ್ಲ.

ಅವನು ಹೊರಡುತ್ತಲೇ ಆನಂದಬಾಬು ಹೇಮನಳಿನಿಯನ್ನು ಕರೆ ತಂದನು. ಕಂದಿದ ಮುಖದಿಂದ ತಲೆ ತಗ್ಗಿಸಿ ಒಳಗೆ ಬಂದಳು. ರಮೇ

ಶನ ಮತ್ತು ತನ್ನ ವಿಚಾರದಲ್ಲಿ ಅವನಿಗೆ ತಾಳ್ಮೆ ತಪ್ಪಿದ್ದಿತೆಂದು ತಿಳಿದು ತಲೆಯೆತ್ತಿ ಜೋಗೇಂದ್ರನನ್ನು ನೋಡಲಾರದೆ ಹೋದಳು.

ಪ್ರೇಮ ರಮೇಶನಲ್ಲಿದ್ದ ನಂಬಿಕೆಗೆ ನೀರೆರೆಯುತ್ತಿದ್ದರೂ ವಿವೇಕ ಅದನ್ನು ಪೋಷಿಸಲಿಲ್ಲ. ರಾತ್ರಿ ಒಬ್ಬಳೇ ಚಿಂತಿಸಿ, ಚಿಂತಿಸಿ, ನಂಬಿಕೆ ಸಡಿಲುತ್ತಾ ಬಂದಿದ್ದಿತು.

ರಮೇಶನ ವಿಚಿತ್ರ ವರ್ತನೆಗೆ ಕಾರಣವೇ ತಿಳಿಯಲಿಲ್ಲ. ಹೃದಯ ದಿಂದ ಅನುಮಾನವನ್ನು ದೂಡಬೇಕೆಂದು ಪ್ರಯತ್ನಿಸಿದರೂ ಅನುಮಾನ ಗಳು ಪರಂಪರೆಯಾಗಿ ಬರಲಾರಂಭಿಸಿದುವು. ತಾಯಿ ಮಗುವನ್ನು ಎದೆಗಾತುಕೊಳ್ಳುವಂತೆ ಬಲವಾಗಿ ವಿಶ್ವಾಸವನ್ನು ಎದೆಗಪ್ಪಿಕೊಂಡಳು. ಆದರೆ ಅವಳ ಶಕ್ತಿಗೂ ಮಿತಿಯಿಲ್ಲವೆ?

ಅನಂದಬಾಬು ಹೇಮನಳಿನಿಯ ಕೊರಡಿಯ ಪಕ್ಕದ ಕೊರಡಿ ಯಲ್ಲಿ ಮಲಗಿ, ರಾತ್ರಿಯನ್ನುಅವಳು ಎಷ್ಟು ಕಷ್ಟದಿಂದ ಕಳೆದಿದ್ದಳೆಂಬು ದನ್ನು ಅರಿತಿದ್ದನು. ಕೇಳಿದರೆ, "ನೀನೇಕೆ ಎದ್ದೆಯಪ್ಪಾ? ನನಗೆ ನಿದ್ರೆ ಬರುತ್ತಿದೆ," ಎನ್ನುತ್ತಿದ್ದಳು.

ಬೆಳಗಿನ ಜಾವದಲ್ಲಿ ಮಾಳಿಗೆಯ ಮೇಲೆ ತಿರುಗುತ್ತಿದ್ದಳು. ರಮೇಶನ ಮನೆಯ ಕಿಟಕಿಗಳು ಮುಚ್ಚಿದ್ದುವು. ಸೂರ್ಯೋದಯದಿಂದ ಹೇಮನಳಿನಿಗೇನೂ ಉಲ್ಲಾಸವಾಗಲಿಲ್ಲ.ಮಾಳಿಗೆಯ ಒಂದುಮೂಲೆಯಲ್ಲಿ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಬೆಳಗಾಗಲಿ ಸಂಜೆಯಾಗಲಿ ರಮೇಶ ಬರುವಂತಿಲ್ಲ. ಪಕ್ಕದ ಮನೆಯಲ್ಲಿ ಹತ್ತಿರ ಇರುವನೆನ್ನುವ ಸಮಾಧಾನವೂ ಇಲ್ಲ.

ಅವಳ ತಂದೆ "ಹೇಮಾ," ಎಂದು ಕೂಗಲು ಗಾಬರಿಯಿಂದ ಕಣ್ಣೊರಸಿಕೊಂಡು ಎದ್ದಳು. ಅನಂದಬಾಬು ಅವಳ ಭುಜಸವರುತ್ತಾ "ಈವತ್ತು ನಾನು ಎದ್ದದ್ದು ನಿಧಾನವಾಯಿತು," ಎಂದನು. ಮಗಳ ಸಂಕಟವನ್ನು ಸಹಿಸಲಾರದೆ ರಾತ್ರಿಯೆಲ್ಲಾ ಎಚ್ಚತ್ತಿದ್ದು ಬೆಳಗಿನ ಜಾವ ದಲ್ಲಿ ನಿದ್ದೆ ಹೋಗಿದ್ದನು. ಮುಖದಮೇಲೆ ಬಿಸಿಲು ಬಿದ್ದಾಗ ಎಚ್ಚರ ವಾಗಲು ಬೇಗ ಮುಖ ತೊಳೆದು ಮಗಳನ್ನು ಹುಡುಕಿಕೊಂಡು ಬಂದಿ ದ್ದನು. ಕೋಣೆಯನ್ನು ಬಿಟ್ಟು, ಒಂಟಿಯಾಗಿ ಅವಳು ತಿರುಗುತ್ತಿದ್ದ

ದನ್ನು ನೋಡಿ ಕರುಳು ಹಿಂಡಿದಂತಾಯಿತು.

"ಇಳಿದುಬಂದು ಚಹಾ ತೆಗೆದುಕೋಮ್ಮ."

ಜೋಗೇಂದ್ರನ ಎದುರಿಗೆ ಹೋಗಲು ಮನಸ್ಸು ಹಿಂತೆಗೆದರೂ ತಂದೆಯ ಮನಸ್ಸನ್ನು ನೋಯಿಸಲಾರದೆ ಹೊರಟಳು. ಆನಂದ ಬಾಬುವಿಗೆ ಮಗಳೇ ಚಹಾ ಕೊಟ್ಟು ಅಭ್ಯಾಸ.

ಬಾಗಿಲ ಬಳಿ ಬಂದಾಗ ಜೋಗೇಂದ್ರನೊಡನೆ ಯಾರೋ ಮಾತ ನಾಡುತ್ತಿದ್ದಂತಿತ್ತು. ರಮೇಶನೇನೋ ಎಂದು ಅವಳ ಹೃದಯ ಬಡಿದು ಕೊಂಡಿತು. ನಡುಗುತ್ತಾ ಒಳಕ್ಕೆ ಹೋಗಲು—ಅಕ್ಷಯ! ಸಹಿಸಲಾರದೆ ಹಿಂತಿರುಗಿ ಹೊರಟು ಹೋದಳು. ಪುನಃ ತಂದೆಯ ಬಲವಂತದಿಂದ ಬಂದು ತಲೆಯೆತ್ತದೆ ಚಹಾ ಸಿದ್ಧಪಡಿಸಿದಳು. ಜೋಗೇಂದ್ರನಿಗೆ ಕೋಪ ಬಂತು. ರಮೇಶನಿಂದ ಹೇಮನಳಿನಿಯೂ ಅವಳ ತಂದೆಯೂ ದುಃಖ ಪಡುತ್ತಿರುವುದನ್ನು ನೋಡಿ ಅವನಿಗೆ ಬೇಸರವಾಯಿತು. "ನಾವೇ ತಪ್ಪಿ ತಸ್ಥರು! ಅವಳ ಸುಖಕ್ಕಾಗಿಯೇ ನಾವು ಕಷ್ಟ ಪಡುತ್ತಿರುವಾಗ ನಮ್ಮ ಲ್ಲಿಯೇ ಅವಳಿಗೆ ಬೇಸರ. ತಂದೆಗೆ ತಿಳಿವಳಿಕೆಯೇ ಇಲ್ಲ. ಸಮಾಧಾನ ಮಾಡಿ ಏನು ಪ್ರಯೋಜನ? ಎಂದಾದರೂ ಅವಳಿಗೆ ಸತ್ಯ ತಿಳಿಯಲೇ ಬೇಕು" ಎಂದು ಆಲೋಚಿಸಿದನು.

ಗಟ್ಟಿಯಾಗಿ "ಅಪ್ಪಾ, ಈಗೇನಾಗಿದೆ ಗೊತ್ತೇ?" ಎಂದನು.

"ಏನು?" ಆನಂದಬಾಬು ಆತುರದಿಂದ ಕೇಳಿದನು.

ಮೊನ್ನೆ ರಾತ್ರಿ ರಮೇಶ ಹೆಂಡತಿಯನ್ನೂ ಕರೆದುಕೊಂಡು ಗೋಲಂಡವ ರೈಲಿನಲ್ಲಿ ಹೊರಟನು. ಅಕ್ಷಯನೂ ಅದೇ ರೈಲಿನಲ್ಲಿ ಹತ್ತಿ ದುದನ್ನು ಕಂಡು ಕಲ್ಕತ್ತೆಗೆ ಹಿಂದಿರುಗಿದನು.

ಹೇಮನಳಿನಿಯ ಕೈಗಳು ನಡುಗಿ ಚಹಾ ಚಲ್ಲಿತು. ತಟ್ಟನೆ ಕುರ್ಚಿ ಯಲ್ಲಿ ಕುಳಿತಳು.

ಅವಳನ್ನೇ ನೋಡುತ್ತಾ, ಜೋಗೇಂದ್ರ, "ಅಕ್ಷಯನಿಗೆ ಎಲ್ಲಾ ವಿಚಾರ ತಿಳಿದಿದೆಯೆಂದು ತಿಳಿದೂ ಏಕೆ ಪರಾರಿಯಾಗಲು ಪ್ರಯತ್ನಿಸಿ ದನೋ! ಮೊದಲೇ ಸರಿ! ಕಳ್ಳನ ಹಾಗೆ ಹೆದರಿ ಓಡುವುದು ಬೇರೆ! ಅಸಹ್ಯ ವಾಗುತ್ತದೆ. ಹೇಮನಳಿನಿಯ ಅಭಿಪ್ರಾಯವೇನೋ! ನನಗಂತೂ ಅವನ

ತಪ್ಪಿತಸ್ಥನೆಂದು ನಿರ್ಧರವಾಗಿ ಹೋಯಿತು.

ಹೇಮನಳಿನಿ ಎದ್ದು ನಿಂತು, "ನಿನ್ನ ಸಾಕ್ಷ್ಯ ಬೇಕಾಗಿಲ್ಲ. ನೀನೇ ನಾದರೂ ತಿಳಿದುಕೋ. ನಾನಂತೂ ಆತನನ್ನು ಆಕ್ಷೇಪಿಸುವುದಿಲ್ಲ."

ಜೋಗೇಂದ್ರ—ನಿನ್ನನ್ನು ಮದುವೆಯಾಗುವವನ ವಿಚಾರವಾಗಿ ಪ್ರಶ್ನಿಸುವುದಕ್ಕೆ ನಮಗೆ ಹಕ್ಕಿಲ್ಲವೋ ?

ಹೇಮ—ಮದುವೆಯ ಮಾತನ್ನು ನಾನೆತ್ತಲಿಲ್ಲ. ಬೇಕಾದರೆ ನಿಲ್ಲಿಸು. ನನ್ನನ್ನು ಪೀಡಿಸಬೇಡ.

ಹೇಮನಳಿನಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಆನಂದಬಾಬು ಅವ ಳನ್ನು ಅಪ್ಪಿಕೊಂಡು ಸಮಾಧಾನಪಡಿಸುತ್ತಾ, "ಹೋಗೋಣ ಬಾಮ್ಮ." ಎಂದನು.

## ಅಧ್ಯಾಯ ೨೩

ರಮೇಶ ಕಮಲೆಯರು ಕುಳಿತಿದ್ದ ದೋಣಿ ಗೋಲಂಡವನ್ನು ಬಿಟ್ಟು ಹೊರಟಿತು. ಮೇಲ್ತರಗತಿಯ ಪ್ರಯಾಣಿಕರು ಯಾರೂ ಇಲ್ಲದಿದ್ದುದರಿಂದ ರಮೇಶ ತನ್ನ ಸಾಮಾನನ್ನು ಒಂದು ಕೋಣೆಯಲ್ಲಿಟ್ಟುಕೊಂಡನು.

ಕಮಲೆ ಸ್ವಲ್ಪ ಹಾಲು ಕುಡಿದು ನದಿಯ ಸೌಂದರ್ಯವನ್ನು ನೋಡುತ್ತಾ ಕುಳಿತಳು.

ರಮೇಶ—ನಾವೆಲ್ಲಿಗೆ ಹೋಗುತ್ತಿದ್ದೇವೆ ಗೊತ್ತೇ ?

ಕಮಲ—ಮನೆಗೆ.

ರಮೇಶ—ಅಲ್ಲ, ನೀನು ಬೇಡವೆನ್ನಲಿಲ್ಲವೆ ?

ಕಮಲ—ನನಗೋಸ್ಕರ ಏರ್ಪಾಟನ್ನು ಬದಲಾಯಿಸಿದಿರಾ ?

ರಮೇಶ—ಹೌದು.

ಕಮಲ—ಏಕೆ? ನಾನೊಂದು ಮಾತನ್ನಾಡಿದ್ದಕ್ಕೆ ಇಷ್ಟು ಕೋಪವೇ ?

ರಮೇಶ ನಕ್ಕನು. "ಕೋಪವಿಲ್ಲ. ನನಗೂ ಮನೆಗೆ ಹೋಗಲು ಇಷ್ಟ ವಿರಲಿಲ್ಲ."

ಕಮಲ—ಮತ್ತೆ. ನಾವು ಹೋಗುತ್ತಿರುವುದೆಲ್ಲಿಗೆ?

ರಮೇಶ—ಪಶ್ಚಿಮ ದೇಶಕ್ಕೆ.

ಕಮಲೆಯ ಕಣ್ಣುಗಳು ಆಶ್ಚರ್ಯದಿಂದ ಅರಳಿದುವು. ಪಶ್ಚಿಮ ದೇಶವೆಂದರೆ, ಯಾತ್ರಾಸ್ಥಳಗಳು, ಹೊಸ ಊರುಗಳು, ನೋಟಗಳು, ಹಿಂದಿನ ಕಾಲದ ವೈಭವ ದೃಶ್ಯಗಳು, ಸೊಗಸಾದ ದೇವಾಲಯಗಳು, ಇವೆಲ್ಲ ಅವಳ ಒಳನೋಟದ ಮುಂದೆ ಸುಳಿದುವು ಆನಂದದಿಂದ "ಎಲ್ಲೆಲ್ಲಿಗೆ ಹೋಗುತ್ತೇವೆ ?" ಎಂದಳು.

"ಇನ್ನೂ ಗೊತ್ತುಮಾಡಿಲ್ಲ. ಮೂಂಘೇರ್, ಪಾಟ್ಣಾ, ದಿನಾಪುರ, ಬಕ್ಸಾರ್, ಘಾಜೀಪುರ, ಕಾಶಿ ಎಲ್ಲಾ ದಾರಿಯಲ್ಲಿ ಸಿಕ್ಕುತ್ತವೆ. ಎಲ್ಲಾದರೂ ಇಳಿಯೋಣ."

ಕಮಲೆ ಕೆಲವು ಸ್ಥಳಗಳ ಹೆಸರನ್ನು ಕೇಳಿದ್ದಳು. ಅವನು ಹೇಳ ಹೇಳುತ್ತಾ ಅವುಗಳನ್ನೆಲ್ಲಾ ಮನಸ್ಸಿನಲ್ಲಿ ಚಿತ್ರಿಸಿಕೊಳ್ಳಲಾರಂಭಿಸಿದಳು.

"ಎಷ್ಟು ಚನ್ನಾಗಿರುತ್ತೆ !"

"ಆ ವಿಚಾರ ಆಮೇಲಾಗಲಿ. ಊಟದ ಪ್ರಯತ್ನ ಮಾಡೋಣ. ದೋಣಿಯವರು ಮಾಡಿದ ಅಡುಗೆಯನ್ನು ನೀನು ತಿನ್ನುವುದಿಲ್ಲವಷ್ಟೆ ?"

"ಎಲ್ಲಾದರೂ ಉಂಟೆ ?"

ರಮೇಶ—ಏನು ಮಾಡೋಣ.

ಕಮಲ—ನಾನು ಅಡುಗೆ ಮಾಡುತ್ತೇನೆ.

ರಮೇಶ—ನಿನಗೆ ಬರುತ್ತದೆಯೇ ?

ಕಮಲೆಗೆ ನಗು ಬಂತು. "ನಾನೆಂದರೆ ಏನೆಂದು ತಿಳಿದಿದ್ದೀರೋ ? ನಮ್ಮ ಚಿಕ್ಕಪ್ಪನ ಮನೆಯಲ್ಲಿ ಎಲ್ಲರಿಗೂ ನಾನೇ ಅಡುಗೆ ಮಾಡುತ್ತಿದ್ದೆ."

ರಮೇಶ—ತಪ್ಪಾಯಿತು! ಹಾಗಾದರೆ ಅಡುಗೆಗೆ ಸಿದ್ಧಮಾಡೋಣ. ರಮೇಶ ಎದ್ದು ಹೋಗಿ ಒಂದು ಕಬ್ಬಿಣದ ಒಲೆ ತಂದನು. ದೋಣಿಯಲ್ಲಿ ಕಾಯಸ್ಥ ಜಾತಿಯ ಉಮೇಶನೆಂಬ ಒಬ್ಬ ಹುಡುಗನಿದ್ದನು. ದೋಣಿಯ ಖರ್ಚನ್ನೂ ಸ್ವಲ್ಪ ಸಂಬಳವನ್ನೂ ಕೊಡುವುದಾಗಿ ಹೇಳಿ ಅವನನ್ನು ಕಮಲೆಯ ಸಹಾಯಕ್ಕೆ ಗೊತ್ತುಮಾಡಿದನು.

"ಅಡಿಗೆಯೇನು, ಕಮಲಾ?"

"ಬರೀ ಅಕ್ಕಿ ಬೇಳೆಯಲ್ಲಿ ಏನು ಮಾಡುವುದು? ಅನ್ನ ಸಾರು ಮಾಡೋಣ."

ಕಮಲೆಯ ಕೋರಿಕೆಯಂತೆ ರಮೇಶ ದೋಣಿಯವರಿಂದ ಕೆಲವು ಸಂಬಾರದ ಪದಾರ್ಥಗಳನ್ನು ತಂದನು.

"ಸಾಮಾನು ತಂದರೆ ಕುಟ್ಟುವುದು ಹೇಗೆ?"

ರಮೇಶ ದೋಣಿಯವರಿಂದ ಒಂದು ಕಬ್ಬಿಣದ ಒರಳನ್ನು ತಂದನು. ಕಮಲೆ ಹೇಗೊ ಕುಟ್ಟಿ ಮುಗಿಸಿದಳು. ಬೇರೆಯವರ ಕೈಯಲ್ಲಿ ಕುಟ್ಟಿಸಲು ಕಮಲೆ ಒಪ್ಪಲಿಲ್ಲ.

ಒರಳಿನಿಂದ ಪದಾರ್ಥಗಳು ಚೆಲ್ಲಿದುದನ್ನು ನೋಡಿ ಅವಳು ನಕ್ಕಾಗ ರಮೇಶನೂ ನಕ್ಕನು.

ಕುಟ್ಟಿ ಮುಗಿಸಿ, ಸೀರೆಯನ್ನು ಎತ್ತಿ ಕಟ್ಟಿ, ಅಡಿಗೆಗೆ ಸ್ಥಳ ಸಿದ್ಧಪಡಿಸಿಕೊಂಡಳು. ಒಲೆಯ ಮೇಲೆ ನೀರಿಟ್ಟು ರಮೇಶನನ್ನು ಸ್ನಾನಕ್ಕೆ ಕಳುಹಿಸಿದಳು. ಅವನು ಸ್ನಾನಮಾಡಿ ಬರುವ ವೇಳೆಗೆ ಅಡಿಗೆ ಸಿದ್ಧವಾಗಿತ್ತು. ಊಟಕ್ಕೆ ತಟ್ಟೆಯಿರಲಿಲ್ಲ. ದೋಣಿಯವರು ಮುಸಲ್ಮಾನರಾದುದರಿಂದ ಅವರ ತಟ್ಟೆಯನ್ನು ತೆಗೆದುಕೊಳ್ಳಲು ಕಮಲೆಗೆ ಇಷ್ಟವಿರಲಿಲ್ಲ. ಪಾತ್ರೆಯ ಮುಚ್ಚಳವನ್ನೇ ತೊಳೆದು ರಮೇಶನ ಮುಂದಿಟ್ಟಳು. "ನಾಳೆ ಬೇರೆ ಏನಾದರೂ ತರೋಣ." ಎಂದು ರಮೇಶ ನೀರನ್ನು ತಂದು ಊಟಕ್ಕೆ ಕುಳಿತನು. ಒಂದೆರಡು ತುತ್ತನ್ನು ತಿಂದು "ನಿನಗೆ ಅಡಿಗೆ ಎಷ್ಟು ಚನ್ನಾಗಿ ಬರುತ್ತೆ!" ಎಂದನು. "ನಿಮಗೆ ಹಾಸ್ಯ," ಎಂದಳು.

"ಹಾಸ್ಯವಲ್ಲ. ತಿಂದಾಗ ನಿನಗೇ ತಿಳಿಯುತ್ತೆ!" ಎಂದು, ಪುನಃ ಹಾಕಿಸಿಕೊಂಡು ತಿಂದು "ನಿನಗೇನಾದರೂ ಮಿಕ್ಕಿದೆಯೋ?" ಎಂದನು.

"ಬೇಕಾದಷ್ಟಿದೆ." ರಮೇಶ ಸಂತೋಷವಾಗಿ ಊಟ ಮಾಡುತ್ತಿದ್ದುದನ್ನು ನೋಡಿ ಅವಳಿಗೆ ಸಂತೋಷವಾಯಿತು.

"ನೀನು ಯಾವುದರಲ್ಲಿ ಊಟ ಮಾಡುತ್ತೀ?"

"ಆ ಮುಚ್ಚಳದಲ್ಲೇ, ಹೆಂಡತಿ ಗಂಡನ ತಟ್ಟೆಯಲ್ಲಿ ಊಟ ಮಾಡಬಹುದಷ್ಟೆ!"

ರಮೇಶ ಗಾಬರಿಯಿಂದ, "ಬೇಡ, ಬೇಡ," ಎಂದನು.

"ಏಕೆ?" ಕಮಲೆಗೆ ಆಶ್ಚರ್ಯವಾಯಿತು.

"ಮಾಡಬಾರದು."

"ಮಾಡಿದರೇನಂತೆ? ನೀನು ಯಾವುದರಲ್ಲಿ ತಿನ್ನುತ್ತೀ, ಉಮೇಶ?"

"ಎಲೆ ತರುತ್ತೇನೆ."

ರಮೇಶ—ನೀನು ಇದರಲ್ಲೇ ಊಟಮಾಡಬೇಕಾದರೆ ತೊಳೆದು ತರುತ್ತೇನೆ.

ಕಮಲೆ—ಏನೋ ಅವಾಂತರ.

ಸ್ವಲ್ಪ ಹೊತ್ತಾದ ಮೇಲೆ "ನೀವು ವೀಳ್ಯದೆಲೆ ತರಲಿಲ್ಲ" ಎಂದಳು.

ರಮೇಶ, "ಇಲ್ಲೇ ಒಬ್ಬ ಮಾರುತ್ತಿದ್ದಾನೆ." ಎಂದು ಎದ್ದು ಹೋಗಿ ತಂದನು. ಅವನ ಮನಸ್ಸು ನೆಮ್ಮದಿಯಾಗಿರಲಿಲ್ಲ. "ಕಮಲೆ ನನ್ನ ಹೆಂಡತಿಯಲ್ಲವೆಂದು ಹೇಗೆ ತಿಳಿಸುವುದು?" ಎಂಬ ಪ್ರಶ್ನೆ ಕಾಡುತ್ತಿತ್ತು.

ಕಮಲೆಗೆ ಚಿಕ್ಕಪ್ಪನ ಮನೆಯಲ್ಲಿ ಕೆಲಸ ಅಭ್ಯಾಸವಾಗಿದ್ದುದರಿಂದ ಈಗ ತೊಂದರೆಯಾಗಲಿಲ್ಲ ರಮೇಶ ಅವಳ ನಾಜೂಕು ಉತ್ಸಾಹಗಳನ್ನು ಮೆಚ್ಚಿದನು. ಆದರೆ ಮುಂದೇನು? ಹೆಂಡತಿಯೆಂದು ಸ್ವೀಕರಿಸುವುದೂ ಕಷ್ಟ, ಹೊರದೂಡುವುದೂ ಕಷ್ಟ. ಅವಳೊಡನೆ ಹೇಗೆ ವರ್ತಿಸಬೇಕು? ಹೇಮನಳಿನಿ ಜತೆಯಲ್ಲಿದ್ದಿದ್ದರೆ ಎಷ್ಟು ಸುಖವಾಗಿತ್ತು! ಅದು ಅಸಾಧ್ಯ ವಾದುದರಿಂದ ಕಮಲೆಗೇ ಎಲ್ಲವನ್ನೂ ತಿಳಿಸಬೇಕೆಂದು ನಿರ್ಧರಿಸಿದನು.

## ಅಧ್ಯಾಯ ೨೪

ಆ ಮಧ್ಯಾಹ್ನ ದೋಣಿ ಮರಳಿನಲ್ಲಿ ಸಿಕ್ಕಿಕೊಂಡಿತು. ತೇಲಿಸಲು ಮಾಡಿದ ಪ್ರಯತ್ನ ಸಫಲವಾಗಲಿಲ್ಲ. ಸಂಜೆ ನೀರಿಗಾಗಿ ಬಂದ ಹುಡುಗಿಯರು ದೋಣಿಯನ್ನು ಕುತೂಹಲದಿಂದ ನೋಡುತ್ತಾ ನಿಂತರು. ಹುಡುಗರು ನಿಂತಿದ್ದ ದೋಣಿಯನ್ನು ಅಣಕಿಸುತ್ತಾ ದಡದ ಮೇಲೆ ಕುಣಿ ಯುತ್ತಿದ್ದರು.

ಸಂಜೆಯಾಯಿತು. ಮುಳುಗುತ್ತಿದ್ದ ಸೂರ್ಯನ ಕಿರಣಗಳಿಂದ ಕೆಂಪಾಗಿದ್ದ ಪಶ್ಚಿಮ ದಿಗಂತವನ್ನು ನೋಡುತ್ತಾ ರಮೇಶ ದೋಣಿಯ ಅಂಚಿನಲ್ಲಿ ನಿಂತಿದ್ದನು. ಕಮಲೆ ಬಾಗಿಲಿಗೆ ಬಂದು ರಮೇಶನ ಲಕ್ಷ್ಯ

ವನ್ನೆಳೆಯಲು ಮೆಲ್ಲಗೆ ಕೆಮ್ಮಿದಳು. ಅವನು ಗಮನಿಸದೆ ಇದ್ದುದರಿಂದ ಬೀಗದ ಕೈ ಗೊಂಚಲನ್ನು ಸದ್ದುಮಾಡಿದಳು ರಮೇಶ ಅವಳ ಹತ್ತಿರ ಬಂದು, "ಇದೇನು ನನ್ನನ್ನು ಕೂಗುವ ವಿಧಾನ?"

"ಬೇರೆ ಉಪಾಯ ತೋರಲಿಲ್ಲ !"

"ನನ್ನ ತಂದೆ ತಾಯಿಗಳು ನನಗೆ ಹೆಸರಿಟ್ಟಿಲ್ಲವೆ? ರಮೇಶಬಾಬು ಎಂದು ಕೂಗಬಾರದೆ ?"

ಪುನಃ ಅದೇ ಹಾಸ್ಯ! ಹಿಂದೂ ಹೆಂಗಸು ಗಂಡನನ್ನು ಹೆಸರಿಟ್ಟು ಕರೆಯುವಳೆ? ಕಮಲೆಯ ಕೆನ್ನೆ ಕೆಂಪಾಯಿತು. ಮುಖ ತಿರುಗಿಸಿಕೊಂಡು "ಸಿಕ್ಕಿದ ಹಾಗೆ ಮಾತನಾಡುತ್ತೀರಿ. ಈಗಲೇ ಊಟಕ್ಕೇಳಿ. ಬೆಳಗ್ಗೆ ಸರಿಯಾಗಿ ಊಟಮಾಡಲಿಲ್ಲ." ಎಂದಳು.

ರಮೇಶನಿಗೆ ಹಸಿವಾಗಿದ್ದರೂ ಕಮಲೆಗೆ ತೊಂದರೆಯಾದೀತೆಂದು ಹಾಗೆ ಹೇಳಿರಲಿಲ್ಲ. ತಾನು ಕೇಳದೆಯೇ ಅವಳು ಊಟಕ್ಕೆ ಕರೆದುದರಿಂದ ಆನಂದವಾಯಿತು ಹಸಿವು ತೀರುವುದೊಂದೇ ಅಲ್ಲದೆ, ಕಮಲೆಯ ಆದರವೂ ಸೇರಿ ಮನಸ್ಸಿಗೆ ಸಂತೋಷವಾಯಿತು. ಆದರೆ ಆ ಆದರವನ್ನು ಸ್ವೀಕರಿಸಲು ತನಗೆ ಹಕ್ಕಿಲ್ಲವೆಂಬ ಆಲೋಚನೆ ಮನಸ್ಸನ್ನು ಕಲಕಿತು.

ಕಮಲೆ ಅವನ ತಗ್ಗಿಸಿದ ಮುಖವನ್ನು ನೋಡಿ, "ನಿಮಗೆ ಹಸಿವಿಲ್ಲ ವೇನೋ? ನಾನು ಕರೆದುದು ತಪ್ಪಾಯಿತು." ಎಂದಳು.

ರಮೇಶ ಮುಖ ಸರಿಪಡಿಸಿಕೊಂಡು ಎದ್ದು, "ಹಸಿವಿಲ್ಲದೆ ಏನು? ನಿನ್ನ ಬೀಗದ ಕೈ ಶಬ್ದಕ್ಕೆ ಬಕಾಸುರನೇ ಊಟಕ್ಕೆ ಎದ್ದು ಬರುತ್ತಾನೆ;" ಸುತ್ತಲೂ ನೋಡಿ, "ಅಯ್ಯೋ ಇಲ್ಲಿ ತಿನ್ನುವುದಕ್ಕೇನೂ ಇಲ್ಲವಲ್ಲಾ! ಹಸಿವಾಗಿದ್ದರೂ ಹಾಸಿಗೆ ತಿನ್ನುವಷ್ಟು ಹಸಿವಾಗಿಲ್ಲ. ಅದು ನನಗೆ ಅಭ್ಯಾಸವಿಲ್ಲ" ಎಂದನು.

ಕಮಲೆ ನಕ್ಕು, ಸ್ವಲ್ಪ ನಿಧಾನಿಸುವುದಕ್ಕಾಗುವುದಿಲ್ಲವೆ? ನಾನು ಕರೆದ ಕೂಡಲೆ ಇಷ್ಟು ಹಸಿವಾಯಿತೆ? ಒಂದು ನಿಮಿಷ ತಡೆದರೆ ಊಟ ತರುತ್ತೇನೆ."

"ಬೇಗ ಬಂದರೆ ವಾಸಿ. ಇಲ್ಲವಾದರೆ ಹಾಸಿಗೆ ಉಳಿಯುವುದಿಲ್ಲ. ಎಲ್ಲಾ ತಿಂದುಬಿಡುತ್ತೇನೆ."

ಕಮಲೆ ಪುನಃ ಗಟ್ಟಿಯಾಗಿ ನಕ್ಕಳು. ಅವಳು ಹೊರಗೆ ಹೋಗುತ್ತಲೇ ರಮೇಶನ ಮುಖ ಗಂಭೀರವಾಯಿತು.

ಕಮಲೆ ತಟ್ಟೆಯಲ್ಲಿ ಊಟ ತಂದು ಸೆರಗಿನಿಂದ ನೆಲವನ್ನು ಒರೆಸಿದಳು.

"ಇದೇನು?"

"ಆದರೇನಂತೆ. ಹೇಗಿದ್ದರೂ ನಾನು ಸೀರೆ ಬದಲಾಯಿಸಬೇಕು."

ಎಲೆ ಹಾಕಿ ಪಲ್ಯ ದೋಸೆಗಳನ್ನು ಬಡಿಸಿದಳು.

"ಈ ದೋಸೆಗಳೆಲ್ಲಿಯವು?"

"ಹೇಳಿ ನೋಡೋಣ."

ರಮೇಶ ಏನೇನೋ ಊಹಿಸಿದನು. ಕಡೆಗೆ "ಬೆಲೂಚಿಸ್ಥಾನದ ಅಲ್ಲಾವುದ್ದೀನನ ದೀಪದ ದೇವತೆ ಕಳುಹಿಸಿರಬೇಕು" ಎಂದನು. ಕಮಲೆ ಬೇಸರದಿಂದ, "ಹೀಗೆಲ್ಲಾ ಆಡಿದರೆ ನಾನು ಹೇಳುವುದೇ ಇಲ್ಲ," ಎಂದಳು.

ರಮೇಶ, "ದಯವಿಟ್ಟು ಹೇಳು. ಈ ನದಿಯ ನಡುವೆ ಇಷ್ಟು ಚನ್ನಾಗಿರುವ ದೋಸೆಗಳನ್ನು ಎಲ್ಲಿಂದ ತಂದೆ?"

ಮರಳಿನಲ್ಲಿ ದೋಣಿ ನಿಂತಾಗ ಉಮೇಶನನ್ನು ಸಾಮಾನು ತರಲು ಕಳುಹಿಸಿದ್ದಳು. ತಾನು ಸ್ಕೂಲಿನಲ್ಲಿದ್ದಾಗ ರಮೇಶ ಕೊಟ್ಟಿದ್ದ ಹಣದಲ್ಲಿ ಉಳಿದಿದ್ದ ಒಂದೆರಡು ರೂಪಾಯಿಗಳಿಗೆ ಹಿಟ್ಟನ್ನೂ ತುಪ್ಪವನ್ನೂ ತರಿಸಿದ್ದಳು. "ನಿನಗೇನಾದರೂ ಬೇಕೆ, ಉಮೇಶ?" ಎಂದು ಕೇಳಿದಳು.

ಅವನು "ಅಲ್ಲಿ ಒಬ್ಬ ಒಳ್ಳೆ ಮೊಸರು ಮಾರುತ್ತಿದ್ದ. ಇಲ್ಲಿ ಬೇಕಾದಷ್ಟು ಬಾಳೆ ಹಣ್ಣಿದೆ. ಸ್ವಲ್ಪ ಅಕ್ಕಿ ಹಿಟ್ಟು ಸಿಕ್ಕಿದರೆ ನಾನು ತಿಂಡಿ ಮಾಡಿಕೊಳ್ಳುತ್ತೇನೆ." ಎಂದನು.

ಕಮಲೆ—ದುಡ್ಡೇನಾದರೂ ಮಿಕ್ಕಿದೆಯೆ?

"ಇಲ್ಲಮ್ಮಾ"

ಕಮಲೆಗೆ ರಮೇಶನನ್ನು ದುಡ್ಡು ಕೇಳಲು ಇಷ್ಟವಿರಲಿಲ್ಲ. ಸ್ವಲ್ಪ ಆಲೋಚಿಸಿ.

"ಹೋಗಲಿ, ಈವತ್ತು ದೋಸೆಗಳನ್ನೇ ತಿನ್ನು." ಎಂದಳು.

"ಮೊಸರು ತರಲೆ?"

"ಸ್ವಲ್ಪ ನಿಧಾನಿಸು. ಯಜಮಾನರು ಊಟಕ್ಕೆ ಕುಳಿತಾಗ, ಕೇಳಿ ದುಡ್ಡು ತೆಗೆದುಕೋ."

ರಮೇಶನ ಊಟ ಅರ್ಧ ಮುಗಿದಾಗ ಉಮೇಶ ತಲೆಕೆರೆಯುತ್ತಾ ಎದುರಿಗೆ ಬಂದು ನಿಂತನು. ರಮೇಶ ತಲೆಯೆತ್ತಿದಾಗ, "ಸಾಮಾನಿಗೆ ದುಡ್ಡು ಬೇಕು" ಎಂದನು.

ಆಗ ರಮೇಶನಿಗೆ ದುಡ್ಡಿಲ್ಲದೆ ಸಾಮಾನು ಸಿಕ್ಕಲಾರದೆಂಬ ಆಲೋಚನೆ ಬಂತು.

"ನಿನ್ನ ಹತ್ತಿರ ದುಡ್ಡಿಲ್ಲವೇ, ಕಮಲಾ?"

ಕಮಲೆ ಇಲ್ಲವೆಂದಳು.

ಊಟವಾಗುತ್ತಲೇ ರಮೇಶ ಒಂದು ಸಣ್ಣ ದುಡ್ಡಿನ ಪೆಟ್ಟಿಗೆಯನ್ನು ಅವಳ ಕೈಗೆ ಕೊಟ್ಟು, "ನಿನ್ನ ಒಡವೆಗಳನ್ನೂ ದುಡ್ಡನ್ನೂ ಇದರಲ್ಲಿ ಇಟ್ಟುಕೋ" ಎಂದನು.

ಸಂಸಾರ ಭಾರವನ್ನು ಕಮಲೆಯ ಮೇಲೆ ಹೊರಿಸಿ, ದೋಣಿಯ ಅಂಚಿನಲ್ಲಿ ನಿಂತು ಪಶ್ಚಿಮದಿಗಂತವನ್ನು ಕತ್ತಲೆ ಮುಸುಕುತ್ತಿದ್ದುದನ್ನು ನೋಡುತ್ತಾ ನಿಂತನು.

ಉಮೇಶ ತಿನ್ನುತ್ತಿದ್ದಾಗ ಕಮಲೆ ಅವನ ವೃತ್ತಾಂತವನ್ನು ಕೇಳಿದಳು. ಅವನು ಮಲತಾಯಿಗೆ ಬೇಡದ ಮಗುವಾಗಿ, ಮನೆಬಿಟ್ಟು, ತಾಯ ಸಂಬಂಧಿಕರಿದ್ದ ಕಾಶಿಗೆ ಓಡಿಹೋಗುತ್ತಿದ್ದನು.

"ನಿಮ್ಮ ಜತೆಯಲ್ಲಿರಹೇಳಿದರೆ ನಾನೆಲ್ಲಿಗೂ ಹೋಗುವುದಿಲ್ಲ." ಎಂದು ತನ್ನ ಕಥೆ ಮುಗಿಸಿದನು.

ಅವನು "ಅಮ್ಮಾ" ಎಂದು ಆದರದಿಂದ ಕರೆದಾಗ ಕಮಲೆಯ ತಾಯ್ತನವು ಎಚ್ಚರಗೊಂಡಿತು,

"ಹಾಗೇ ಆಗಲಿ ಉಮೇಶ್. ನೀನು ನಮ್ಮ ಜತೆಯಲ್ಲೇ ಇರು."

## ಅಧ್ಯಾಯ ೨೫

ನದೀದಡದ ಸಸ್ಯಗಳು ಆಗಸವೆಣ್ಣಿನ ಕೇಸರಿ ಸೀರೆಯ ಅಂಚಿನಂತೆ ಕಾಣುತ್ತಿದ್ದುವು. ಬಾತುಗಳು ಹಿಂಡು ಹಿಂಡಾಗಿ ತಮ್ಮ ನಿವಾಸಗಳಿಗೆ ಹಿಂದಿರುಗಿದುವು. ಕಾಗೆಗಳು ಗೂಡು ಸೇರಿ ನಿಶ್ಯಬ್ದವಾಗಿದ್ದುವು. ಎಲ್ಲಾ ದೋಣಿಗಳೂ ದಡವನ್ನಾಶ್ರಯಿಸಿ ನಿಂತಿದ್ದುವು.

ರಮೇಶ ಬೆಳದಿಂಗಳಿನಲ್ಲಿ ಒಂದು ಬೆತ್ತದ ಕುರ್ಚಿಯ ಮೇಲೆ ಕುಳಿತಿದ್ದನು. ಪಶ್ಚಿಮಾಕಾಶದಲ್ಲಿ ಸಂಜೆಯ ಚಿನ್ನದ ಬಣ್ಣವನ್ನು ಕತ್ತಲೆ ನುಂಗುತ್ತಿತ್ತು. ಬೆಳದಿಂಗಳ ಮಾಯೆಯಲ್ಲಿ ಭೂಮಿಯೂ ಮಸಕಾಗಿ ತೋರುತ್ತಿತ್ತು. ರಮೇಶ ಮೆಲ್ಲಗೆ, "ಹೇಮಾ, ಹೇಮಾ." ಎಂದುಕೊಂಡನು. ಆ ಹೆಸರಿನ ಮಾಯೆಯಲ್ಲಿ ಹೃದಯ ಸಿಕ್ಕಿಕೊಂಡು ಹೇಮಳ ಒದ್ದೆ ಕಣ್ಣುಗಳೂ ಪ್ರೇಮ ಚಿತ್ರವೂ ಕಣ್ಣಿಗೆ ಕಟ್ಟಿದಂತಾಯಿತು. ಮೈನಡುಗಿ ಕಣ್ಣುಗಳಲ್ಲಿ ನೀರು ಚಿಮ್ಮಿತು

ಹಿಂದಿನ ಎರಡು ವರ್ಷಗಳ ಜೀವಿತದ ನೆನಪುಂಟಾಯಿತು ಹೇಮನಳಿನಿಯನ್ನು ಮೊದಲು ಕಂಡ ದಿನ! ಎಂತಹ ಮಹತ್ವದ ದಿನವೆಂದು ಆಗ ತಿಳಿಯಲಿಲ್ಲ. ಜೋಗೇಂದ್ರನೊಡನೆ ಮನೆಗೆ ಹೋದಾಗ ಹೇಮನಳಿನಿ ಚಹವನ್ನು ಸಿದ್ಧಪಡಿಸುತ್ತಿದ್ದಳು. ಸ್ವಲ್ಪ ಸ್ವಲ್ಪವಾಗಿ ಸಲಿಗೆ ಬೆಳೆಯಿತು. ಸ್ನೇಹ ಬೆಳೆಯುತ್ತಾ ಹೇಮನಳಿನಿ ಅವನ ಪ್ರೇಮದ ಅಧಿದೇವತೆಯಾದಳು. ತನ್ನ ಪ್ರೇಮವೆಂದರೆ ಅವನಿಗೆ ಬಲು ಹೆಮ್ಮೆ.

ಆಗ ಇನ್ನೂ ಪ್ರೇಮದ ನಿಜವಾದ ಆಳವನ್ನರಿತಿರಲಿಲ್ಲ. ಕಮಲೆ ತನ್ನ ಜೀವನದಲ್ಲಿ ಹಠಾತ್ತಾಗಿ ಪ್ರವೇಶಿಸಿ ಬಿಡಿಸಲಾಗದ ಸಮಸ್ಯೆಯನ್ನು ತಂದೊಡ್ಡುವವರೆಗೂ ಹೇಮನಳಿನಿಯಲ್ಲಿ ಎಷ್ಟು ಪ್ರೇಮವಿದ್ದಿತೆಂಬ ಅರಿವೇ ರಮೇಶನಿಗಿರಲಿಲ್ಲ. ಚಿಂತೆಯಿಂದ ತಲೆಯನ್ನು ಕೈಮೇಲೂರಿದನು. ಜೀವಮಾನವೆಲ್ಲಾ ಸಿಕ್ಕದ ವಸ್ತುವಿಗಾಗಿ ಹಾತೊರೆಯುತ್ತಾ ಬಲೆಯಲ್ಲಿ ಸಿಕ್ಕಿದ ಪ್ರಾಣಿಯಂತೆ ಒದ್ದಾಡುತ್ತಿರಬೇಕು. ತಪ್ಪಿಸಿಕೊಳ್ಳುವ ಉಪಾಯವಿಲ್ಲವೆ ?

ತಲೆಯೆತ್ತಿದಾಗ ಎದುರಿಗೆ ಕಮಲೆ ಒಂದು ಕುರ್ಚಿಗೆ ಒರಗಿ ನಿಂತಿದ್ದಳು. ಅವನು ಕುಳಿತಿದ್ದ ರೀತಿಯನ್ನು ನೋಡಿ ಅವಳಿಗೆ ಗಾಬರಿಯಾಗಿದ್ದಿತು.

"ನಿದ್ದೆ ಬಂದಿತ್ತೇ?"

"ಇಲ್ಲ, ಕಮಲ; ನಿದ್ರೆಯಿಲ್ಲ, ಕೂತುಕೋ. ಒಂದು ಕಥೆ ಹೇಳುತ್ತೇನೆ." ಕಥೆಯೆಂದರೆ ಕಮಲೆಗೆ ತುಂಬಾ ಇಷ್ಟ. ಕುರ್ಚಿಯನ್ನು ಹತ್ತಿರ ಎಳೆದುಕೊಂಡು ಕುಳಿತಳು. ಎಲ್ಲಾ ವೃತ್ತಾಂತವನ್ನೂ ಹೇಳಬೇಕೆಂದು ನಿರ್ಧರಿಸಿ ರಮೇಶ ಕಥೆಯ ನೆವದಲ್ಲಿ ಸತ್ಯದ ಕಾಠಿನ್ಯವನ್ನು ಕಡಮೆ ಮಾಡಲು ಪ್ರಯತ್ನಿಸುತ್ತಿದ್ದನು.

"ಒಂದೂರಿನಲ್ಲಿ ರಾಜಪುತ್ರರಿದ್ದರು ಅವರು—"

"ಯಾವಾಗ? ಬಹಳ ದಿನಗಳ ಹಿಂದೆಯೋ?"

"ಹೌದು. ನೀನಿನ್ನೂ ಹುಟ್ಟಿರಲಿಲ್ಲ."

"ನೀವು ಬಹಳ ಹಳಬರು! ಹುಟ್ಟಿದ್ದಿರೇನೋ! ಬಿಡಿ ಆಮೇಲೆ?"

"ಈ ರಾಜಪುತ್ರರಲ್ಲಿ ಒಂದು ವಿಚಿತ್ರ ಪದ್ಧತಿಯಿದ್ದಿತು. ಮದುವೆಯಾಗಲು ತಮ್ಮ ಬದಲಾಗಿ ಕತ್ತಿಯನ್ನು ಕಳುಹಿಸುತ್ತಿದ್ದರು. ಮೊದಲು ಹುಡುಗಿ ಕತ್ತಿಯನ್ನು ಮದುವೆಯಾಗಿ ಗಂಡನ ಮನೆಗೆ ಬಂದು ಅವನನ್ನು ಪುನಃ ವಿವಾಹವಾಗುತ್ತಿದ್ದಳು."

"ಎಂಥ ವಿಚಿತ್ರ ಪದ್ಧತಿ!"

ರಮೇಶ—ಅದು ಸರಿಯಲ್ಲವೆಂದೇ ನನ್ನ ಅಭಿಪ್ರಾಯ. ಆದರೆ ಕಥೆ ಹಾಗೇ ಇದೆ. ಮದುವೆಗಾಗಿ ಹೆಣ್ಣಿನ ಮನೆಗೆ ಹೋಗುವುದು ಅವಮಾನಕರವೆಂದು ಅವರು ಭಾವಿಸುತ್ತಿದ್ದರು. ಕಥೆಯ ರಾಜನೂ ಆ ಗುಂಪಿಗೆ ಸೇರಿದವನು. ಒಂದು ದಿನ ಅವನು..... ..

ಕಮಲ—ಅವನು ಯಾವ ಊರಿನ ದೊರೆ?

ರಮೇಶ—ಮಧುರೆಯ ದೊರೆ. ಒಂದು ದಿನ ಅವನು.... ...

ಕಮಲ—ಅವನ ಹೆಸರೇನು?"

ಒಂದಂಶವನ್ನೂ ಬಿಡಲು ಕಮಲೆಗೆ ಇಷ್ಟವಿಲ್ಲ, ರಮೇಶನಿಗೆ ಅದು ತಿಳಿದಿದ್ದರೆ ಮೊದಲೇ ಕಥೆಯನ್ನು ಸಿದ್ಧಪಡಿಸಿಕೊಳ್ಳುತ್ತಿದ್ದನು. ಸ್ವಲ್ಪ

ಯೋಚಿಸಿ, "ಅವನ ಹೆಸರು ರಣಜಿತ್ ಸಿಂಗ್" ಎಂದನು.

ಕಮಲ-ಮಧುರೆಯ ದೊರೆ-ರಣಜಿತ್‌ಸಿಂಗ್. ಸರಿ.ಆಮೇಲೆ—?

ರಮೇಶ—ಬೇರೆ ರಾಜನಿಗೆ ಸುಂದರಿಯಾದ ಮಗಳಿರುವಳೆಂಬ ಸುದ್ದಿ ಅವನ ಕಿವಿಗೆ ಬಿತ್ತು.

ಕಮಲ—ಅವನು ಯಾವ ಊರಿನ ದೊರೆ?

ರಮೇಶ—ಕಂಚಿಯ ರಾಜನೆಂದುಕೊಳ್ಳೋಣ.

ಕಮಲ—ಎಂದುಕೊಳ್ಳುವುದೇಕೆ? ಅವನು ನಿಜವಾಗಿ ಕಂಚಿಯ ರಾಜನಲ್ಲವೆ ?

ರಮೇಶ—ಹೌದು. ಅವನ ಹೆಸರೂ ಬೇಕೋ ? ಅಮರಸಿಂಹ.

ಕಮಲ—ಸುಂದರಿಯಾದ ಆ ಮಗಳ ಹೆಸರನ್ನೇ ಹೇಳಲಿಲ್ಲ.

ರಮೇಶ—ಮರೆತೆ. ಅವಳ ಹೆಸರು. ..ತಾಳು....ಅವಳ ಹೆಸರು ಚಂದ್ರಾ.

ಕಮಲ—ನಿಮಗೆ ಸರಿಯಾಗಿ ಯಾವುದೂ ಜ್ಞಾಪಕವಿರುವುದಿಲ್ಲ. ನನ್ನ ಹೆಸರನ್ನೇ ಮರೆತಿದ್ದಿರಿ.

ರಮೇಶ—ಅಯೋಧ್ಯೆಯ ರಾಜ ಆ ಸುಂದರಿಯ ವೃತ್ತಾಂತವನ್ನು ಕೇಳಿ ...

ಕಮಲೆ—ಅಯೋಧ್ಯೆಯೆಲ್ಲಿ ಬಂತು ? ಮಧುರೆಯ ರಾಜನೆಂದು ಹೇಳಿದಿರಿ.

ರಮೇಶ—ಒಂದೇ ಊರಿಗೆ ರಾಜನಾಗಿರುತ್ತಾನೆಯೆ ? ಅವನು ಅಯೋಧ್ಯೆ ಮಧುರೆಗಳೆರಡಕ್ಕೂ ರಾಜನಾಗಿದ್ದ.

ಕಮಲೆ—ಅವೆರಡೂ ಹತ್ತಿರಿದ್ದುವೇ.

ರಮೇಶ—ಅಕ್ಕಪಕ್ಕದ ರಾಜ್ಯಗಳು.

ಕಮಲೆ ಅನೇಕ ತಪ್ಪುಗಳನ್ನು ಕಂಡುಹಿಡಿಯುತ್ತಿದ್ದರೂ ಹೇಗೋ ಸರಿ ಮಾಡಿಕೊಂಡು ಹೇಳುತ್ತಿದ್ದನು.

"ಮಧುರೆಯ ರಾಜ ಕಂಚಿಯ ರಾಜಪುತ್ರಿಯನ್ನು ಮದುವೆಯಾಗಲು ಬಯಸಿ ಒಬ್ಬ ರಾಯಭಾರಿಯನ್ನು ಕಳುಹಿಸಿದನು. ಅಮರಸಿಂಹನೂ ಒಪ್ಪಲು, ರಣಜಿತನ ತಮ್ಮ ಇಂದ್ರಜಿತ್‌ಸಿಂಗನು ಸೈನ್ಯಸಮೇತವಾಗಿ

ಕಂಚಿಗೆ ಹೋದನು. ಅಲ್ಲಿ ದೊಡ್ಡ ಉತ್ಸವವನ್ನು ಏರ್ಪಡಿಸಿದ್ದರು.

ಶುಭ ಮುಹೂರ್ತವನ್ನು ಜೋಯಿಸರು ನಿಶ್ಚಯಿಸಿದರು. ಬಹುಳ ದ್ವಾದಶಿಯ ದಿನ ಮಧ್ಯರಾತ್ರಿಯ ಮೇಲೆ ಎರಡು ಘಳಿಗೆಗೆ ಮುಹೂರ್ತ ಗೊತ್ತಾಗಿದ್ದಿತು. ಆ ರಾತ್ರಿ ರಾಜ್ಯವನ್ನೆಲ್ಲಾ ಅಲಂಕರಿಸಿದರು. ರಾಜಕುಮಾರಿ ತನ್ನ ಗಂಡನನ್ನು ನೋಡಿಯೇ ಇರಲಿಲ್ಲ. ಅವಳು ಹುಟ್ಟಿದಾಗ ಪರಮಾನಂದಸ್ವಾಮಿ ರಾಜನನ್ನು ಕುರಿತು. "ನಿಮ್ಮ ಮಗಳ ಗ್ರಹಚಾರ ಚನ್ನಾಗಿಲ್ಲ. ಮದುವೆಯ ಕಾಲದಲ್ಲಿ ಅವಳ ಗಂಡನ ಹೆಸರನ್ನು ಅವಳಿಗೆ ತಿಳಿಸಕೂಡದು." ಎಂದು ಹೇಳಿದ್ದರು.

ಕತ್ತಿಯೊಡನೆ ರಾಜಕುಮಾರಿಯ ಮದುವೆ ನಡೆಯಿತು. ಇಂದ್ರಜಿತ್ತನು ಬಹುಮಾನಗಳನ್ನೆಲ್ಲಾ ಕೊಟ್ಟು ಅತ್ತಿಗೆಗೆ ನಮಸ್ಕರಿಸಿದನು. ಅವನೂ ಲಕ್ಷ್ಮಣನಂತೆಯೇ, ಅತ್ತಿಗೆಯ ಮುಖ ನೋಡುವ ಸಾಹಸಕ್ಕೆ ಹೋಗದೆ ವರ್ಣರಂಜಿತವಾದ ಆಕೆಯ ಪಾದಗಳಲ್ಲಿಯೇ ದೃಷ್ಟಿ ನೆಟ್ಟಿದ್ದನು.

ಮದುವೆಯ ಮಾರನೆಯ ದಿನ ರಾಜಕುಮಾರಿಯನ್ನು ಅಲಂಕೃತೆವಾದ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಇಂದ್ರಜಿತ್ತನು ಹೊರಟನು. ಅವಳಿಗೇನು ತೊಂದರೆ ಸಂಭವಿಸುವುದೋ ಎಂದು ತಂದೆ ಆಶೀರ್ವದಿಸಿ ಬೀಳ್ಕೊಟ್ಟನು. ತಾಯಿ ಅಳುತ್ತಾ ಮಗಳನ್ನು ಮುದ್ದಿಸಿದಳು. ದೇವಸ್ಥಾನಗಳಲ್ಲೆಲ್ಲಾ ರಾಜಕುಮಾರಿಯ ಶ್ರೇಯಸ್ಸಿಗಾಗಿ ಪೂಜೆಗಳು ನಡೆಯುತ್ತಿದ್ದುವು.

ಕಂಚಿಯಿಂದ ಮಧುರೆಗೆ ಒಂದು ದಿನದ ಪ್ರಯಾಣ ಎರಡನೆಯ ದಿನ ಸಂಜೆ ವೇತ್ರಾ ನದಿಯ ದಡದಲ್ಲಿ ರಾತ್ರಿ ನಿಲ್ಲಲು ಏರ್ಪಾಡುಗಳನ್ನು ಮಾಡುತ್ತಿದ್ದರು. ಪಕ್ಕದ ಕಾಡಿನಲ್ಲಿ ಹಠಾತ್ತಾಗಿ ದೀಪಗಳು ಕಾಣಿಸಿದುವು. ಒಬ್ಬನು ನೋಡಿ ಬಂದು, ಅದೂ ರಾಜಪುತ್ರರ ಒಂದು ಮದುವೆಯ ಗುಂಪೆಂದೂ, ಕಳ್ಳರ ಹೆದರಿಕೆಯಿಂದ ಇಂದ್ರಜಿತ್ತನ ರಕ್ಷಣೆ ಕೋರಿದರೆಂದೂ ಹೇಳಿದನು. ಇಂದ್ರಜಿತ್ತನು ಒಪ್ಪಿ ಆ ಗುಂಪನ್ನೂ ಕರೆದುಕೊಂಡನು.

ಮಾರನೆಯ ರಾತ್ರಿಯೇ ಅಮಾವಾಸ್ಯೆ; ಮುಂದೆ ಪರ್ವತಗಳು,

ಹಿಂದೆ ಕಾಡು. ಆಯಾಸದಿಂದ ರಾಜಪುತ್ರರೆಲ್ಲರೂ ನಿದ್ರಿಸುತ್ತಿದ್ದರು. ಹಠಾತ್ತಾಗಿ ಗೊಂದಲವೆದ್ದಿತು. ಕಳ್ಳರು ಕುದುರೆಗಳ ಹಗ್ಗಗಳನ್ನು ಕತ್ತರಿಸಿದ್ದರು. ಡೇರೆಗಳು ಉರಿಯುತ್ತಿದ್ದುವು. ಶತ್ರುವಾರೋ, ಮಿತ್ರನಾರೋ ತಿಳಿಯಲಿಲ್ಲ. ಗಲಾಟೆ ನಿಂತಾಗ ರಾಜಪುತ್ರಿ ಕಾಣಲಿಲ್ಲ. ಹೆದರಿ ಯಾವುದೋ ಗುಂಪಿನೊಡನೆ ಹೊರಟುಹೋಗಿದ್ದಳು. ಆ ಗುಂಪು ರಾಜಕುಮಾರಿ ಚಂದ್ರಳೇ ತಮ್ಮ ರಾಜನ ವಧುವೆಂದು ಕರೆದುಕೊಂಡು ಹೋದರು. ರಾಜನಾದ ಚೇತ್‌ಸಿಂಗನ ತಾಯಿ ಅವಳನ್ನು ಸ್ವಾಗತಿಸಿದಳು. ಚೇತ್‌ಸಿಂಗನು ಅವಳ ರೂಪಕ್ಕೆ ಮರುಳಾದನು. ಅವನೇ ತನ್ನ ಪತಿಯೆಂದು ರಾಜಕುಮಾರಿಯೂ ನಂಬಿದಳು. ಪರಿಚಯ ಹೊಂದಿ ಇಬ್ಬರೂ ಮಾತನಾಡುತ್ತಿದ್ದಾಗ ಆ ಹುಡುಗಿ ತನ್ನ ಪತ್ನಿಯಲ್ಲವೆಂದೂ ರಾಜಕುಮಾರಿ ಚಂದ್ರಾ ಎಂದೂ ಚೇತ್‌ಸಿಂಗನಿಗೆ ತಿಳಿಯಿತು.

## ಅಧ್ಯಾಯ ೨೬

ಉಸಿರಾಡದೆ ಕಮಲೆ ಕೇಳುತ್ತಿದ್ದಳು. "ಆಮೇಲೆ?"

"ನನಗಷ್ಟೇ ತಿಳಿದಿರುವುದು. ಮುಂದೇನಾಯಿತೆಂದು ನೀನೇ ಹೇಳು."

"ಅದು ಸರಿಯಲ್ಲ. ನೀವೇ ಹೇಳಿ."

"ನಿಜವಾಗಿ ಆ ಕಥೆಯನ್ನು ನಾನು ಪೂರ ಓದಿಲ್ಲ."

"ನೀವು ಬಹಳ ಕೆಟ್ಟವರು." ಕಮಲೆಗೆ ಕೋಪ.

ರಮೇಶ—ಕಥೆ ಬರೆದವನ ಮೇಲೆ ರೇಗು. ನೀನೇ ಹೇಳು. ಚೇತ್‌ಸಿಂಗನೇನು ಮಾಡಬೇಕು?

ಕಮಲೆ ಆಲೋಚಿಸಿ, "ನನಗೆ ಗೊತ್ತಿಲ್ಲ," ಎಂದಳು.

ರಮೇಶ ನಿಧಾನವಾಗಿ, "ಚಂದ್ರಳಿಗೆ ಸತ್ಯವನ್ನು ತಿಳಿಸಬೇಕೆ?"

ಕಮಲ—ಹೇಳದಿದ್ದರೆ ಎಷ್ಟೋ ತೊಡಕುಗಳು. ಹೇಳಿದರೇನೇ ವಾಸಿ. ರಮೇಶ ಮೆಲ್ಲಗೆ, "ವಾಸಿ," ಎಂದು ನಿಧಾನಿಸಿ, "ಕಮಲಾ, ಒಂದುವೇಳೆ........"

ಕಮಲ—ಏನು ?

ರಮೇಶ—ನಾನು ಚೇತ್‌ಸಿಂಗನಾಗಿ, ನೀನು ಚಂದ್ರಳಾಗಿದ್ದರೆ....

ಕಮಲ—ಹಾಗೆಲ್ಲಾ ಮಾತಾಡಬೇಡಿ.

ರಮೇಶ—ಹಾಗಾಗಿದ್ದರೆ ನಾನೇನು ಮಾಡಬೇಕು?

ಕಮಲೆ ಉತ್ತರಕೊಡದೆ ಅಲ್ಲಿಂದ ಎದ್ದು ಹೋದಳು. ಉಮೇಶ ನದಿಯನ್ನು ನೋಡುತ್ತಾ ಕುಳಿತಿದ್ದನು.

"ಉಮೇಶ, ದೆವ್ವವನ್ನು ನೋಡಿದ್ದೀಯಾ?"

"ನೋಡಿದ್ದೇನಮ್ಮಾ."

"ಹೇಗಿರುತ್ತೆ, ನನಗೆ ಹೇಳು," ಎಂದು ಒಂದು ಕುರ್ಚಿ ಎಳೆದು ಕೊಂಡು ಕುಳಿತಳು.

ಕಮಲೆಗೆ ಕೋಪ ಬಂದುದು ರಮೇಶನಿಗೆ ತಿಳಿಯಿತು. ಚಂದ್ರನು ಮುಳುಗಿ ಹೋಗಿದ್ದನು. ದೀಪಗಳನ್ನಾರಿಸಿ ಹಡಗಿನಲ್ಲಿದ್ದವರೆಲ್ಲಾ ಮಲಗಿದ್ದರು. ಅಲ್ಲಲ್ಲಿ ಹಳ್ಳಿಯ ದೀಪಗಳು ದಡದ ಮೇಲೆ ಮಿನುಗು ತ್ತಿದ್ದುವು. ನದಿಯ ಏರಿಳಿತಗಳಿಂದ ದೋಣಿ ನಡುಗುತ್ತಿತ್ತು.

ಈ ವಿಚಿತ್ರ ಸನ್ನಿವೇಶದಲ್ಲಿ ತನ್ನ ಕಠಿಣ ಸಮಸ್ಯೆಯನ್ನು ಬಿಡಿಸುವ ಪ್ರಯತ್ನದಲ್ಲಿ ರಮೇಶನಿದ್ದನು. ಕಮಲೆಯನ್ನಾಗಲಿ ಹೇಮನಳಿನಿ ಯನ್ನಾಗಲಿ ಬಿಡಲೇಬೇಕು. ಕರ್ತವ್ಯದ ಹಾದಿ ಸ್ಪಷ್ಟವಾಗಿತ್ತು. ಹೇಮನಳಿನಿ ಬೇರೊಬ್ಬನನ್ನು ವರಿಸಿ ಸುಖಿಯಾಗಬಹುದು. ಕಮಲೆಗೆ ತನ್ನನ್ನು ಬಿಟ್ಟರೆ ಬೇರೆ ಗತಿಯಿಲ್ಲ. ಆದರೆ ಹೇಮನಳಿನಿ ತನ್ನನ್ನು ಮರೆಯಬಹುದೆಂಬುದು ಅವನ ಸ್ವಾರ್ಥಕ್ಕೆ ರುಚಿಸಲಿಲ್ಲ. ಕೈ ಚಾಚಿದರೆ ಸಿಕ್ಕಬಹುದೆನ್ನುವಷ್ಟು ಹತ್ತಿರ ಅವಳು ಸುಳಿಯುತ್ತಿರುವಂತೆ ಅವನಿ ಗೆನ್ನಿಸಿತು.

ಕೈಮೇಲೆ ತಲೆಯಿಟ್ಟುಕೊಂಡು ಬಿದ್ದಿದ್ದನು. ದೂರದಲ್ಲಿ ಕೂಗಿದ ನರಿಗೆ ಉತ್ತರವಾಗಿ ಹಳ್ಳಿಯ ನಾಯಿಗಳು ಬಗುಳತೊಡಗಿದುವು. ಕಮಲೆ ಅಲ್ಲಿ ಬಂದು ನಿಲ್ಲಲು ರಮೇಶ ಎದ್ದು, "ಹೊತ್ತಾಯಿತು. ಮಲಗ ಲಿಲ್ಲವೇ ಕಮಲಾ?" ಎಂದನು.

"ನೀವು ಮಲಗುವುದಿಲ್ಲವೇ?"

"ಬರುತ್ತೇನೆ. ನೀನು ಕಾದಿರಬೇಡ."

ಕಮಲೆ ತನ್ನ ಕೊಠಡಿಗೆ ಹೋದಳು. ದೆವ್ವದ ಕಥೆಯನ್ನು ಕೇಳಿ ಹೆದರಿದೆನೆಂದು ಅವಳು ರಮೇಶನಿಗೆ ಹೇಳಲಿಲ್ಲ. ಆದರೂ ಅವಳ ಹೆದರಿಕೆ ತಿಳಿದು ರಮೇಶ, "ಹೆದರಬೇಡ ಕಮಲಾ. ನಿನ್ನ ಕೊಠಡಿಯ ಹತ್ತಿರವೇ ನಾನೂ ಮಲಗುತ್ತೇನೆ," ಎಂದನು.

"ಭಯವೇನು ಬಂತು?"

ರಮೇಶ ದೀಪವನ್ನಾರಿಸಿ ಮಲಗಿದನು. ತನ್ನೊಳಗೇ "ನಾನು ಕಮಲೆಯನ್ನು ಬಿಡಲು ಸಾಧ್ಯವಿಲ್ಲ" ಎಂದುಕೊಂಡನು. ಕತ್ತಲಲ್ಲಿ ಮಲಗಿ ಹೇಮನಳಿನಿ ತನಗಿನ್ನು ಲಭಿಸುವುದಿಲ್ಲವೆಂಬ ಆಲೋಚನೆಯನ್ನು ಸಹಿಸಲಾರದೆ ಎದ್ದು ಹೊರಗೆ ಹೋದನು. ಅನಂತಾಕಾಶವನ್ನು ನೋಡಿ ತನ್ನ ದುಃಖದ ಅಲ್ಪತೆಯನ್ನರಿತನು. ತನ್ನ ಇರವು ಸಾವುಗಳು ಮಿನುಗುವ ನಕ್ಷತ್ರಗಳ ಲಕ್ಷ್ಯಕ್ಕೇ ಬರುವುದಿಲ್ಲ. ಸುಟ್ಟು ಭಸ್ಮವಾದರೂ ನದಿ ತನ್ನ ಪಥವನ್ನು ಬದಲಾಯಿಸುವುದಿಲ್ಲ.

## ಅಧ್ಯಾಯ ೨೭

ಕತ್ತಲಾಗಿದ್ದಾಗಲೇ ಕಮಲೆಗೆ ಎಚ್ಚರವಾಯಿತು. ಸ್ವಲ್ಪ ಹೊತ್ತು ಎಲ್ಲಿರುವೆನೆಂದು ತಿಳಿಯಲಿಲ್ಲ ಬಾಗಿಲನ್ನು ತೆಗೆದು ಹೊರಗೆ ನೋಡಿದಾಗ ನೀರನ್ನು ಮಂಜು ಮುಸುಕಿತ್ತು. ಪೂರ್ವದಲ್ಲಿ ಆಕಾಶ ಬೆಳ್ಳಗಾಗುತ್ತಿತ್ತು. ಅಲ್ಲಲ್ಲಿ ಒಂದೊಂದು ದೋಣಿ ಕಾಣಿಸಿಕೊಳ್ಳುತ್ತಿತ್ತು.

ಕಮಲೆಯ ಹೃದಯದಲ್ಲಿ ಅವ್ಯಕ್ತವಾದ ವೇದನೆಯುಂಟಾಗುತ್ತಿದ್ದಿತು. ಗಂಟಲು ಕಟ್ಟಿ ದುಃಖ ಉಕ್ಕಿ ಬರುತ್ತಿದ್ದುದೇಕೆಂದು ತಿಳಿಯಲಿಲ್ಲ. ಹಿಂದಿನ ದಿನ ತನಗೆ ಬಂಧುಗಳಿಲ್ಲವೆಂಬ ಅರಿವೇ ಅವಳಿಗಿರಲಿಲ್ಲ. ಈಗ ಅನಾಥಳೆಂದು ತೋರಿದುದೇಕೆ? ರಮೇಶನಿರಲಿಲ್ಲವೆ? ವಿಶಾಲ ಜಗತ್ತಿನಲ್ಲಿ ಒಂಟಿಯಾಗಿದ್ದಳೆಂದೆನ್ನಿಸಿದುದೇಕೆ?

ನದಿ ಚಿನ್ನದಂದೆ ಹೊಳೆಯುತ್ತಿದ್ದಿತು. ದೋಣಿಯ ಯಂತ್ರಗಳು ಶಬ್ದ ಮಾಡಲಾರಂಭಿಸಲು ಹಳ್ಳಿಯ ಮಕ್ಕಳೆಲ್ಲಾ ಓಡಿ ಬಂದರು. ರಮೇ

ಶನಿಗೂ ಎಚ್ಚರವಾಗಲು ಕಮಲೆಯನ್ನು ಹುಡುಕಿಕೊಂಡು ಬಂದನು. ಅವನನ್ನು ನೋಡಿ ಕಮಲೆ ಗಾಬರಿಯಿಂದ ಮುಖದಮೇಲೆ ಸೆರಗನ್ನು ಎಳೆದುಕೊಂಡಳು.

"ಮುಖ ತೊಳೆದೆಯಾ ಕಮಲಾ?"

ಪ್ರಶ್ನೆಯಲ್ಲಿ ಕೋಪಬರಲು ಕಾರಣವಿರಲಿಲ್ಲ. ಆದರೂ ಅವಳು ಬೇರೆ ಕಡೆಗೆ ತಿರುಗಿ ತಲೆಯಾಡಿಸಿದಳು.

"ಬೇಗ ಸ್ನಾನಮಾಡುವುದು ವಾಸಿ."

ಕಮಲೆ ಉತ್ತರಕೊಡದೆ ಸೀರೆ ತೆಗೆದುಕೊಂಡು ಬಚ್ಚಲ ಮನೆಗೆ ಹೋದಳು.

ರಮೇಶನ ವಿಚಾರಣೆಯಿಂದ ಅವಳಿಗೆ ಬೇಸರವಾಯಿತು. ಅವನು ತನ್ನೊಡನೆ ಸಲಿಗೆಯಾಗಿಲ್ಲವೆಂದು ಅವಳು ತಿಳಿದಿದ್ದಳು. ಆದರಿಂದ ಅವನೆದುರಿಗೆ ತಲೆಯೆತ್ತಲು ಕೂಡ ಅವಳಿಗೆ ನಾಚಿಕೆಯಾಗಿದ್ದಿತು.

ಸ್ನಾನಮಾಡಿ ಬಂದು ಬಟ್ಟೆಗಳನ್ನು ತೆಗೆದುಕೊಳ್ಳಲು ಪೆಟ್ಟಿಗೆ ತೆಗೆದಳು. ರಮೇಶನ ಹಣದ ಪೆಟ್ಟಿಗೆ ಕಾಣಿಸಿತು. ಹಿಂದಿನ ದಿನ ಆ ಪೆಟ್ಟಿಗೆಯನ್ನು ನೋಡಿ ಆನಂದಪಟ್ಟಿದ್ದಳು. ಇಂದು ಆ ಸಂತೋಷ ಇರಲಿಲ್ಲ. ಆ ಪೆಟ್ಟಿಗೆ ತನ್ನದಲ್ಲ. ಆ ಹಣ ಖರ್ಚುಮಾಡುವ ಅಧಿಕಾರ ತನಗಿಲ್ಲ. ಅದೊಂದು ಹೊಣೆಯೇ ಹೊರತು ಅಧಿಕಾರವಲ್ಲ. ರಮೇಶ ಬಂದು, "ಪೆಟ್ಟಿಗೆಯಲ್ಲಿ ದೆವ್ವವಿತ್ತೇ? ನಿಶ್ಶಬ್ದವಾಗಿರುವೆಯಲ್ಲಾ?" ಎಂದನು.

ಕಮಲೆ ಪೆಟ್ಟಿಗೆಯನ್ನೆತ್ತಿ "ತೆಗೆದುಕೊಳ್ಳಿ." ಎಂದಳು.

"ನನಗೇಕೆ ?"

"ಇಂಥಾದ್ದನ್ನು ತರಿಸಬೇಕೆಂದು ಹೇಳಿದರೆ ತರಿಸುತ್ತೇನೆ."

"ನಿನಗೇನೂ ಬೇಡವೆ ?"

"ನನಗೆ ಹಣವೇಕೆ ?"

ರಮೇಶ ನಕ್ಕು "ಆ ಮಾತು ಹೇಳಲು ಎಷ್ಟು ಜನರಿಗೆ ಸಾಧ್ಯ! ಬೇಡದಿದ್ದರೆ ಯಾರಿಗಾದರೂ ಕೊಟ್ಟುಬಿಡು. ನನಗೇಕೆ ?"

ಕಮಲೆ ಪೆಟ್ಟಿಗೆಯನ್ನು ಕೆಳಗಿಟ್ಟಳು.

ರಮೇಶ—ನಿಜಹೇಳು. ಕಥೆ ಮುಗಿಸಲಿಲ್ಲವೆಂದು ಕೋಪವೆ?

"ನನಗೆ ಕೋಪವಿಲ್ಲ."

"ಆ ಪೆಟ್ಟಿಗೆ ತೆಗೆದುಕೊಂಡರೆ ನಂಬುತ್ತೇನೆ."

"ಅದು ನಿಮ್ಮದು. ನೀವೇ ಇಟ್ಟುಕೊಳ್ಳಿ."

"ಕೊಟ್ಟಿದ್ದನ್ನು ಹಿಂದಕ್ಕೆ ತೆಗೆದುಕೊಂಡರೆ ದೆವ್ವಗಳಾಗುತ್ತಾರೆ. ನನಗೆ ಹಾಗಾಗಲು ಇಷ್ಟವಿಲ್ಲ."

ಕಮಲೆಗೆ ನಗು ಬಂತು. "ನಾನೆಲ್ಲೂ ಹಾಗೆ ಕೇಳಿಲ್ಲ." ಕಮಲೆಯ ನಗುವಿನಿಂದ ಅಸಮಾಧಾನ ಕೊನೆಗಂಡಿತು.

ರಮೇಶ—ಮುಂದಿನ ಸಲ ದೆವ್ವ ಸಿಕ್ಕಿದಾಗ ಕೇಳಿ ನೋಡು.

ಕಮಲ—ನೀವು ದೆವ್ವ ನೋಡಿದ್ದೀರಾ?

ರಮೇಶ—ಸುಳ್ಳುದೆವ್ವಗಳೆಷ್ಟೋ ಇವೆ.

ಕಮಲ—ಉಮೇಶ........

ರಮೇಶ—ಉಮೇಶ ಯಾರು?

ಕಮಲ—ನಮ್ಮ ಜೊತೆಯಲ್ಲಿರುವ ಹುಡುಗ. ಅವನು ದೆವ್ವ ನೋಡಿದ್ದಾನೆ.

ರಮೇಶ—ಅವನೇ ಅದೃಷ್ಟಶಾಲಿ.

ದೋಣಿಯನ್ನು ತೇಲಿಸಿದ್ದರು. ಸ್ವಲ್ಪದೂರ ಹೋಗುವುದರೊಳಗಾಗಿ ಒಬ್ಬ ಹುಡುಗ ಬುಟ್ಟಿಯನ್ನು ಹೊತ್ತುಕೊಂಡು ದಡಕ್ಕೆ ಓಡಿ ಬಂದು ದೋಣಿ ನಿಲ್ಲಿಸಬೇಕೆಂದು ಕೂಗಿದನು. ರಮೇಶನನ್ನು ನೋಡಿ "ಬಾಬೂ, ಬಾಬೂ" ಎಂದು ಅರಚಿಕೊಂಡನು.

ರಮೇಶ ಕೈಯಾಡಿಸಿ "ನನ್ನನ್ನು ಯಾರೋ ಎಂದುಕೊಂಡಿದ್ದಾನೆ" ಎಂದನು.

ಕಮಲ—ಅಯ್ಯೊ, ಅವನೇ ಉಮೇಶ. ದೋಣಿ ನಿಲ್ಲಿಸಿ.

ರಮೇಶ—ನಾನು ಹೇಳಿದರೆ ನಿಲ್ಲಿಸುತ್ತಾರೆಯೇ?

ಕಮಲ—ಹೇಳಿ ನೋಡಿ.

ರಮೇಶ ದೋಣಿಯ ಯಜಮಾನನಿಗೆ ಹೇಳಿದನು. "ಆಗುವುದಿಲ್ಲ" ಎಂಬ ಉತ್ತರ ಬಂತು. ಕಮಲೆಯೂ ಬೇಡಿದಳು. ರಮೇಶ ಸ್ವಲ್ಪ

ಹಣ ಕೊಟ್ಟ ಮೇಲೆ ದೋಣಿ ನಿಂತಿತು. ಉಮೇಶ ಹತ್ತಿದನು. ಗಾಬರಿ ಯೇನೂ ಇಲ್ಲದೆ ಬುಟ್ಟಿಯನ್ನು ಕಮಲೆಯ ಹತ್ತಿರ ಇಟ್ಟು ಹಲ್ಲು ಕಿರಿದನು.

ಕಮಲ—ನಗುವುದೇಕೆ? ಬಿಟ್ಟು ಹೋಗಿದ್ದರೆ ಏನು ಮಾಡುತ್ತಿದ್ದೆ.

ಮಾತನಾಡದೆ ಉಮೇಶ ಬುಟ್ಟಿಯಲ್ಲಿದ್ದ ಬಾಳೆಹಣ್ಣು, ತರಕಾರಿ, ಕುಂಬಳಕಾಯಿ, ಬದನೆಕಾಯಿಗಳನ್ನು ನೆಲದಮೇಲಿಟ್ಟನು.

ಕಮಲ—ಎಲ್ಲಿ ಸಿಕ್ಕಿದುವು?

ಎಲ್ಲರ ತೋಟಗಳಿಗೂ ನುಗ್ಗಿ ಉಮೇಶ ತಂದಿದ್ದನು.

ರಮೇಶ ಕೋಪದಿಂದ "ಕದ್ದೆಯಾ?" ಎಂದನು.

"ಕದಿಯಲಿಲ್ಲ. ಸ್ವಲ್ಪ ತೆಗೆದುಕೊಂಡೆ."

"ಸ್ವಲ್ಪ ತೆಗೆದುಕೊಂಡರೆ ಕಳ್ಳತನವಲ್ಲವೆ? ಆಚೆ ಬಿಸಾಟು ಹೋಗು."

ಉಮೇಶ ದೈನ್ಯದಿಂದ ಕಮಲೆಯನ್ನು ನೋಡಿದನು. "ಇವೆಲ್ಲಾ ಒಳ್ಳೆ ತರಕಾರಿ."

ರಮೇಶ ಸಿಟ್ಟನಿಂದ, "ನಡಿ, ಹೊರಗೆ! ಇಲ್ಲದಿದ್ದರೆ ನಾನೇ ನದಿಗೆ ಎರಚುತ್ತೇನೆ" ಎಂದನು.

ಕಮಲೆಯೂ ಸನ್ನೆಮಾಡಲು ಉಮೇಶ ಎಲ್ಲವನ್ನೂ ಬುಟ್ಟಿಯಲ್ಲಿ ಹಾಕಿಕೊಂಡು ಎದ್ದು ಹೋದನು.

ರಮೇಶ "ಅವನಿಗೆ ಬುದ್ಧಿ ಹೇಳು," ಎಂದು ಹೊರಗೆ ಹೋದನು.

ಉಮೇಶ ಅಡುಗೆಮಾಡುವ ಸ್ಥಳದಲ್ಲಿ ಕುಳಿತಿದ್ದನು. ಕಮಲೆ ಅವನ ಹತ್ತಿರ ಹೋಗಿ, "ಬಿಸಾಟಿಯಾ?" ಎಂದಳು.

"ಇಲ್ಲ! ಇಲ್ಲಿದೆ."

"ಹೀಗೆಲ್ಲಾ ಮಾಡಬಾರದು. ಈಳಿಗೆ ಮಣೆ ತಾ." ಕಮಲೆ ತರ ಕಾರಿ ಹೆಚ್ಚಲು ಪ್ರಾರಂಭಿಸಿದಳು.

"ಆ ತರಕಾರಿ ಜತೆಗೆ ಮೆಣಸು ಕುಟ್ಟಿಹಾಕಬೇಕಮ್ಮಾ."

"ತೆಗೆದುಕೊಂಡು ಬಾ." ಉಮೇಶನ ತಪ್ಪು ತೋರಿಸಲು ಕಮಲೆ ಕೋಪದಿಂದ ತರಕಾರಿ ಕತ್ತರಿಸುತ್ತಿದ್ದಳು.

ಆದರೆ ಅವನು ತರಕಾರಿ ಕದ್ದು ತಂದುದೂ ತನ್ನ ಪ್ರೀತಿಗಾಗಿಯೇ ಎಂದು ತಿಳಿದು ಆ ತಬ್ಬಲಿ ಹುಡುಗನಲ್ಲಿ ಅವಳಿಗೆ ಕನಿಕರವುಂಟಾಯಿತು.

"ನಿನ್ನೆ ಮಿಕ್ಕ ಮೊಸರಿದೆ. ಹಾಕಿಕೊಂಡು ತಿನ್ನು. ಇನ್ನು ಮೇಲೆ ಎಲ್ಲೂ ಕದಿಯಬೇಡ "

"ನೀವು ಮೊಸರು ತಿನ್ನಲಿಲ್ಲವೇನಮ್ಮಾ?"

"ನನಗೆ ಸೇರುವುದಿಲ್ಲ. ಸ್ವಲ್ಪ ಮೀನಿದ್ದಿದ್ದರೆ............ ..."

"ನಾನು ತರುತ್ತೇನೆ. ಆದರೆ ದುಡ್ಡು ಕೊಡಬೇಕು "

ಮುಖ ಗಂಟುಹಾಕಿಕೊಳ್ಳಲು ಪ್ರಯತ್ನಿಸುತ್ತಾ ಕಮಲೆ, "ಹುಚ್ಚನ ಹಾಗಾಡಬೇಡ. ದುಡ್ಡಿಲ್ಲದೆ ತರಹೇಳಿದೆನೇ?"

ರಮೇಶ ಕಮಲೆಗೆ ಸಾಕಷ್ಟು ದುಡ್ಡುಕೊಡುವುದಿಲ್ಲವೆಂಬ ಅಭಿಪ್ರಾಯ ಉಮೇಶನಿಗುಂಟಾಗಿತ್ತು. ಅದರಿಂದ ರಮೇಶನಲ್ಲಿ ಅವನಿಗೆ ತಿರಸ್ಕಾರವುಂಟಾಗಿತ್ತು.

ಮೀನು ಸುಲಭವಾಗಿ ಸಿಕ್ಕಲಿಲ್ಲ. ಮೀನು ಮೊಸರಿಗೆ ದುಡ್ಡು ಕೊಡುವುದು ಅನ್ಯಾಯವೆಂದು ಉಮೇಶನಿಗೆ ತೋರಿತು.

"ಯಜಮಾನರು ಐದಾಣೆ ಕೊಟ್ಟರೆ ದೊಡ್ಡ ಮೀನು ತರುತ್ತೇನಮ್ಮ."

"ನೀನು ಪುನಃ ದೋಣಿ ಬಿಟ್ಟುಹೋದರೆ ನಿಲ್ಲಿಸುವುದಿಲ್ಲ."

"ದೋಣಿ ಅಲ್ಲಿಯೇ ಇದೆ."

ಕಮಲೆ ಒಂದು ರೂಪಾಯಿ ಕೊಟ್ಟು, "ಚಿಲ್ಲರೆ ತಂದು ಕೊಡು" ಎಂದಳು. ಉಮೇಶ ಮೀನನ್ನೇನೋ ತಂದರೂ ಚಿಲ್ಲರೆ ಇರಲಿಲ್ಲ. "ಒಂದು ರೂಪಾಯಿಗಿಂತ ಕಡಮೆ ಕೊಡುವುದಿಲ್ಲವೆಂದರು."

ಕಮಲೆಗೆ ಅದು ಸುಳ್ಳೆಂದು ತಿಳಿಯಿತು. ನಕ್ಕು, "ದೋಣಿ ನಿಂತಾಗ ಚಿಲ್ಲರೆ ತರಿಸಬೇಕು" ಎಂದಳು.

"ಹೌದಮ್ಮಾ, ಅವರಿಗೆ ಒಂದು ರೂಪಾಯಿ ತೋರಿಸಿದರೆ ಕಡಮೆ ಬೆಲೆಗೆ ಕೊಡುವುದಿಲ್ಲ."

ಊಟಮಾಡುತ್ತಾ ರಮೇಶ, "ಅಡುಗೆ ಬಹಳ ಚನ್ನಾಗಿದೆ" ಎಂದನು. ಅವನ ಊಟವಾದಮೇಲೆ ಉಮೇಶನ ಊಟ; ಹೆಚ್ಚಾಗಿ

ತಿನ್ನುತ್ತಿದ್ದುದನ್ನು ನೋಡಿ ಕಮಲೆ ಗಾಬರಿಯಿಂದ, "ಈಗ ಸಾಕು ಉಮೇಶ್, ರಾತ್ರಿಗೆ ಇಟ್ಟಿರುತ್ತೇನೆ" ಎಂದಳು.

ದಿನ ಕಳೆಯುತ್ತಾ ಕಮಲೆ ಬೆಳಗಿನ ಅಸಮಾಧಾನವನ್ನು ಮರೆತಳು. ಸೂರ್ಯ ನಿಧಾನವಾಗಿ ಪಶ್ಚಿಮಕ್ಕಿಳಿಯುತ್ತಿದ್ದರೂ ಬಿಸಿಲಿನ್ನೂ ರಣಗುಡುತ್ತಿತ್ತು. ಹೊಲಗಳಲ್ಲಿ ನೀರಿಗಾಗಿ ಹೊರಟ ಹಳ್ಳಿಯ ಹೆಂಗಸರು ಕಾಣುತ್ತಿದ್ದರು. ದಿನವೆಲ್ಲಾ ಕೆಲಸ ಮಾಡಿ ಕಮಲೆ ತಲೆಬಾಚಿಕೊಳ್ಳುವ ವೇಳೆಗೆ ಸಂಜೆಯಾಗಿತ್ತು.

ದೋಣಿ ನಿಂತಿತು. ಬೆಳಗಿನ ಅಡುಗೆಯೇ ಸಾಕೆಂದು ಕಮಲೆ ನಿರ್ಧರಿಸುವ ವೇಳೆಗೆ ರಮೇಶ ಬಂದು ತನಗೆ ಹಸಿವಿಲ್ಲವೆಂದೂ, ರಾತ್ರಿ ಊಟಮಾಡುವುದಿಲ್ಲವೆಂದೂ ಹೇಳಿದನು.

"ಏನೂ ಬೇಡವೆ ?"

ಬೇಡವೆಂದು ರಮೇಶ ಹೊರಡಲು ಎಲ್ಲವನ್ನೂ ಉಮೇಶನ ತಟ್ಟೆಗೆ ಸುರಿದಳು.

"ನಿಮಗೇನೂ ಮಿಗಲಿಲ್ಲವಲ್ಲಾ." ಎಂದು ಉಮೇಶನೆಂದನು.

"ನನ್ನ ಊಟವಾಯಿತು." ಅಂದಿನ ಕೆಲಸ ಮುಗಿಯಿತು.

ಬೆಳದಿಂಗಳು ದಡದ ಮೇಲೆ ಪ್ರಸರಿಸಿತ್ತು. ಹತ್ತಿರದಲ್ಲಿ ಯಾವ ಹಳ್ಳಿಯೂ ಇರಲಿಲ್ಲ. ಬಾರದ ಪ್ರಿಯನಿಗಾಗಿ ಕಾಯುವ ಪ್ರೇಯಸಿಯಂತೆ ರಾತ್ರಿ, ಕಾಳು ತುಂಬಿದ ಗದ್ದೆಗಳಲ್ಲಿ ಕಾದಿರುವಂತಿತ್ತು.

ಒಬ್ಬ ಗುಮಾಸ್ತೆ ಸೀಮೆಯೆಣ್ಣೆದೀಪದ ಬೆಳಕಿನಲ್ಲಿ ಲೆಖ್ಖ ಬರೆಯುತ್ತಿದ್ದನು. ಅವನನ್ನು ನೋಡಿ ರಮೇಶ, "ವಿಧಿ ನನ್ನ ಜೀವನವನ್ನೂ ಹೀಗೆ ಇಕ್ಕಟ್ಟಾದ ಹಾದಿಯಲ್ಲಿ ನಡೆಸಿದ್ದರೆ! ದಿನವೆಲ್ಲಾ ದುಡಿದು ಸಂಜೆ ಮನೆ ಸೇರುವ ಆ ಜೀವನದಲ್ಲಿ ತೊಡಕಿಲ್ಲ" ಸ್ವಲ್ಪ ಹೊತ್ತಿಗೆ ಗುಮಾಸ್ತೆ ತಲೆಗೆ ಶಾಲು ಸುತ್ತಿಕೊಂಡು ಎದ್ದು ಹೋದನು.

ಸ್ವಲ್ಪ ಹೊತ್ತಿನಿಂದ ಕಮಲೆ ತನ್ನ ಹಿಂದೆ ನಿಂತಿದ್ದಳೆಂದು ರಮೇಶನಿಗೆ ತಿಳಿಯಲಿಲ್ಲ. ಸಂಜೆ ಊಟವಾದಮೇಲೆ ಕರೆಯಬಹುದೆಂದು ನಿರೀಕ್ಷಿಸಿ ಬೇಸತ್ತು ತಾನೇ ಬಂದಿದ್ದಳು. ರಮೇಶನನ್ನು ನೋಡಿದ ಮೇಲೆ ಕಾಲು ಮುಂದಕ್ಕೇಳಲಿಲ್ಲ. ತಿಂಗಳ ಬೆಳಕಿನಲ್ಲಿ ನೋಡಿದಾಗ

ಅವನ ಆಲೋಚನೆಗಳು ತನ್ನಿಂದ ದೂರ, ಅತಿ ದೂರವಾಗಿದ್ದುವೆಂದು ಅವಳಿಗೆ ತಿಳಿಯಿತು. ಅವನ ಮನಸ್ಸಿನಲ್ಲಿ ತನಗೆ ಸ್ಥಳವಿಲ್ಲ. ತನಗೂ, ಆಲೋಚನೆಯಲ್ಲಿ ಮುಳುಗಿದ್ದ ರಮೇಶನಿಗೂ ನಡುವೆ ನಿಶಾದೇವಿ ಬೆಳದಿಂಗಳ ವಸ್ತ್ರವನ್ನುಟ್ಟು ತುಟಿಯಮೇಲೆ ಬೆರಳಿಟ್ಟು ನಿಂತಿರುವಂತೆ ಅವಳಿಗೆ ತೋರಿತು.

ರಮೇಶ ಕೈಗಳಿಂದ ಮುಖ ಮುಚ್ಚಿಕೊಂಡಾಗ ಸದ್ದಿಲ್ಲದೆ ಕಮಲೆ ಹಿಂದಿರುಗಿದಳು. ತಾನು ಬಂದುದು ಅವನಿಗೆ ತಿಳಿಯಬಹುದೆಂದು ಹೆದರಿ ಮೆಲ್ಲಗೆ ಹೊರಟುಹೋದಳು. ಕೊಠಡಿ ಕತ್ತಲೆಯಲ್ಲಿ ಭಯಂಕರ ವಾಗಿ ದೆವ್ವ ಬಾಯಿ ಬಿಟ್ಟುಕೊಂಡಂತೆ ಕಾಣಿಸಿತು. ಹೊಸ್ತಿಲನ್ನು ದಾಟಿದಾಗ ನಡುಕವುಂಟಾಗಿ ತನ್ನ ಅನಾಥ ಸ್ಥಿತಿ ಕಣ್ಣಿಗೆ ಕಟ್ಟಿದಂತಾ ಯಿತು. ಹೋಗುವುದೆಲ್ಲಿಗೆ? ಸುಖವಾಗಿ ಕಣ್ಣುಮುಚ್ಚಿ ನಿದ್ರೆಹೋಗಲು ಧಾರಾಳವಾಗಿ ತನ್ನದೆಂಬ ಸ್ಥಳವೇ ಆ ಪ್ರಾಣಿಗಿರಲಿಲ್ಲ.

ಒಂದು ಸಲ ಬಗ್ಗಿನೋಡಿ ಹಿಂದಕ್ಕೆ ಸರಿದಾಗ ರಮೇಶನ ಛತ್ರಿ ಪೆಟ್ಟಿಗೆಯ ಮೇಲೆ ಬಿದ್ದು ಸದ್ದಾಯಿತು. ರಮೇಶ ಎದ್ದು ಬಂದು "ನಿದ್ರೆ ಹೋಗಲಿಲ್ಲವೆ, ಕಮಲಾ? ಭಯವೇ? ನಾನೂ ಕೊಠಡಿಯ ಬಾಗಿಲು ತೆಗೆದುಕೊಂಡೇ ಮಲಗುತ್ತೇನೆ" ಎಂದನು.

ಕಮಲೆ ಗಡುಸಾಗಿ, "ನನಗೇನೂ ಭಯವಿಲ್ಲ." ರಮೇಶ ತೆಗೆದ ಬಾಗಿಲನ್ನು ಮುಚ್ಚಿದಳು. ಹಾಸಿಗೆಯ ಮೇಲೆ ಬಿದ್ದುಕೊಂಡು ಶಾಲು ವನ್ನು ಮುಖದಮೇಲೆ ಎಳೆದುಕೊಂಡಳು. ತನ್ನವರೆನ್ನುವರಿಲ್ಲದೆ ಅವಳಿಗೆ ಬೇಸರವಾಯಿತು. ರಕ್ಷಕರೂ ಇಲ್ಲದ, ಸ್ವಾತಂತ್ರ್ಯವೂ ಇಲ್ಲದ ಅವಳ ಜೀವನ ಕಷ್ಟಕರವಾಗಿ ತೋರಿತು. ರಮೇಶ ನಿದ್ರಿಸುತ್ತಿದ್ದನು. ಕಮಲೆಗೆ ಬೇಸರವಾಗಿ ಹೊರಗೆ ಹೋಗಿ ನಿಂತಳು. ನಿಶ್ಶಬ್ದವಾಗಿದ್ದಿತು. ಚಂದ್ರ ಮುಳುಗುತ್ತಿದ್ದುದರಿಂದ ಕಾಲುದಾರಿಗಳು ಕಾಣಿಸುತ್ತಿರಲಿಲ್ಲ. ಮನೆಗಳಿಗೆ ನೀರು ಹೊತ್ತು ಎಷ್ಟು ಜನ ಹೆಂಗಸರು ಈ ದಾರಿಗಳಲ್ಲಿ ನಡೆದಿರಬೇಕು! ಮನೆ! ತನಗೂ ಒಂದು ಮನೆ ಇದ್ದಿದ್ದರೆ! ಆ ಭಾಗ್ಯ ವೆಲ್ಲಿಯದು! ಕೊನೆಮೊದಲಿಲ್ಲದ ನದೀತೀರ! ತಲೆಯ ಮೇಲೆ ಮುಸು ಕಿದ ಅನಂತಾಕಾಶ! ಭೂಮಿಯಿಂದಾಗಲಿ ಆಗಸದಿಂದಾಗಲಿ ಅವಳಿಗೆ

ಯಾವ ಪ್ರಯೋಜನವೂ ಇರಲಿಲ್ಲ. ಆಗ ಅವಳಿಗೆ ಬೇಕಾಗಿದ್ದುದು ಒಂದು ಸಣ್ಣ ಮನೆ!

ಪಕ್ಕದಲ್ಲಿ ಯಾರೋ ಬಂದಂತಾಗಿ ಕಮಲೆಗೆ ಗಾಬರಿಯಾಯಿತು. ಉಮೇಶ "ನಾನಮ್ಮಾ" ಎಂದನು.

"ನಿದ್ರೆ ಮಾಡಲಿಲ್ಲವೆ?"

ಕಣ್ಣಲ್ಲಿ ಉಕ್ಕುತ್ತಿದ್ದ ನೀರನ್ನು ತಡೆದು ನಿಲ್ಲಿಸಲು ಸಾಧ್ಯವಾಗದೆ ಉಮೇಶನಿಗೆ ಕಾಣದಂತೆ ಮುಖ ಮುಚ್ಚಿಕೊಂಡಳು. ನೀರು ತುಂಬಿದ ಮೋಡ ತನ್ನಂತೆಯೇ ಅಲೆಯುವ ವಾಯುವನ್ನು ಸಂಧಿಸುವವರೆಗೆ ಮಾತ್ರ ತೇಲಿಹೋಗುವುದು. ಅನಂತರ ಅದು ಆ ನೀರನ್ನು ಭರಿಸಲಾರದು. ಕಮಲೆಯ ಸ್ಥಿತಿಯೂ ಹಾಗೆಯೇ ಆಯಿತು. ತಬ್ಬಲಿಯಾದ ಉಮೇಶನ ಸಹಾನುಭೂತಿ ಅವಳ ದುಃಖದ ಕಟ್ಟೆಯನ್ನೊಡೆಯಿತು. ಬಿಕ್ಕಿ ಬಿಕ್ಕಿ ಅತ್ತಳು.

ಅವಳನ್ನು ಸಮಾಧಾನಪಡಿಸುವ ಮಾರ್ಗವರಿಯದೆ ಉಮೇಶ, "ಅಮ್ಮಾ, ನೀವು ಕೊಟ್ಟ ರೂಪಾಯಿಯಲ್ಲಿ ಏಳಾಣೆ ಮಿಕ್ಕಿದೆ," ಎಂದನು. ಕಮಲೆಗೆ ನಗು ಬಂತು.

"ನೀನೇ ಇಟ್ಟುಕೋ. ಹೋಗಿ ನಿದ್ರೆಮಾಡು."

ಚಂದ್ರ ಗಿಡಗಳ ಹಿಂದೆ ಮರೆಯಾದನು. ಮಲಗುತ್ತಲೇ ನಿದ್ರೆ ಬಂದು ಕಮಲೆಗೆ ಬೆಳಗ್ಗೆ ಬಹಳ ಹೊತ್ತಾದರೂ ಎಚ್ಚರವಾಗಲಿಲ್ಲ.

## ಅಧ್ಯಾಯ ೨೮

ಮಾರನೆಯ ದಿನ ಕಮಲೆಗೆ ಉಲ್ಲಾಸವಿರಲಿಲ್ಲ. ಸೂರ್ಯನ ಬೆಳಕು ಮಸಕಾಗಿರುವಂತೆಯೂ, ನದಿ ನಿಧಾನವಾಗಿ ಹರಿಯುವಂತೆಯೂ, ಮರ ಗಿಡಗಳು ಜೋಲುವಂತೆಯೂ ತೋರಿದುವು.

ಉಮೇಶ ಬರಲು, "ತೊಂದರೆ ಮಾಡಬೇಡ, ಹೋಗು ಉಮೇಶ," ಎಂದಳು.

ಉಮೇಶ, "ಇಲ್ಲಮ್ಮಾ. ಪುಡಿ ಕುಟ್ಟಿಕೊಡುತ್ತೇನೆ," ಎಂದನು.

ಅವಳ ಸೋತ ಮುಖ ನೋಡಿ ರಮೇಶ, "ಸ್ವಸ್ಥವಾಗಿಲ್ಲವೆ,

ಕಮಲಾ?” ಎಂದು ಪ್ರಶ್ನಿಸಿದನು. ಉತ್ತರವಿಲ್ಲ. ಸುಮ್ಮನೆ ತಲೆಯಾಡಿಸಿ ಕಮಲೆ ಅಡಿಗೆ ಮನೆಯೊಳಕ್ಕೆ ಹೊರಟು ಹೋದಳು.

ಸಮಸ್ಯೆಯನ್ನು ಬೇಗ ಬಿಡಿಸದೆ ಸಾಧ್ಯವಿಲ್ಲವೆಂದು ರಮೇಶ ಅರಿತನು. ಹೇಮನಳಿನಿ ಎಲ್ಲವನ್ನೂ ತಿಳಿದರೆ ತನ್ನ ದಾರಿ ಸುಗಮವಾಗಬಹುದೆಂದು ಚಿಂತಿಸಿ ಅವಳಿಗೊಂದು ಪತ್ರ ಬರೆಯಬೇಕೆಂದು ನಿರ್ಧರಿಸಿದನು.

ಅಳಿಸಿ, ಅಳಿಸಿ ಬರೆಯುತ್ತಿರುವಾಗ ಹೊಸ ಧ್ವನಿಯೊಂದು ಕೇಳಿಸಿತು. “ನಿಮ್ಮ ಹೆಸರೇನೆಂದು ಕೇಳಬಹುದೆ?”. ಎದುರಿಗೆ ನರೆತ ಕೂದಲಿನ ಮನುಷ್ಯ ನಿಂತಿದ್ದನು. ಕಾಗದ ಬರೆಯುವುದರಲ್ಲಿ ತಲ್ಲೀನನಾಗಿದ್ದ ರಮೇಶ ತಟ್ಟನೆ ಉತ್ತರ ಕೊಡಲಿಲ್ಲ.

ಹೊಸಬ—“ನಮಸ್ಕಾರ. ನೀವು ಬ್ರಾಹ್ಮಣರಲ್ಲವೆ? ನಿಮ್ಮ ಹೆಸರು ತಿಳಿಯಿತು. ನಮ್ಮ ಸೀಮೆಯಲ್ಲಿ ಗುರುತಾಗಬೇಕಾದರೆ ಮೊದಲು ಹೆಸರು ಕೇಳುವ ಪದ್ಧತಿ ಇದೆ. ಈಗಿನ ಕಾಲದವರಿಗೆ ಅದು ಸರಿ ಬೀಳುವುದಿಲ್ಲ. ನಿಮಗೆ ಅಸಮಾಧಾನವಾಗಿದ್ದರೆ ನನ್ನನ್ನೂ ಅದೇ ಪ್ರಶ್ನೆ ಕೇಳಿ! ನನ್ನ ಹೆಸರು ಕೇಳಿದರೆ, ನಮ್ಮ ತಂದೆ ತಾತಂದಿರ ಹೆಸರು ಬೇಕಾದರೂ ಹೇಳುತ್ತೇನೆ!”

ರಮೇಶ ನಕ್ಕು, “ನನಗೆ ಅಷ್ಟೊಂದು ಅಸಮಾಧಾನವಿಲ್ಲ. ನಿಮ್ಮ ಹೆಸರು ಹೇಳಿದರೆ ಸಾಕು.”

“ನನ್ನ ಹೆಸರು ತ್ರೈಲೋಕ್ಯ ಚಕ್ರವರ್ತಿ. ಆದರೆ ಎಲ್ಲರೂ ನನ್ನನ್ನು ‘ಮಾವಾ,’ ಎಂದು ಕರೆಯುತ್ತಾರೆ. ಭರತ ಚರಿತ್ರೆಯಲ್ಲಿ ಹಿಂದೂಸ್ಥಾನದ ಚಕ್ರವರ್ತಿ; ನಾನು ಮಾವಂದಿರಲ್ಲಿ ಚಕ್ರವರ್ತಿ! ನೀವು ಹೊರಟಿರುವುದು ಎಲ್ಲಿಗೆ?”

“ಇನ್ನೂ ಗೊತ್ತುಮಾಡಿಲ್ಲ.”

ಚಕ್ರವರ್ತಿ—“ಇಳಿಯಬೇಕಾದ ಸ್ಥಳವನ್ನು ನಿಧಾನವಾಗಿ ಗೊತ್ತುಮಾಡಬಹುದು. ಹತ್ತುವಾಗ ತಾನೇ ಅವಸರ.”

ರಮೇಶ—ಗೋಲಂಡದಲ್ಲಿ ರೈಲಿಳಿದಾಗ ದೋಣಿಯ ಸಿಳ್ಳು ಕೇಳಿಸಿತು. ಆಗ ನಿಧಾನಮಾಡಿ ಪ್ರಯೋಜನವಿಲ್ಲವೆಂದು ತಿಳಿದು ಬೇಗ ಹತ್ತಿದೆವು.

ಚಕ್ರವರ್ತಿ—ಬಹಳ ಜಾಣರು. ಅಷ್ಟು ಬೇಗ ನಿರ್ಧರಿಸುವ ಶಕ್ತಿ ನನಗಿಲ್ಲ. ಇಂತಹ ಕಡೆ ಹೋಗಬೇಕೆಂದು ತಿಳಿಯದೆ ದೋಣಿ ಹತ್ತುವವರನ್ನು ಕಂಡರೆ ನನಗೆ ಬಹಳ ಮೆಚ್ಚಿಕೆ. ನಿಮ್ಮ ಹೆಂಡತಿಯೂ ಬಂದಿದ್ದಾರೋ?"

ಅಹುದೆನ್ನಲು ರಮೇಶನ ಗಂಟಲು ತಡೆಯಿತು.

ಚಕ್ರವರ್ತಿ—"ಬಂದಿದ್ದಾರೆಂದು ನನಗಾಗಲೇ ತಿಳಿಯಿತು. ಅಡುಗೆ ಮನೆಯಲ್ಲಿಪ್ಪರು.—ತಾಯಿ, ನಾನು ಚಕ್ರವರ್ತಿ. ನಾಚಿಕೊಳ್ಳಬೇಡಿ. ಏನಾದರೂ ತಿನ್ನಲು ಕೊಡಿ—ಎಂದೆ. ಆಕೆ ನಕ್ಕ ರೀತಿಯಲ್ಲೇ, ನಾನು ಅದೃಷ್ಟಶಾಲಿಯೆಂದೂ, ತಿಂಡಿ ಕೊಡುವರೆಂದೂ ತಿಳಿದೆ. ನೀವೇನೋ ಕೆಲಸದಲ್ಲಿರುವಂತಿದೆ. ನಾನು ಹೋಗಿ ಆಕೆಗೆ ಸ್ವಲ್ಪ ಸಹಾಯಮಾಡುತ್ತೇನೆ. ನಾನಿರುವಾಗ ಆಕೆ ಇದ್ದಿಲು ಮುಟ್ಟಬಾರದು. ನೀವು ಬರೆಯಿರಿ." ಚಕ್ರವರ್ತಿ ಅಡುಗೆ ಮನೆಯ ಕಡೆ ಹೊರಟು ಹೋದನು.

ಒಳಕ್ಕೆ ನುಗ್ಗಿ–"ಏನಮ್ಮಾ ಬಹಳ ಸುವಾಸನೆ! ಹೇಳಲೇ ಬೇಕಾಗಿಲ್ಲ. ಮೀನಿನ ಪಲಾವ್! ನಾನು ಮಜ್ಜಿಗೆ ತಯಾರು ಮಾಡುತ್ತೇನೆ. ವಾಯವ್ಯದ ನೆಕೆ ಸೀಮೆಯವರಿಗೆ ಮಾತ್ರ ಮಜ್ಜಿಗೆ ಮಾಡುವ ವಿಧಾನ ತಿಳಿದಿರುವುದು. ಹೇಗೆ ಮಾಡುತ್ತೇನೋ ಎಂದು ಹೆದರಬೇಡ." ಎಂದು ಒಂದು ಉಪ್ಪಿನಕಾಯಿ ಮಡಕೆಯನ್ನು ತಂದನು. "ಇದು ನಾಲ್ಕು ದಿನಕ್ಕೆ ಸಾಕಾಗುತ್ತದೆ. ಮಜ್ಜಿಗೆ ತಯಾರಿಸಿದ ಮೇಲೆ ನನ್ನ ಯೋಗ್ಯತೆ ನಿನಗೆ ತಿಳಿಯುತ್ತದೆ. ನೀನು ಕೈತೊಳೆದುಕೊಂಡು ಎಲೆಹಾಕು. ನಾನು ಮಿಕ್ಕ ಅಡಿಗೆ ಮಾಡುತ್ತೇನೆ. ಏನೂ ಚಿಂತೆಯಿಲ್ಲ. ನನ್ನ ಹೆಂಡತಿಗೆ ಸದಾ ಖಾಯಿಲೆ. ಹಾಗಾಗಿ ನನಗೆಲ್ಲಾ ಅಭ್ಯಾಸವಾಗಿದೆ. ಸುಳ್ಳಲ್ಲ. ಸತ್ಯವಾಗಿ ಅಡಿಗೆ ಬರುತ್ತೆ."

ಕಮಲ—ಮಜ್ಜಿಗೆ ಮಾಡುವುದನ್ನು ನನಗೂ ಕಲಿಸಿ.

ಚಕ್ರವರ್ತಿ—"ಅಷ್ಟು ಸುಲಭವಲ್ಲವಮ್ಮಾ ಒಂದು ದಿನದ ಪರಿಚಯ ಸಾಲದು. ಹಾಗೆ ಸರಸ್ವತಿಯನ್ನು ಅಸಡ್ಡೆ ಮಾಡುವುದಕ್ಕಾಗುವುದಿಲ್ಲ. ಮೂರು ನಾಲ್ಕು ದಿನವಾದರೂ ನನ್ನನ್ನು ಅನುಸರಿಸಿ ಕೇಳಿ

ಕೊಳ್ಳಬೇಕು. ಮೊದಲನೆಯದಾಗಿ ನನಗೆ ವೀಳ್ಯದೆಲೆ ಇಷ್ಟ. ಅಡಕೆಗೆ ಬಣ್ಣ ಕಟ್ಟಿರಬೇಕು. ನನ್ನ ವಿಶ್ವಾಸ ಸಂಪಾದಿಸುವುದು ಸುಲಭದ ಕೆಲಸವಲ್ಲ" ಎಂದು ಉಮೇಶನ ಕಡೆ ತಿರುಗಿ—"ನಿನ್ನ ಹೆಸರೇನೋ?" ಎಂದನು.

ಉಮೇಶ ಉತ್ತರಕೊಡಲಿಲ್ಲ. ಸ್ನೇಹಕ್ಕೆ ಒಬ್ಬ ಸ್ಪರ್ಧಿ ಬಂದುದು ಅವನಿಗೆ ಇಷ್ಟವಾಗಲಿಲ್ಲ.

ಚಕ್ರವರ್ತಿ—ಒಳ್ಳೆಯ ಹುಡುಗ! ಅವನ ಮನಸ್ಸು ತಿಳಿಯುವುದು ಕಷ್ಟ. ಆದರೆ ನಾನೂ ಅವನೂ ಹೊಂದಿಕೊಂಡು ಹೋಗುತ್ತೇವೆ. ಅಡುಗೆ ಯಾಗಬೇಕು. ಈಗ ಹರಟೆಗೆ ಹೊತ್ತಿಲ್ಲ.

ಮುದುಕ ಬಂದುದು ರಮೇಶ ಕಮಲೆಯರ ಮನಸ್ಸು ಹಗುರವಾಯಿತು. ಕಮಲೆಯನ್ನೇ ಹೆಂಡತಿಯೆಂದು ಭ್ರಮಿಸಿ ಸರಸವಾಗಿದ್ದ ರಮೇಶನಿಗೂ ಈಗಿನ ರಮೇಶನಿಗೂ ಸಂಬಂಧವೇ ಇರಲಿಲ್ಲ. ಕಮಲೆಗೆ ಇದು ತುಂಬಾ ನೋವನ್ನುಂಟುಮಾಡಿತ್ತು. ಬೇರೆಕಡೆ ಕಮಲೆಯ ಮನಸ್ಸು ಹರಿದರೆ ತನ್ನ ದುಃಖಕ್ಕೆ ಅಂಜನ ಹುಡುಕುವುದು ರಮೇಶನಿಗೆ ಸುಲಭವಾಗಿತ್ತು.

ರಮೇಶ ಚಿಂತಿಸುತ್ತಿದ್ದಾಗ ಕಮಲೆ ಬಾಗಿಲಿಗೆ ಬಂದಳು. ಬಿಡುವಿದ್ದುದರಿಂದ ಚಕ್ರವರ್ತಿಯನ್ನು ಮಾತಿಗೆ ಕರೆಯಲು ಬಂದಿದ್ದಳು. ಅವಳನ್ನು ನೋಡುತ್ತಲೇ ಚಕ್ರವರ್ತಿ "ಇದೆಲ್ಲಾ ಸರಿಯಲ್ಲವಮ್ಮಾ," ಎಂದನು. ಕಮಲೆಗೆ ಅರ್ಥವಾಗಲಿಲ್ಲ. ಕುತೂಹಲದಿಂದ ಅವನನ್ನು ನೋಡಿದಳು.

"ಇದು ನಿಮ್ಮ ಕೆಲಸ ರಮೇಶಬಾಬು! ಶುದ್ಧ ಅನಾಚಾರ! ಭೂದೇವಿಗೂ ಕಾಲಿಗೂ ನಡುವೆ ಚಪ್ಪಲಿಗಳನ್ನು ಹಾಕಿಕೊಂಡರೆ ತಾಯ್ನಾಡಿಗೇ ಅವಮಾನ ಮಾಡಿದಂತೆ! ರಾಮಚಂದ್ರ ಸೀತೆಯ ಕಾಲುಗಳಿಗೆ ಚಪ್ಪಲಿಗಳನ್ನು ಹಾಕಿದ್ದರೆ ಕಾಡಿನಲ್ಲಿ ಹದಿನಾಲ್ಕು ವರ್ಷ ಅವಳ ಹಿಂದೆ ಲಕ್ಷ್ಮಣ ಅಲೆಯುತ್ತಿದ್ದನೇ? ನನ್ನ ಮಾತಿನಲ್ಲಿ ನಿಮಗೆ ನಂಬಿಕೆಯಿಲ್ಲ. ಎಲ್ಲಿಗೆ ಹೋಗಬೇಕೆಂಬ ಅರಿವಿಲ್ಲದೆ ದೋಣಿ ಹತ್ತುವವರ ಪಾಡೆಲ್ಲಾ ಇದೇ"

ರಮೇಶ—ಎಲ್ಲಿ ಇಳಿಯಬೇಕೆಂದು ನೀವೇ ಹೇಳಿ ಮಾವ.

ದೋಣಿಯ ಸಿಳ್ಳಿಗಿಂತ ನಿಮ್ಮ ಮಾತಿಗೇ ಹೆಚ್ಚು ಬೆಲೆ.

ಚಕ್ರವರ್ತಿ—"ಬಹುಬೇಗ ನಿರ್ಧಾರಕ್ಕೆ ಬಂದಿರಲ್ಲಾ! ನಮ್ಮ, ನಿಮ್ಮ ಪರಿಚಯವಾಗಿ ಇನ್ನೂ ಒಂದು ದಿನವೂ ಇಲ್ಲ. ಹೋಗಲಿ. ಘಾಸಿಪುರದಲ್ಲಿ ಇಳಿದು ಬಿಡಿ. ಬರುತ್ತೀಯಾಮ್ಮಾ? ಅಲ್ಲಿ ಒಳ್ಳೆ ರೋಜಾಹೂಗಳೂ, ನಾನೂ ಇದ್ದೇವೆ!"

ರಮೇಶ ಕಮಲೆಯಕಡೆ ನೋಡಿದನು. ಅವಳು ತಲೆಯಾಡಿಸಿ ಒಪ್ಪಿಗೆ ಸೂಚಿಸಿದಳು.

ಚಕ್ರವರ್ತಿ ಉಮೇಶ ಕಮಲೆಯ ಕೊಠಡಿಗೆ ಹೋದರು. ರಮೇಶ ನೊಬ್ಬನೇ ಹೊರಗಿದ್ದನು. ಗದ್ದೆಗಳು, ಸೋಪಾನಗಳು, ಮರಳು ದಿಬ್ಬಗಳು, ಹಳ್ಳಿಗಳು, ಅಲ್ಲಲ್ಲಿ ದೋಣಿಗಳಿಗಾಗಿ ಕಾದಿದ್ದ ಪ್ರಯಾಣಿಕರು, ಎಲ್ಲವನ್ನೂ ಹಿಂದೆ ಬಿಟ್ಟು ದೋಣಿ ಸಾಗುತ್ತಿದ್ದಿತು. ಪಕ್ಕದ ಕೊಠಡಿ ಯಿಂದ ಆಗಾಗ ಕಮಲೆಯ ನಗು ಕೇಳಿಸುತ್ತಿದ್ದಿತು "ಈ ಸೌಂದರ್ಯ ವೆಲ್ಲಾ ಸತ್ಯವೇ?" ಎಂಬ ಪ್ರಶ್ನೆ ಅವನ ಹೃದಯದಲ್ಲಿ ಮೊಳಗುತ್ತಿತ್ತು.

## ಅಧ್ಯಾಯ ೨೯

ಯೌವನದಲ್ಲಿ ಚಿಂತೆ ಬಹುಕಾಲ ಮನಸ್ಸನ್ನಾವರಿಸುವುದಿಲ್ಲ. ಕಮಲೆಗೆ ಹೊತ್ತುಹೋಗುವುದು ಕಷ್ಟವಾಗಿರಲಿಲ್ಲ. ರಮೇಶನ ನಡತೆ ಯನ್ನು ಕುರಿತು ಅವಳು ಚಿಂತಿಸುತ್ತಿರಲಿಲ್ಲ.

ಶರತ್ಕಾಲದ ಸೂರ್ಯ ಕಿರಣಗಳು ಭೂಮಿಯನ್ನು ವಿಚಿತ್ರ ವರ್ಣ ಗಳಿಂದ ಅಲಂಕರಿಸಿದ್ದುವು ಚಿನ್ನದಂತಿದ್ದ ಹೊಳೆ ಹಿನ್ನೆಲೆಯಾಗಿತ್ತು. ಕಮಲೆಗೆ ಮನೆಯ ಯಜಮಾನಿಯ ಪಾತ್ರ ಚೆನ್ನಾಗಿ ಒಪ್ಪಿತ್ತು. ಮನೆ ಗೆಲಸದಲ್ಲಿ ಅವಳಿಗೆ ತುಂಬಾ ಉಲ್ಲಾಸ. ಎಲ್ಲಿಂದಲಾದರೂ ಉಮೇಶ ಬುಟ್ಟಿಯ ತುಂಬ ತರಕಾರಿ ತರುತ್ತಿದ್ದನು.

"ಕುಂಬಳಕಾಯಿ! ಈ ಹುರುಳಿಕಾಯಿ ಎಲ್ಲಿತ್ತು? ನೋಡಿ ಮಾವ, ಮೂಲಂಗಿಯನ್ನೂ ತಂದಿದ್ದಾನೆ ಇಷ್ಟು ತರಕಾರಿ ಸಿಕ್ಕುತ್ತೆಂದು ನನಗೆ ತಿಳಿದೇ ಇರಲಿಲ್ಲ," ಎಂದು ಕಮಲೆ ಉಮೇಶನನ್ನು ಹೊಗಳುತ್ತಿದ್ದಳು.

ಅವನು ಕದಿಯುತ್ತಾನೆಂದು ರಮೇಶನಿಗೆ ಮಾತ್ರ ಅನುಮಾನ ವಿದ್ದಿತು.

ಕಮಲೆ, "ನಾನೇ ದುಡ್ಡು ಕೊಟ್ಟೆ," ಎನ್ನುವಳು.

"ಸರಿ! ನಿನ್ನಿಂದ ದುಡ್ಡು ಕದಿಯುತ್ತಾನೆ. ಅಲ್ಲಿ ತರಕಾರಿ ಕದಿಯುತ್ತಾನೆ," ಎಂದು ರಮೇಶ ಉಮೇಶನನ್ನು ಲೆಖ್ಖ ಕೇಳುವನು. ಅದು ಎಂದೂ ಸರಿಯಾಗಿರುತ್ತಿರಲಿಲ್ಲ. ತೆಗೆದುಕೊಂಡು ಹೋದ ದುಡ್ಡಿಗಿಂತ ಲೆಖ್ಖದಲ್ಲಿ ಹೆಚ್ಚೇ ಇರುತ್ತಿತ್ತು. ಅವನಿಗೆ ಇದೇನೂ ಚಿಂತೆಯಿರಲಿಲ್ಲ. "ಲೆಖ್ಖ ಮಾಡಲು ಬಂದಿದ್ದರೆ ನಾನೂ ದೊಡ್ಡ ಜಮೀನಿನ ಮಣೆಗಾರನಾಗುತ್ತಿದ್ದೆ. ಅಲ್ಲವೆ ತಾತ?" ಎನ್ನುವನು.

ಚಕ್ರವರ್ತಿ—ಊಟವಾದಮೇಲೆ ವಿಚಾರಿಸೋಣ, ರಮೇಶಬಾಬು! ಹುಡುಗ ಸೂಟಿಯಾಗಿದ್ದಾನೆ. ಎಲ್ಲರಿಂದಲೂ ಈ ಕೆಲಸ ಸಾಧ್ಯವಿಲ್ಲ. ಈ ಕಾಲದಲ್ಲಿ ಹುರುಳಿಕಾಯಿ ಸಂಪಾದಿಸುವ ಯೋಗ್ಯತೆ ಎಷ್ಟು ಜನರಿಗೆ ಇರುತ್ತದೆ? ಅನುಮಾನ ಪಡುವುದು ಸುಲಭ. ಸಂಪಾದಿಸುವುದು ಕಷ್ಟ.

ರಮೇಶ—ಅದು ಸರಿಯಲ್ಲ ಮಾವ. ನೀವು ಅವನನ್ನು ಉಬ್ಬಿಸಬೇಡಿ.

ಚಕ್ರ—ಅವನಲ್ಲಿರುವ ಸುಗುಣಗಳೇ ಸ್ವಲ್ಪ. ಅವುಗಳಿಗೂ ನಾವು ಉತ್ತೇಜನ ಕೊಡದಿರುವುದು ಸರಿಯಲ್ಲ. ಉಮೇಶ, ನಾಳೆ ಸ್ವಲ್ಪ ನಿಂಬೆ ಎಲೆಗಳನ್ನು ತಾ. ನನಗೆ ಸ್ವಲ್ಪ ಸ್ವಲ್ಪ ವೈದ್ಯ ಬರುತ್ತದೆ. ಸೊಪ್ಪನ್ನು ಚನ್ನಾಗಿ ತೊಳೆಯಬೇಕು, ಉಮೇಶ"

ರಮೇಶ ಗದರಿಸಿದಷ್ಟಕ್ಕೂ ಉಮೇಶನಿಗೆ ಕಮಲೆಯಮೇಲೆ ವಿಶ್ವಾಸ ಹೆಚ್ಚುತ್ತ ಹೋಯಿತು. ಚಕ್ರವರ್ತಿ, ಉಮೇಶ, ಕಮಲೆಯರು ರಮೇಶನಿಗೆ ಹೆಚ್ಚು ಗಮನ ಕೊಡದೆ ತಮ್ಮ ಆಟ ಪಾಟಗಳಲ್ಲಿ ಮಗ್ನರಾಗಿರುತ್ತಿದ್ದರು. ಚಕ್ರವರ್ತಿಯ ಹೊಗಳಿಕೆಯನ್ನು ಕೇಳಿ ರಮೇಶನಿಗೂ ಕಮಲೆಯಲ್ಲಿ ಮೆಚ್ಚಿಕೆ ಹೆಚ್ಚಿತ್ತು. ಆದರೆ ತೋರಿಸಲು ಅಸಮರ್ಥನಾದನು. ಅವನು ಸಣ್ಣ ದೋಣಿಗಳು ಸುಲಭವಾಗಿ ತೇಲಿ ಹೋಗುವೆಡೆ ಹೋಗಲಾರದೆ ದೂರ ನಿಂತ ದೊಡ್ಡ ಹಡಗಿನಂತಿದ್ದನು.

ಹುಣ್ಣಿಮೆಯ ಸಮಯ. ಒಂದು ಪ್ರಾತಃ ಕಾಲ ಆಕಾಶದ ತುಂಬ

ಮೋಡಗಳು ಕವಿದಿದ್ದುವು. ಹತ್ತಿರದಲ್ಲಿ ಯಾವ ದೋಣಿಯೂ ಇರಲಿಲ್ಲ. ದಡದಲ್ಲಿ ಜನರಿರಲಿಲ್ಲ. ದೋಣಿ ಸಾಗುತ್ತಿದ್ದಿತು. ಕಮಲೆ ತನ್ನ ಕೆಲಸದಲ್ಲಿ ತೊಡಗಿದ್ದಳು.

ಚಕ್ರವರ್ತಿ, "ರಾತ್ರಿಗೂ ಈಗಲೇ ಅಡಿಗೆ ಮಾಡುವುದೊಳ್ಳೆಯದು. ಮಳೆ ಬರಬಹುದು" ಎಂದನು.

ಊಟ ಹೊತ್ತಾಯಿತು. ಅಲೆಗಳ ಬಡಿತ ಹೆಚ್ಚಾದುದರಿಂದ ದೋಣಿಯನ್ನು ನಿಲ್ಲಿಸಿದರು. ಸಂಜೆಯಾದುದನ್ನು ಯಾರೂ ಗಮನಿಸಲೇ ಇಲ್ಲ. ರಾತ್ರಿ ಆಗಾಗ ಚಂದ್ರ ಮೋಡಗಳ ನಡುವೆ ಇಣಿಕಿ ನೋಡುತ್ತಿದ್ದನು. ಬಿರುಗಾಳಿ ಎದ್ದು ದೊಡ್ಡಮಳೆ ಪ್ರಾರಂಭವಾಯಿತು.

ಒಂದಾವೃತ್ತಿ ನೀರುಪಾಲಾಗಿದ್ದ ಕಮಲೆಗೆ ಬಹಳ ಗಾಬರಿಯಾಯಿತು. ರಮೇಶ, "ಈ ದೋಣಿಯಲ್ಲೇನೂ ಭಯವಿಲ್ಲ, ಕಮಲಾ. ನಿದ್ರೆ ಹೋಗು. ನಾನು ಪಕ್ಕದ ಕೋಣೆಯಲ್ಲೇ ಇರುತ್ತೇನೆ. ನಿದ್ರೆ ಹೋಗುವುದಿಲ್ಲ." ಎಂದನು.

ಚಕ್ರವರ್ತಿ ಬಂದು, "ಭಯಪಡಬೇಡಮ್ಮಾ. ಪರವಾಯಿಲ್ಲ" ಎಂದನು. ಕಮಲೆ ಬಾಗಿಲಿಗೆ ಬಂದು "ಇಲ್ಲೇ ಕೂತಿರಿ ಮಾವಾ" ಎಂದಳು. ಚಕ್ರವರ್ತಿ ಅನುಮಾನಿಸಿ. "ನೀವು ಮಲಗಿದರೆ ವಾಸಿ" ಎಂದು ಒಳಗೆ ಬಂದು, ರಮೇಶನಿಲ್ಲದುದನ್ನು ನೋಡಿ. "ರಮೇಶಬಾಬು ಎಲ್ಲಿ? ತರಕಾರಿ ಕದಿಯಲು ಹೋದನೋ?" ಎಂದನು.

ರಮೇಶ—"ಇಲ್ಲಿದ್ದೇನೆ ಮಾವಾ" ಎಂದು ಪಕ್ಕದ ಕೋಣೆಯಿಂದ ಕೂಗಿದನು.

ರಮೇಶ ಪುಸ್ತಕವನ್ನೋದುತ್ತಾ ಹಾಸಿಗೆಯ ಮೇಲೆ ಬಿದ್ದಿರುವುದನ್ನು ಕೋಡಿ ಚಕ್ರವರ್ತಿ, "ನಿಮ್ಮ ಹೆಂಡತಿಗೆ ಒಬ್ಬಳೇ ಇರಲು ಭಯ. ಪುಸ್ತಕ ಮುಚ್ಚಿಟ್ಟು ಇಲ್ಲಿ ಬನ್ನಿ" ಎಂದನು.

ಕಮಲೆ ಮೈಮರೆತವಳಂತೆ ಚಕ್ರವರ್ತಿಯ ಕೈ ಹಿಡಿದು "ಬೇಡ, ಮಾವಾ ಬೇಡ" ಎಂದಳು. ಗಾಳಿಯ ಶಬ್ದದಲ್ಲಿ ರಮೇಶನಿಗೆ ಕೇಳಿಸಲಿಲ್ಲ. ಚಕ್ರವರ್ತಿ ಗಾಬರಿಯಾದನು.

ರಮೇಶ ಪುಸ್ತಕಮುಚ್ಚಿ ಒಳಗೆ ಬಂದು. "ಏನಾಯಿತು ಮಾವ?

ನೀವೂ ಕಮಲೆಯೂ...."

ಕಮಲೆ ತಲೆಯೆತ್ತದೆ, "ಸುಮ್ಮನೆ ಹರಟಲು ಅವರನ್ನು ಕರೆದೆ."

ಅವಳ ಮಾತಿನ ಅರ್ಥ, "ನನಗೇನೂ ಭಯವಿಲ್ಲ. ನನ್ನ ಜತೆಗೆ ಯಾರೂ ಬೇಡ," ಎಂದಂತಿತ್ತು.

"ಹೊತ್ತಾಯಿತು, ಮಾವಾ. ಮಲಗಿಕೊಳ್ಳಿ. ಉಮೇಶನಿಗೆ ಹೆದರಿಕೆಯೇನೋ, ವಿಚಾರಿಸಿ," ಎಂದಳು.

ಬಾಗಿಲಹೊರಗೆ ಕತ್ತಲಲ್ಲಿ ಕುಳಿತಿದ್ದ ಉಮೇಶ, "ನನಗೇನೂ ಭಯವಿಲ್ಲಮ್ಮಾ," ಎಂದನು.

ಕಮಲೆಗೆ ಕನಿಕರವಾಯಿತು, ಮಳೆಯಲ್ಲೇಕೆ ಕುಳಿತಿದ್ದೀ, ಉಮೇಶ? ಹೋಗಿ ಮಾವನ ಕೋಣೆಯಲ್ಲೇ ಮಲಗಿಕೋ," ಎಂದಳು.

ಉಮೇಶ ಚಕ್ರವರ್ತಿಯೊಡನೆ ಹೊರಟುಹೋದನು.

"ನಿದ್ರೆ ಬರುವವರೆಗೂ ಮಾತನಾಡುತ್ತಿರಲೇ?" ರಮೇಶ ಕಮಲೆಯನ್ನು ಕೇಳಿದನು.

"ಬೇಡ. ನನಗೆ ನಿದ್ರೆ ಬರುತ್ತಿದೆ."

ಕಮಲೆಗೆ ಅಸಮಾಧಾನವೆಂದು ತಿಳಿದು ರಮೇಶ ತನ್ನ ಕೊಠಡಿಗೆ ಹೋದನು. ಕಮಲೆ ಸುಮ್ಮನೆ ಬಿದ್ದುಕೊಂಡಳು. ಗಾಳಿ ಜೋರಾದಂತೆಲ್ಲಾ ಅಲೆಗಳ ಹೊಡೆತ ಹೆಚ್ಚುತ್ತಿದ್ದಿತು. ದೋಣಿಯವರೆಲ್ಲಾ ಕೆಲಸದಲ್ಲಿ ಮಗ್ನರಾಗಿದ್ದರು.

ಕಮಲೆ ಎದ್ದು ಹೊರಗೆ ಹೋದಳು. ಮಳೆ ನಿಂತಿದ್ದರೂ ಗಾಳಿ ಅರಚುತ್ತಿದ್ದಿತು. ಆಕಾಶವು ಮೋಡಗಳಿಂದ ತುಂಬಿದ್ದುದರಿಂದ ದಡಗಳಾಗಲಿ ನದಿಯಾಗಲಿ ಕಾಣಿಸುತ್ತಿರಲಿಲ್ಲ. ಭೂಮ್ಯಾಕಾಶಗಳು ಸೇರಿದಂತಿದ್ದು ಯಮನ ಕೋಣನು ರೋಷದಿಂದ ಕೊಂಬುಗಳನ್ನು ಮಸೆಯುತ್ತಿರುವಂತೆ ತೋರಿತು.

ಕಮಲೆಗೆ ತನ್ನ ಮನಸ್ಸಿನ ಸ್ಥಿತಿಯೇ ಅರ್ಥವಾಗಲಿಲ್ಲ. ಭಯವಿದ್ದರೂ ಇರಬಹುದು; ಉಲ್ಲಾಸವಿದ್ದರೂ ಇರಬಹುದು. ಪ್ರಕೃತಿಯ ಭಯಂಕರಾಟೋಪ ಅವಳ ಹೃದಯದಲ್ಲಿ ಮಾರ್ದನಿಗೊಡುತ್ತಿದ್ದಿತು. ಪ್ರಕೃತಿ ಏನನ್ನು ಎದುರಿಸುತ್ತಿದ್ದಿತು? ಕಮಲೆಗೆ ಉತ್ತರ ದೊರಕಲಿಲ್ಲ.

ಅವಳ ಹೃದಯುಕ್ಕಿದ್ದಂತೆ ಅದಕ್ಕೂ ಮೂಕ ಶೋಕವೆ? ಯಾವುದೋ ಅವ್ಯಕ್ತ ನೋಸ ಮಾಯೆಗಳನ್ನು ಕಿತ್ತೆಸೆಯಲು ಪ್ರಕೃತಿ ಹೀಗೆ ರೋಷ ದಿಂದ ಮೊರೆಯುತ್ತಿರಬಹುದು. ದಿಗಂತದಿಂದ ಸುಂಟರಗಾಳಿ“ ಇಲ್ಲ,” ಎಂದು ಮೊರೆಯುತ್ತ ಕಗ್ಗತ್ತಲೆಯಲ್ಲಿ ಬೀಸುತ್ತಿದ್ದಿತು. “ಇಲ್ಲ,” ವೆಂದು ಏತಕ್ಕೆ ಉತ್ತರ ಕೊಡುತ್ತಿದ್ದಿತು?

## ಅಧ್ಯಾಯ ೩೦

ಮಾರನೆಯ ದಿನ ಸ್ವಲ್ಪಮಟ್ಟಿಗೆ ಗಾಳಿ ಅಡಗಿದ್ದರೂ ಯಜ ಮಾನನಿಗೆ ದೋಣಿ ಬಿಡುವ ಧೈರ್ಯವಿರಲಿಲ್ಲ. ಬೆಳಗಾಗುತ್ತಲೇ ಚಕ್ರವರ್ತಿ ರಮೇಶನ ಕೋಣೆಗೆ ಹೋದನು. ರಮೇಶ ಎದ್ದು ಕುಳಿತನು.

“ರಾತ್ರಿ ಇಲ್ಲೇ ಮಲಗಿದ್ದಿರೋ?” ಚಕ್ರವರ್ತಿ ಪ್ರಶ್ನಿಸಿದನು.

ರಮೇಶ ಮಾತು ಮರೆಸುತ್ತಾ “ಏನು ದರಿದ್ರದಿನ! ನಿಮಗೆ ರಾತ್ರಿ ನಿದ್ರೆ ಬಂತೆ?” ಎಂದನು.

ಚಕ್ರವರ್ತಿ—ರಮೇಶಬಾಬು, ನನಗೆ ಬುದ್ಧಿಯಿಲ್ಲವೆಂದು ನೀವು ತಿಳಿದಿರಬಹುದು. ನಾನೂ ಎಷ್ಟೋ ಸಮಸ್ಯೆಗಳನ್ನು ಬಿಡಿಸಿದ್ದೇನೆ. ನೀವು ನನಗೆ ಅರ್ಥವೇ ಆಗುವುದಿಲ್ಲ.

ರಮೇಶನ ಮುಖ ಕೆಂಪಾಯಿತು. ಮರೆಸಲು ನಕ್ಕು, “ಅದರ ಲ್ಲೇನು ತಪ್ಪು? ಈಗ ತೆಲುಗು ಮಾತು ತೆಗೆದುಕೊಳ್ಳಿ. ನಮಗೆ ಅರ್ಥವೇ ಆಗುವುದಿಲ್ಲ. ತೆಲುಗರ ಮಗುವಿಗೆ ಅದು ನೀರು ಕುಡಿದಷ್ಟು ಸುಲಭ. ತಿಳಿಯದ ವಿಚಾರವಾಗಿ ಮಾತನಾಡಬೇಡಿ. ಎಂದೋ ತಿಳಿಯುತ್ತೆ.” ಎಂದನು.

ಚಕ್ರವರ್ತಿ—ಕ್ಷಮಿಸಿ. ನಿಮಗೆ ನನ್ನಲ್ಲಿ ನಂಬಿಕೆಯಿಲ್ಲ. ಆದರೆ ನೋಡುತ್ತಲೇ ನಿಮ್ಮಲ್ಲಿ ನನಗೆ ವಿಶ್ವಾಸ ಹುಟ್ಟಿತು. ಅದರಿಂದ ನನ್ನದು ಬರೀ ತಲೆಹರಟೆಯಲ್ಲ.

ರಮೇಶ—ನನಗೆ ಅಸಮಾಧಾನವಿಲ್ಲ. ಆದರೆ ಇದು ತೆಲುಗಿನಂತೆ, ನಿಮಗೆ ಅರ್ಥವಾಗದ ವಿಚಾರ—ಎಂದು ನಿಟ್ಟುಸಿರುಬಿಟ್ಟನು.

ಘಾಸಿಪುರದಲ್ಲಿ ನಿಲ್ಲುವುದು ಉಚಿತವಲ್ಲವೆಂದು ರಮೇಶನಿಗೆ ತೋರ ಲಾರಂಭಿಸಿತು. ಮುದುಕನ ಸಹಾಯ ಸಿಕ್ಕಬಹುದೆಂದು ಮೊದಲು ತೋರಿತು. ಆದರೆ ಅದೇ ತೊಂದರೆಗೆ ಕಾರಣವಾಗಬಹುದು. ಕಮಲೆ ಯೊಡನೆ ತನ್ನ ಸಂಬಂಧವನ್ನು ಚರ್ಚಿಸುವಂತಾಗಬಹುದು. ಗುರುತಾದ ವರು ಇಲ್ಲದಿದ್ದರೆ ಚರ್ಚೆಯಿಲ್ಲ.

ಘಾಸಿಪುರವನ್ನು ತಲಪುವ ಮೊದಲದಿನ ರಮೇಶ ಚಕ್ರವರ್ತಿ ಯೊಡನೆ, "ನಾವು ಘಾಸಿಪುರದಲ್ಲಿ ಇಳಿಯುವುದಿಲ್ಲ. ಕಾಶಿಗೆ ಹೋಗು ತ್ತೇವೆ," ಎಂದನು.

ಮುದುಕ, "ಮನಸ್ಸನ್ನು ಎಷ್ಟು ಬೇಗ ಬದಲಾಯಿಸುತ್ತೀರಿ! ಇದೇ ನಿಶ್ಚಯವೋ?" ಎಂದನು.

"ಹೌದು"—ಒರಟಾಗಿ ರಮೇಶ ಉತ್ತರವಿತ್ತನು.

ಚಕ್ರವರ್ತಿ ಸಾಮಾನು ಕಟ್ಟತೊಡಗಿದನು. ಕಮಲೆ, "ನನ್ನ ಮೇಲೆ ಅಸಮಾಧಾನವೆ ಮಾವಾ," ಎಂದು ಕೇಳಿದಳು.

"ಬೆಳಗಿನಿಂದ ಸಂಜೆಯವರೆಗೆ ಜಗಳವಾಡಿ, ನೀನೇ ಯಾವಾಗಲೂ ಗೆಲ್ಲುತ್ತಿದ್ದರೆ ಇನ್ನೇನಾಗುತ್ತೆ?"

ಕಮಲ—ಬೆಳಗಿನಿಂದ ನೀವು ಮಾತನಾಡಲೇ ಇಲ್ಲ.

ಚಕ್ರ—ನೀವೇ ನನ್ನನ್ನು ಬಿಟ್ಟು ಓಡಿಹೋಗುತ್ತಿದ್ದೀರಿ!

ಕಮಲೆಗೆ ಅರ್ಥವಾಗಲಿಲ್ಲ.

ಚಕ್ರ—ರಮೇಶಬಾಬು ನಿಮಗೆ ಹೇಳಲಿಲ್ಲವೆ? ನೀವು ಕಾಶಿಗೆ ಹೋಗುತ್ತೀರಂತೆ.

ಕಮಲೆ ಮರುಮಾತನಾಡಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ, "ನಿಮ್ಮ ಕೈಲಾಗುವುದಿಲ್ಲ ಮಾವ. ನಾನು ಸಾಮಾನು ಕಟ್ಟಿಕೊಡುತ್ತೇನೆ," ಎಂದಳು. ತನ್ನನ್ನು ಬಿಟ್ಟು ಹೋಗಲು ಕಮಲೆ ಅಸಮಾಧಾನ ವ್ಯಕ್ತ ಪಡಿಸದಿರಲು ಚಕ್ರವರ್ತಿ ನೊಂದುಕೊಂಡು, "ಈ ವಯಸ್ಸಿನಲ್ಲಿ ನನಗೆ ಹೊಸ ಸ್ನೇಹಿತರೇಕೆ?" ಎಂದುಕೊಂಡನು.

ರಮೇಶ ಬಂದು ಕಮಲೆಯನ್ನು, "ನಿನ್ನನ್ನೇ ಹುಡುಕುತ್ತಿದ್ದೆ,"

ಎಂದನು. ಕಮಲೆ ಚಕ್ರವರ್ತಿಯ ಬಟ್ಟೆಗಳನ್ನು ಮಡಿಸುತ್ತಿದ್ದಳು.

ರಮೇಶ—ನಾವು ಕಾಶಿಗೇ ಹೋಗೋಣವೆ?

ಕಮಲ—ಇಲ್ಲ. ನಾನು ಘಾಸಿಪುರಕ್ಕೆ ಹೋಗುತ್ತೇನೆ. ಸಾಮಾನು ಕಟ್ಟಿದ್ದೇನೆ.

ರಮೇಶ ಆಶ್ಚರ್ಯದಿಂದ "ಒಬ್ಬಳೇ ಹೋಗುವೆಯಾ?" ಎಂದನು.

ಕಮಲೆ ವಿಶ್ವಾಸದಿಂದ ಚಕ್ರವರ್ತಿಯನ್ನು ನೋಡಿ, "ಇಲ್ಲ. ಮಾವ ಬರುತ್ತಾರೆ," ಎಂದಳು.

ಚಕ್ರವರ್ತಿಗೆ ಕಷ್ಟಕ್ಕಿಟ್ಟುಕೊಂಡಿತು. "ರಮೇಶಬಾಬು ತಪ್ಪರ್ಥ ಮಾಡಿಕೊಂಡಾನಮ್ಮಾ," ಎಂದನು.

ಕಮಲೆ ಸ್ವತಂತ್ರಳಂತೆ "ನಾನೇನೋ ಘಾಸಿಪುರಕ್ಕೆ ಹೋಗುತ್ತೇನೆ" ಎಂದಳು.

ರಮೇಶ—ಆಗಲಿ ಮಾವಾ! ಘಾಸಿಪುರಕ್ಕೇ ಹೋಗೋಣ.

ಸಾಯಂಕಾಲ ಆಕಾಶ ನಿರ್ಮಲವಾಯಿತು. ರಮೇಶ ಚಿಂತಿಸುತ್ತಾ ಬೆಳದಿಂಗಳಿನಲ್ಲಿ ಕುಳಿತಿದ್ದನು. "ಕಮಲೆಗೆ ಅಸಮಾಧಾನವಾದರೆ ಹೀಗೇ ನಡೆಯಲು ಸಾಧ್ಯವಿಲ್ಲ. ಅವಳೊಡನಿದ್ದು ದೂರವಾಗಿರುವ ಬಗೆಯನ್ನರಿಯೆ. ನನಗಿನ್ನು ಅಸಾಧ್ಯ. ಜಗತ್ತಿನ ದೃಷ್ಟಿಯಲ್ಲಿ ಹೇಗಾದರೂ ಅವಳು ನನ್ನ ಪತ್ನಿ. ಕೆಲವು ಮಂತ್ರಗಳನ್ನು ಹೇಳದಿದ್ದರೇನಂತೆ? ಆ ದಿನ ಮರಳು ದಿಣ್ಣೆಯಲ್ಲಿ ಯಮುನೇ ಅವಳನ್ನು ನನಗೆ ಕೊಟ್ಟನು. ಯಾವ ಪುರೋಹಿತ ಅವನಿಗೆ ಸಮ?" ಎಂದು ಕೊಂಡನು.

ಹೇಮನಳಿನಿಗೂ ತನಗೂ ನಡುವೆ ಒಂದು ಅರಿಸೈನ್ಯವೇ ನಿಂತಂತಿತ್ತು. ಜಗಳ ಅನುಮಾನ ತಿರಸ್ಕಾರಗಳನ್ನೆದುರಿಸಿ ಅವಳನ್ನು ಸೇರಬೇಕು. ರಮೇಶನಿಗೆ ಆ ಶಕ್ತಿಯಿರಲಿಲ್ಲ. ಗೆಲ್ಲುವ ಆಸೆಯೂ ಕಡಮೆ. ತಾನು ನಿರಪರಾಧಿಯೆಂದು ಸಿದ್ಧಮಾಡುವುದು ಹೇಗೆ? ಒಂದು ವೇಳೆ ಸಾಧಿಸಿದರೂ ಕಮಲೆಯನ್ನು ಅಧೋಗತಿಗೆ ತಳ್ಳಬೇಕಾಗುವುದು. ಕಮಲೆಯೋ ತನ್ನ ಪತ್ನಿ. ಹೇಮನಳಿನಿ ತನ್ನನ್ನು ದ್ವೇಷಿಸಿ ಬೇರೆಯವನನ್ನು ವರಿಸಬಹುದು. ನಿಟ್ಟುಸಿರಿನೊಡನೆ ರಮೇಶ ಹೇಮನಳಿನಿಯ ಆಸೆಯನ್ನು ತೊರೆದನು.

## ಅಧ್ಯಾಯ ೩೧

"ನೀನೆಲ್ಲಿಗೆ ಹೊರಟೆ, ಉಮೇಶ್?" ರಮೇಶ ಕೇಳಿದನು.

"ಅಮ್ಮನ ಜತೆಯಲ್ಲಿ."

"ಕಾಶಿಯವರೆಗೆ ನಿನಗೆ ಟಿಕೆಟ್ ತೆಗೆದುಕೊಂಡಿದ್ದೇನೆ. ಇದು ಇನ್ನೂ ಘಾಸಿಪುರ. ನಾವು ಕಾಶಿಗೆ ಹೋಗುವುದಿಲ್ಲ."

"ನಾನೂ ಹೋಗುವುದಿಲ್ಲ."

ರಮೇಶನಿಗೆ ಬೇಸರವಾಯಿತು. ಉಮೇಶ ಶಾಶ್ವತವಾಗಿ ತಮ್ಮ ಬೆನ್ನು ಹತ್ತುವನೆಂದು ಅವನು ತಿಳಿದಿರಲಿಲ್ಲ. ಕಮಲೆಯನ್ನು, "ಉಮೇಶನೂ ನಮ್ಮೊಡನೆ ಬರುತ್ತಾನೆಯೇ?" ಎಂದು ಕೇಳಿದನು.

"ಮತ್ತೆಲ್ಲಿಗೆ ಹೋಗುತ್ತಾನೆ?"

ರಮೇಶ—ಕಾಶಿಯಲ್ಲಿ ಯಾರಾದರೂ ನಂಟರಿರಬಹುದು.

ಕಮಲ—ಇಲ್ಲ. ಅವನು ನಮ್ಮ ಜತೆಯಲ್ಲೇ ಬರುತ್ತಾನೆ. ಉಮೇಶ, ಇದು ಹೊಸ ಸ್ಥಳ ಎಲ್ಲಾದರೂ ತಪ್ಪಿಸಿಕೊಂಡೀಯೆ. ಮಾವನ ಹತ್ತಿರವೇ ಇರು.

ಅವಳೇ ಎಲ್ಲಾ ಏರ್ಪಾಡುಗಳನ್ನೂ ಮಾಡುತ್ತಿದ್ದಳು. ರಮೇಶನಿಗೆ ವಿಧೇಯಳಾಗಿದ್ದ ಕಾಲ ಮುಗಿದಂತಿತ್ತು. ಉಮೇಶ ಬಟ್ಟೆಯ ಗಂಟೊಂದನ್ನು ಹೊತ್ತುಕೊಂಡು ಅವರನ್ನು ಹಿಂಬಾಲಿಸಿದನು.

ಮಾವನ ಮನೆ ಊರಿಗೂ ಯೂರೋಪಿಯನ್ನರ ವಸತಿಗೂ ನಡುವೆ ಇತ್ತು. ಮನೆಯ ಮುಂದೆ ಒಂದು ಕಲ್ಲು ಕಟ್ಟಿದ ಭಾವಿ, ಹಿಂದೆ ಒಂದು ಮಾವಿನತೋಪೂ ಇದ್ದುವು. ಮನೆಯನ್ನು ಬೀದಿಯಿಂದ ಒಂದು ಸಣ್ಣ ಗೋಡೆ ಪ್ರತ್ಯೇಕಿಸಿತ್ತು. ಮನೆಯ ಮುಂದೆ ಬಾವಿ ನೀರಿನಿಂದ ಬೆಳೆಸಿದ ಸಣ್ಣ ತರಕಾರಿ ತೋಟವಿತ್ತು. ಬೇರೆ ಮನೆ ಸಿಕ್ಕುವವರೆಗೂ ಅಲ್ಲಿಯೇ ಇರಬಹುದೆಂದು ಮಾವ, ರಮೇಶ ಕಮಲೆಯರಿಗೆ ಹೇಳಿದನು.

ತನ್ನ ಹೆಂಡತಿಗೆ ಸದಾ ಖಾಯಿಲೆಯೆಂದು ಮಾವ ವರ್ಣಿಸುತ್ತಿದ್ದರೂ ಹರಿಭಾಭಿನಿ ಹಾಗೆ ಕಾಣುತ್ತಿರಲಿಲ್ಲ. ಮಧ್ಯವಯಸ್ಕಳಾಗಿದ್ದರೂ ಗಟ್ಟಿಮುಟ್ಟಾಗಿದ್ದಳು. ಅದೇ, ಆಗತಾನೆ ಸ್ವಲ್ಪ ನರೆಗೂದಲು ಕಾಣುತ್ತಿ

ದ್ದಿತು. ಮದುವೆಯಾದ ಹೊಸದರಲ್ಲಿ ಆಕೆಗೆ ಮಲೇರಿಯಾ ರೋಗ ಅಂಟಿತ್ತು. ಹವಾ ಬದಲಾಯಿಸುವುದೇ ಔಷಧಿಯೆಂದು ತಿಳಿದು ಚಕ್ರವರ್ತಿ ಘಾಸಿಪುರಕ್ಕೆ ಉಪಾಧ್ಯಾಯನಾಗಿ ಬಂದಿದ್ದನು. ಹರಿಭಾಭಿನಿ ಆರೋಗ್ಯಹೊಂದಿ ಬಹಳ ದಿನಗಳಾಗಿದ್ದರೂ ಚಕ್ರವರ್ತಿ ಆಕೆಯನ್ನು ಬಹು ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದನು. ಅತಿಥಿಗಳನ್ನು ಕೂಡಿಸಿ ಒಳಗೆ ಹೋದಾಗ ಹರಿಭಾಭಿನಿ ಗೋಧಿಯನ್ನು ಸರಿಪಡಿಸುತ್ತಾ ಹಿತ್ತಿಲ ಕಡೆ ಕುಳಿತಿದ್ದಳು.

ಚಕ್ರವರ್ತಿ—ನೋಡಿದೆಯಾ! ಈ ಛಳಿಯಲ್ಲಿ ಶಾಲು ಹೊದ್ದು ಕೊಳ್ಳದೆ ಇದ್ದೀಯಲ್ಲಾ!

ಹರಿ—ಬಿಸಿಲು ಸುಡುತ್ತಿದೆ! ಛಳಿ ಎಲ್ಲಿಬಂತು.?

ಚಕ್ರ—-ನೆರಳಲ್ಲಿ ಕುಳಿತುಕೊಳ್ಳಬಾರದೆ.

ಹರಿ—ಅದಿರಲಿ; ಬರಲು ಇಷ್ಟು ತಡವೇಕಾಯಿತು ?

ಚಕ್ರ—ಅದೊಂದು ದೊಡ್ಡಕಥೆ. ಅತಿಥಿಗಳು ಬಂದಿದ್ದಾರೆ. ಮೊದಲು ಅವರ ಉಪಚಾರ ನೋಡು.

ಚಕ್ರವರ್ತಿ ಹೀಗೆ ತಿಳಿಸದೆ ಅತಿಥಿಗಳನ್ನು ಕರೆತರುವುದು ಹೊಸದಾಗಿರಲಿಲ್ಲ ಆದರೂ ಈಸಲ ಹರಿಭಾಭಿನಿಗೆ ಗಾಬರಿಯಾಯಿತು.

"ಇರಲು ಸ್ಥಳವೆಲ್ಲಿದೆ?"

"ಮೊದಲು ಅವರನ್ನು ನೋಡು. ಆಮೇಲೆ ಸ್ಥಳದ ವಿಚಾರ ನೋಡೋಣ. ಶೈಲ ಎಲ್ಲಿ?"

ಹರಿ—ಮಗುವಿಗೆ ಸ್ನಾನಮಾಡಿಸುತ್ತಿದ್ದಾಳೆ.

ಚಕ್ರವರ್ತಿ ಕಮಲೆಯನ್ನು ಕರೆತಂದನು. ಕಮಲೆ ನಮಸ್ಕರಿಸಲು ಹರಿಭಾಭಿನಿ ಅವಳ ಗಲ್ಲವನ್ನು ಸವರಿ ಗಂಡನೊಡನೆ, "ಇವಳು ನಮ್ಮ ವಿಧುಹಾಗೆಯೇ ಇಲ್ಲವೆ?" ಎಂದಳು. ವಿಧು ಅಲಹಾಬಾದಿನಲ್ಲಿ ಗಂಡನ ಮನೆಯಲ್ಲಿದ್ದ ಅವರ ಹಿರಿಯ ಮಗಳು.

ಹೋಲಿಕೆಯನ್ನು ಕೇಳಿ ಚಕ್ರವರ್ತಿಗೆ ನಗು ಬಂತು. ಕಮಲೆ ಸ್ವಲ್ಪವೂ ವಿಧುವಿನಂತೆ ಇರಲಿಲ್ಲ. ಆದರೆ ತನ್ನ ಮಕ್ಕಳಿಗಿಂತ ರೂಪದಲ್ಲಾಗಲಿ ಜಾಣತನದಲ್ಲಾಗಲಿ ಯಾರೂ ಹೆಚ್ಚೆಂದು ಹರಿಭಾಭಿನಿ

ಒಪ್ಪಿಕೊಳ್ಳುತ್ತಿರಲಿಲ್ಲ. ಇನ್ನೊಬ್ಬ ಮಗಳು ಶೈಲಜೆ ಮನೆಯಲ್ಲೇ ಇದ್ದುದರಿಂದ ಅವಳ ಹೋಲಿಕೆಯನ್ನು ಹೇಳುತ್ತಿರಲಿಲ್ಲ.

ಹರಿಭಾಭಿನಿ—"ನೀವು ಬಂದುದು ಬಹಳ ಸಂತೋಷ. ಆದರೆ ನಿಮಗೇ ತೊಂದರೆಯಾಗಬಹುದು. ನಮ್ಮ ಹೊಸಮನೆ ರಿಪೇರಿಯಾಗುತ್ತಿದೆ. ನೀವೂ ಇಲ್ಲೇ ಇರಬೇಕಾಗಿದೆ," ಎಂದಳು.

ಪೇಟೆಯಲ್ಲಿದ್ದ ಚಕ್ರವರ್ತಿಯ ಒಂದು ಸಣ್ಣ ಮನೆ ರಿಪೇರಿಯಾಗುತ್ತಿದ್ದುದೇನೋ ನಿಜ ಆದರೆ ಅದು ವಾಸಕ್ಕೆ ಯೋಗ್ಯವಾಗಿರಲಿಲ್ಲ. ಚಕ್ರವರ್ತಿಗೆ ನಗು ಬಂದರೂ ಹೆಂಡತಿಯ ಮಾತು ಸುಳ್ಳೆನ್ನಲಿಲ್ಲ.

"ನೀವು ತೊಂದರೆ ಎಂದುಕೊಳ್ಳುವಿರೆಂದಿದ್ದರೆ ನಿಮ್ಮನ್ನು ಕರೆಯುತ್ತಲೇ ಇರಲಿಲ್ಲ." ಎಂದು ಕಮಲೆಗೆ ಹೇಳಿ ಚಕ್ರವರ್ತಿ ಹೆಂಡತಿಯೊಡನೆ "ಈ ಬಿಸಿಲಿನಲ್ಲಿದ್ದರೆ ನಿನ್ನ ಮೈಗಾಗುವುದಿಲ್ಲ. ಒಳಕ್ಕೆ ಹೋಗು," ಎಂದು, ತಾನು ರಮೇಶನನ್ನು ಹುಡುಕಿಕೊಂಡು ಹೋದನು.

ಹರಿಭಾಭಿನಿ ಕಮಲೆಯನ್ನು ಪ್ರಶ್ನಿಸಲಾರಂಭಿಸಿದಳು.

"ನಿನ್ನ ಗಂಡ ಲಾಯರಲ್ಲವೆ? ಸಂಪಾದನೆ ಎಷ್ಟು? ಇನ್ನೂ ಕೆಲಸ ಪ್ರಾರಂಭಿಸಿಲ್ಲವೋ? ತಂದೆಯ ಆಸ್ತಿ ಇದೆಯೋ? ಗೊತ್ತಿಲ್ಲವೆ? ನಿನ್ನ ಗಂಡನ ವಿಚಾರವೇ ಗೊತ್ತಿಲ್ಲವೆ? ಹೋಗಲಿ, ನಿನಗೆ ಖರ್ಚಿಗೆ ಎಷ್ಟು ಹಣ ಕೊಡುತ್ತಾನೆ? ಇಷ್ಟು ದೊಡ್ಡವಳಾಗಿ ನೀನೇ ಎಲ್ಲಾ ನೋಡಿಕೊಂಡು ಹೋಗಬೇಕು ನನ್ನ ಮಗಳ ಗಂಡ ಸಂಪಾದಿಸಿದ ಹಣವನ್ನೆಲ್ಲಾ ಅವಳಿಗೇ ಕೊಡುತ್ತಾನೆ."

ಆಕೆಯ ಪ್ರಶ್ನೆಗಳಿಂದ ತಾನೆಷ್ಟು ಮುಗ್ಧೆಯೆಂಬುದು ಕಮಲೆಗೆ ತಿಳಿಯಿತು. ಗಂಡನೊಡನೆ ಮನಬಿಚ್ಚಿ ಎಂದೂ ಮಾತನಾಡಲಿಲ್ಲವೆಂದೂ ಆತನ ಪ್ರಾಪಂಚಿಕ ಸ್ಥಿತಿಯೇನೂ ತನಗೆ ತಿಳಿಯದೆಂದೂ ಅರಿತಳು. ಅವಳಿಗೆ ಬಹಳ ನಾಚಿಕೆಯಾಯಿತು.

ಹರಿಭಾಭಿನಿ ಪುನಃ, "ಎಲ್ಲಿ, ನಿನ್ನ ಬಳೆ ನೋಡೋಣ. ಅಷ್ಟೇನೂ ಒಳ್ಳೆ ಚಿನ್ನವಲ್ಲ. ಮದುವೆಯಲ್ಲಿ ನಿಮ್ಮ ತಂದೆ ಏನೂ ಒಡವೆ ಕೊಡಲಿಲ್ಲವೆ? ತಂದೆಯಿಲ್ಲವೆ? ಗಂಡ ಏನೂ ಕೊಡಲಿಲ್ಲವೆ? ವಿಧು ಗಂಡ

ತಿಂಗಳೆರಡು ತಿಂಗಳಿಗಾದರೂ ಏನಾದರೂ ಒಡವೆ ಮಾಡಿಸುತ್ತಾನೆ. ಎರಡು ವರ್ಷದ ಉಮೆಯೊಡನೆ ಶೈಲಜೆ ಬಂದಳು. ಸ್ವಲ್ಪ ಕಷ್ಟಾದರೂ ಶೈಲಜೆಯ ಮುಖ ಕಳೆಯಿಂದ ತುಂಬಿತ್ತು. ಬುದ್ಧಿಶಾಲಿನಿಯಂತೆ ಕಾಣು ತ್ತಿದ್ದಳು. ಕಮಲೆಯನ್ನು ನೋಡಿ ಉಮೆ "ಅತ್ತೇ" ಎಂದು ಕೂಗಿ ದಳು. ಅವಳ ವಿಶ್ವಾಸಕ್ಕೆ ಪಾತ್ರರಾದ ದೊಡ್ಡ ಹೆಂಗಸರೆಲ್ಲರೂ ಅತ್ತಿಗಳೇ. ಕಮಲೆ ಮಗುವನ್ನು ಎತ್ತಿಕೊಂಡಳು.

ಹರಿಭಾಭಿನಿ ಶೈಲಜೆಯೊಡನೆ, "ಈಕೆಯ ಗಂಡ ಲಾಯರ್. ಇಲ್ಲೇ ಕೆಲಸ ಮಾಡಲು ಬಂದಿದ್ದಾನೆ. ದಾರಿಯಲ್ಲಿ ನಿಮ್ಮ ತಂದೆ ಗುರುತಾಗಿ ಇಲ್ಲಿಗೆ ಬಂದಿದ್ದಾರೆ," ಎಂದಳು.

ಇಬ್ಬರು ಹುಡುಗಿಯರೂ ಒಬ್ಬರನ್ನೊಬ್ಬರು ದೃಷ್ಟಿಸಿ ನೋಡಿದರು. ಗಾಢವಾದ ಸ್ನೇಹವಂಕುರಿಸಲು ಅದೊಂದು ನೋಟವೇ ಸಾಕಾಯಿತು. ಶೈಲಜೆ ಕಮಲೆಯನ್ನು ಕೊರಡಿಗೆ ಕರೆದುಕೊಂಡು ಹೋದಳು. ಸ್ವಲ್ಪ ಹೊತ್ತಿನಲ್ಲಿಯೇ ಮನಬಿಚ್ಚಿ ಮಾತನಾಡಲಾರಂಭಿಸಿದರು. ವಯಸ್ಸಿ ನಲ್ಲಿಯೂ ಹೆಚ್ಚು ವ್ಯತ್ಯಾಸವಿರಲಿಲ್ಲ. ಕಮಲೆಗೆ ಹೆಚ್ಚು ಪ್ರಪಂಚ ಜ್ಞಾನ ವಿತ್ತು. ಅತ್ತೆಯ ಕೈಕೆಳಗೆ ನಲುಗಿ, "ಹಾಗೆ ಮಾತನಾಡಬಾರದು, ಹೀಗಿರ ಬಾರದು," ಎನ್ನಿಸಿಕೊಳ್ಳದೆ ಧೈರ್ಯವಾಗಿ ಬೆಳೆದಿದ್ದಳು. ಉಮೆ ಹಾವಳಿ ಮಾಡುತ್ತಿದ್ದರೂ ಮಾತನಾಡುತ್ತಿದ್ದರು. ಕಮಲೆಗಿಂತ ಶೈಲಜೆ ಹೆಚ್ಚು ಮಾತಿನವಳು. ಕಮಲೆ ತನ್ನ ಜೀವನ ಕಥೆಯನ್ನು ವರ್ಣರಂಜಿತ ವಾಗಿ ಹೇಳಲಾರದೆ ಹೋದಳು. ತನ್ನ ಜೀವನ ಎಷ್ಟು ಅಸ್ಪಷ್ಟವೆಂದು ಅವ ಳಿಗೆ ತಿಳಿದಿರಲಿಲ್ಲ ಆದರಲ್ಲೇನು ಕಡಮೆಯಾಗಿತ್ತೆಂಬುದರ ಅರಿವಾಗಿರಲಿಲ್ಲ.

ಶೈಲಜೆ ತನ್ನ ಗಂಡನ ವಿಚಾರವಾಗಿ ಮಾತನಾಡಲಾರಂಭಿಸಿದಳು. ಅದೇ ಅವಳ ಜೀವನಾಡಿ. ಕಮಲೆ ತನ್ನ ಗಂಡನ ವಿಚಾರವಾಗಿ ಹೇಳುವ ಮಾತೂ ಇರಲಿಲ್ಲ; ಹೇಳಬೇಕೆಂಬ ಅಭಿಲಾಷೆಯೂ ಇರಲಿಲ್ಲ. ಶೈಲಜೆಯ ಜೀವನ ನೌಕೆ ಸುಖದಿಂದ ತುಂಬಿ ನಗುನಗುತ್ತಾ ಅಲೆಗಳ ಮೇಲೆ ಸಾಗಿರಲು ಕಮಲೆಯ ನೌಕೆ ಮರಳಿನಲ್ಲಿ ಸಿಕ್ಕಿ ಒದ್ದಾಡುತ್ತಿತ್ತು.

ಶೈಲಜೆಯ ಗಂಡ ವಿಪಿನನಿಗೆ ಘಾಸಿಪುರದ ಅಫೀಮು ಕಾರ್ಖಾನೆ ಯಲ್ಲಿ ಕೆಲಸವಿತ್ತು. ಮಗಳನ್ನು ದೂರ ಕಳುಹಿಸಲು ಮನಸ್ಸೊಪ್ಪದೆ

ಚಕ್ರವರ್ತಿ ಬಡಹುಡುಗನೊಬ್ಬನಿಗೆ ಅವಳನ್ನು ಮದುವೆ ಮಾಡಿ, ಕೆಲಸ ಮಾಡಿಸಿಕೊಟ್ಟು, ಮನೆಯಲ್ಲಿಯೇ ಇರುವಂತೆ ಏರ್ಪಡಿಸಿದ್ದನು.

ಶೈಲಜೆ ಮಧ್ಯೆ ಮಾತು ನಿಲ್ಲಿಸಿ, "ಸ್ವಲ್ಪ ತಡೆಯಮ್ಮಾ! ಯಜಮಾನರು ಬಂದಿದ್ದಾರೆ. ಊಟಕ್ಕೆ ಬಡಿಸಿ ಬರುತ್ತೇನೆ," ಎಂದಳು.

ಕಮಲೆ—ಅವರು ಬಂದರೆಂದು ನಿನಗೆ ಹೇಗೆ ತಿಳಿಯಿತು?

ಶೈಲಜೆ—"ಹಾಸ್ಯ ಮಾಡಬೇಡ. ಅವರ ಹೆಜ್ಜೆ ಸದ್ದು ನನಗೆ ತಿಳಿಯುವುದಿಲ್ಲವೆ?" ಎಂದು ನಕ್ಕು, ಉಮೆಯನ್ನು ಎತ್ತಿಕೊಂಡು ಹೊರಟು ಹೋದಳು.

ಕಮಲೆ ಚಿಂತಿಸುತ್ತಾ ಕಿಟಕಿಯ ಆಚೆ ನೋಡುತ್ತಿದ್ದಳು. ಹೊರಗಡೆ ಒಂದು ಸೀಬೆ ಗಿಡವಿತ್ತು. ಅದರ ಸುತ್ತಲೂ ದುಂಬಿಗಳು ಹಾರುತ್ತಿದ್ದುವು.

## ಅಧ್ಯಾಯ ೩೨

ಗಂಗಾನದಿಯ ದಡದ ಮೇಲೆ ಒಂದು ಮನೆಯನ್ನು ರಮೇಶ ವಿಚಾರಿಸುತ್ತಿದ್ದನು. ಅವನೊಂದು ಸಲ ಕಲ್ಕತ್ತೆಗೆ ಹೋಗಿ ಬರಬೇಕಾಗಿತ್ತು. ಹೋಗಲು ಮನಸ್ಸು ಹಿಂದೆಗೆಯುತ್ತಿತ್ತು. ವಿಧಿಯ ಬಲೆಯಲ್ಲಿ ಸಿಕ್ಕಿಬಿದ್ದು ಕಮಲೆಯ ಗಂಡನೆಂದು ಒಪ್ಪಿಕೊಳ್ಳದೆ ಬೇರೆ ಮಾರ್ಗವೇ ಅವನಿಗಿರಲಿಲ್ಲ. ಅದು ಒಪ್ಪದೆ ದಿನಗಳನ್ನು ತಳ್ಳುತ್ತಿದ್ದನು. ಕಮಲೆ ಹೆಂಗಸರೊಡನೆ ಒಳಗಿರುತ್ತಿದ್ದಳು. ಹೊರಗಿನ ಕೋಣೆಯಲ್ಲಿದ್ದ ರಮೇಶನನ್ನು ಅವಳು ನೋಡುವುದೇ ಅಪರೂಪವಾಗಿತ್ತು. ಹೀಗೆ ಅವರಿಬ್ಬರನ್ನೂ ಬೇರ್ಪಡಿಸಿದುದಕ್ಕಾಗಿ ಶೈಲಜೆ ವ್ಯಥೆಯನ್ನು ಸೂಚಿಸಿದಳು.

ಕಮಲ—ಆದರೇನು?

ಶೈಲಜೆ ನಕ್ಕು, "ನೀನೆಷ್ಟು ಕಠಿಣ! ಆದರೆ ನಟಿಸಿ ಪ್ರಯೋಜನವಿಲ್ಲ. ನಿನ್ನ ಮನಸ್ಸಿನಲ್ಲಿರುವುದು ನನಗೆ ಗೊತ್ತು.

ಕಮಲ—ನಿಜ ಹೇಳು. ಎರಡುದಿನ ವಿಪಿನಬಾಬುವನ್ನು ನೀನು ನೋಡದಿದ್ದರೆ........

ಶೈಲಜೆ ಹೆಮ್ಮೆಯಿಂದ, "ಅದು ಅವರಿಗೆ ಸಾಧ್ಯವೇ ಇಲ್ಲ."

ಮದುವೆಯಾದ ಹೊಸದರಲ್ಲಿ ಮುದುಕರ ಕಣ್ಣು ತಪ್ಪಿಸಿ ಆತನು ತನ್ನನ್ನು ನೋಡಲು ಬರುತ್ತಿದ್ದುದೂ, ಊಟ ಮಾಡುವಾಗ ಕನ್ನಡಿಯಲ್ಲಿ ಕದ್ದು ನೋಡುತ್ತಿದ್ದುದೂ, ಎಲ್ಲವನ್ನೂ ಹೇಳಿದಳು. ದಿನವೆಲ್ಲಾ ಕೆಲಸ ಮಾಡಬೇಕಾಗಿ ಬಂದಾಗ ಒಂದೊಂದು ಸಲ ತಪ್ಪಿಸಿಕೊಂಡು ಆತನು ಮನೆಗೆ ಬರುತ್ತಿದ್ದನು. ಒಮ್ಮೆ ಪಾಟ್ಣಕ್ಕೆ ಹೋಗಬೇಕಾಯಿತು. "ನನ್ನನ್ನು ಬಿಟ್ಟು ಹೋಗುವಿರಾ?" ಎಂದು ಶೈಲಜೆ ಕೇಳಿದಾಗ "ಹೋಗುತ್ತೇನೆ," ಎಂದನು. ಶೈಲಜೆ ಕೋಪದಿಂದ ಸುಮ್ಮನಾದರೂ, ಆತನು ಪ್ರಯಾಣಕ್ಕೆ ಸಿದ್ಧನಾಗಿ ಹೊರಡಲು, ಅಳಲಾರಂಭಿಸಿದಳು. ಅದರಿಂದ ತಲೆ ನೋವೆಂದು ನೆಪಹೇಳಿ ವಿಪಿನ ನಿಲ್ಲಬೇಕಾಯಿತು.

ಹೇಳಹೇಳುತ್ತ ಶೈಲಜೆಗೆ ಹೊತ್ತೇ ತಿಳಿಯಲಿಲ್ಲ. ಬಾಗಿಲು ಸದ್ದಾಗಲು ವಿಪಿನಬಾಬು ಬಂದನೆಂದು ತಿಳಿದು ಎದ್ದಳು. ಮಾತನಾಡುತ್ತಿರುವಾಗಲೂ ಅವಳ ಲಕ್ಷ್ಯವೆಲ್ಲಾ ಗಂಡನ ಪಾದಗಳ ಸದ್ದಿನ ಕಡೆಗೇ ಇತ್ತು.

ಮೊದಮೊದಲು ಕಮಲೆಯ ಮನಸ್ಸಿನ ಸ್ಥಿತಿಯೂ ಹೀಗೇ ಇತ್ತು. ದಾಂಪತ್ಯ ಸುಖಕ್ಕಾಗಿ ಅವಳ ಹೃದಯವೂ ಮಿಡುಕುತ್ತಿತ್ತು. ಸ್ಕೂಲು ಬಿಟ್ಟು ರಮೇಶನಲ್ಲಿಗೆ ಬಂದಾಗ ಅವಳ ಜೀವ ಆನಂದದಿಂದ ನರ್ತಿಸುತ್ತಿತ್ತು. ಅವಳಿಗೆ ಶೈಲಜೆಯ ಮಾತಿನಿಂದ ತನ್ನ ಹೃದಯದ ಅರಿವುಂಟಾಯಿತು. ಆದರೆ ಮನಸ್ಸಿನಲ್ಲಿ ಶಾಶ್ವತವಾಗಿ ನಿಲ್ಲುವ ಚಿತ್ರವೊಂದೂ ಇರಲಿಲ್ಲ. ಶೈಲಜೆ ವಿಪಿನರಂತೆ ತಾನೂ ರಮೇಶನೂ ಎಂದೂ ಇರಲಿಲ್ಲವಾಗಿ, ರಮೇಶನಿಂದ ದೂರವಾಗಿರುವುದು ಕಷ್ಟವೆನ್ನಿಸಲಿಲ್ಲ. ರಮೇಶನೂ ತನ್ನನ್ನು ನೋಡಲು ಆತುರನಾಗಿರುವನೆಂದು ಅವಳು ಭಾವಿಸಲಿಲ್ಲ.

ಅಂದು ಭಾನುವಾರ. ವಿಪಿನ ಬಾಬುವಿಗೆ ರಜಾದಿನ. ಶೈಲಜೆಗೆ ಅವನನ್ನು ಬಿಟ್ಟಿರಲೂ ಮನಸ್ಸಿಲ್ಲ; ಕಮಲೆಯನ್ನು ಒಂಟಿಯಾಗಿ ಬಿಟ್ಟು ಹೋಗಲೂ ಇಷ್ಟವಿಲ್ಲ. ಆದುದರಿಂದ ರಮೇಶನ ಬಳಿಗೆ ಅವಳನ್ನು ಕರೆದೊಯ್ಯಲು ನಿರ್ಧರಿಸಿದಳು. ಚಕ್ರವರ್ತಿಗೆ ಊರಿನಲ್ಲೇನೋ ಕೆಲಸ

ವಿದ್ದುದರಿಂದ ಬೀದಿ ಬಾಗಿಲನ್ನು ಹಾಕಿಕೊಂಡು ಹೊರಟು ಹೋದನು.

ನದಿಯಿಂದ ಸ್ನಾನಮಾಡಿ ಬಂದ ಕೂಡಲೆ ಶೈಲಜೆ ಕಮಲೆಯ ಕೂದಲನ್ನು ಒಣಗಿಸಿ ಅಂದವಾಗಿ ಜಡೆ ಹಾಕಿದಳು. ಬಲವಂತದಿಂದ ಕಮಲೆ ಒಳ್ಳೆಯ ಸೀರೆಯನ್ನುಟ್ಟುಕೊಳ್ಳ ಬೇಕಾಯಿತು. ಊಟವಾಗುತ್ತಲೇ ಶೈಲಜೆ ಕಮಲೆಯನ್ನು ಹೊರಗಿನ ಕೋಣೆಗೆ ಬರಹೇಳಿದಳು. ಕಮಲೆಗೆ ನಾಚಿಕೆಯೇನೂ ಇರದಿದ್ದರೂ ಶೈಲಜೆ ಕರೆದಾಗ ಹೋಗಲು ಹಿಂಜರಿದಳು. ಶೈಲಜೆ ಪತಿಯನ್ನು ಸಲಿಗೆಯಿಂದ ಕಂಡ ಹಾಗೆ ತನಗೆ ಸಾಧ್ಯವಿಲ್ಲವೆಂದು ತಿಳಿದಳು. ಪ್ರೇಮಭಿಕ್ಷೆ ಬೇಡಲು ಅವಳು ಸಿದ್ಧಳಾಗಿರಲಿಲ್ಲ. ಅಭಿಮಾನದಿಂದ ತನ್ನ ಮಾತನ್ನು ಕಮಲೆ ತಿರಸ್ಕರಿಸಿದಳೆಂದು ಶೈಲಜೆ ತರ್ಕಿಸಿದಳು. ಇಷ್ಟು ದಿನ ರಮೇಶ ಕಮಲೆಯನ್ನು ನೋಡಲು ಪ್ರಯತ್ನಿಸಿರಲಿಲ್ಲ.

ಶೈಲಜೆಯ ತಾಯಿ ನಿದ್ರೆಮಾಡುತ್ತಿದ್ದಳು. ಶೈಲಜೆ ವಿಪಿನನನ್ನು ಕರೆದು, "ಕಮಲೆ ರಮೇಶನನ್ನು ಕೂಗಿದಳೆಂದು ಹೇಳಿ" ಎಂದಳು. ವಿಪಿನ ಮಿತ ಭಾಷಿಯಾದರೂ ಹೆಂಡತಿಯ ಮಾತಿಗೆ ಇಲ್ಲವೆನ್ನಲಾರದೆ ಹೋದನು.

ರಮೇಶ ಕಾಲಮೇಲೆ ಕಾಲು ಹಾಕಿಕೊಂಡು ಮಲಗಿ ಪತ್ರಿಕೆಯನ್ನು ಓದುತ್ತಿದ್ದನು. ಪತ್ರಿಕೆಯೆಲ್ಲಾ ಮುಗಿದು ಜಾಹಿರಾತುಗಳನ್ನೋದುತ್ತಿರುವಾಗ ವಿಪಿನ ಬಂದನು.

"ಬನ್ನಿ ವಿಪಿನ ಬಾಬು, ಬನ್ನಿ" ಎಂದನು.

ವಿಪಿನ ಕುಳಿತುಕೊಳ್ಳದೆ ತಲೆ ಕೆರೆಯುತ್ತಾ, "ನಿಮ್ಮನ್ನು ಆಕೆ ಕರೆಯುತ್ತಾರೆ" ಎಂದನು

"ಯಾರು ? ಕಮಲೆಯೆ ?"

"ಹೌದು."

ರಮೇಶನಿಗೆ ಆಶ್ಚರ್ಯವಾಯಿತು. ಕಮಲೆ ತನ್ನ ಪತ್ನಿಯೇ ಆಗಬೇಕೆಂದು ನಿರ್ಧರಿಸಿದ್ದರೂ, ನಾಲ್ಕು ದಿನ ವಿರಾಮವಿದೆಯೆಂದುಕೊಂಡಿದ್ದನು. ಕಮಲೆ ಸಹಧರ್ಮಿಣಿಯಾಗುವ ದೃಶ್ಯ ಮನವೋಹಕವಾಗಿದ್ದರೂ ಅವಳನ್ನು ಒಲಿಸಿ ಕೊಳ್ಳುವುದು ಹೇಗೆಂಬುದೇ ಸಮಸ್ಯೆಯಾಗಿತ್ತು.

ಪರಕೀಯನಂತೆ ವರ್ತಿಸುತ್ತಿದ್ದವನು ತಟ್ಟನೆ ನಡತೆಯನ್ನು ಬದಲಾಯಿಸ ಬೇಕಾಗಿತ್ತು. ಆದರಿಂದಲೇ ಬೇರೆ ಮನೆ ಗೊತ್ತುಮಾಡಲು ತಡ ಮಾಡಿದ್ದನು.

ವಿಪಿನನ ಮಾತು ಕೇಳಿ, ಕಮಲೆ ತನ್ನಿಂದಾಗ ಬೇಕಾದ ಯಾವುದೋ ಕೆಲಸಕ್ಕಾಗಿ ಹೇಳಿ ಕಳುಹಿಸಿದಳೆಂದು ವಿವೇಕ ಬೋಧಿಸುತ್ತಿದ್ದರೂ, ರಮೇಶನ ಹೃದಯ ಬಡಿದು ಕೊಳ್ಳಲಾರಂಭಿಸಿತು. ಪತ್ರಿಕೆಯನ್ನು ಕೆಳಗಿಟ್ಟು, ದುಂಬಿಗಳ ಝೇಂಕಾರ ಮಾತ್ರವಿದ್ದ ಆ ಮಧ್ಯಾಹ್ನ ರಮೇಶ ಪ್ರಿಯೆಯನ್ನು ಹುಡುಕಿಕೊಂಡು ಹೋಗುವ ಪ್ರಣಯಿಯಂತೆ ವಿಪಿನನ ಹಿಂದೆ ಹೋದನು. ವಿಪಿನ ಒಂದು ಬಾಗಿಲನ್ನು ತೋರಿಸಿ ಮರೆಯಾದನು.

ಶೈಲಜೆ ಗಂಡನೊಡನೆ ಮಾತನಾಡಲು ಹೋದಳೆಂದು ತಿಳಿದು ಕಮಲೆ ತೋಟವನ್ನು ನೋಡುತ್ತಾ ಹೊರಬಾಗಿಲಿನಲ್ಲಿ ಕುಳಿತಿದ್ದಳು. ಶೈಲಜೆಯ ಮಾತುಗಳಿಂದ ಕಮಲೆಯಲ್ಲಿಯೂ ಪ್ರೇಮ ಎಚ್ಚತ್ತಿತ್ತು. ಹೊರಗಡೆ ತಂಗಾಳಿ ಎಲೆಗಳನ್ನದುರಿಸುತ್ತಿದ್ದಂತೆ ನಿಟ್ಟುಸಿರು ಕಮಲೆಯ ಹೃದಯದಲ್ಲಿದ್ದ ಮೂಕ ಶೋಕವನ್ನು ತೋರಿಸುತ್ತಿತ್ತು.

ತಟ್ಟನೆ ರಮೇಶ, "ಕಮಲಾ," ಎನ್ನಲು ಬೆಚ್ಚಿದಳು. ಎಂದೂ ನಾಚಿಕೊಳ್ಳದ ಕಮಲೆ ತಲೆ ತಗ್ಗಿಸಿದಳು. ಮುಖವೆಲ್ಲಾ ಕೆಂಪಾಯಿತು. ಹೊಸ ಸೀರೆಯನ್ನುಟ್ಟು ಸಿಂತಿದ್ದ ಕಮಲೆ ರಮೇಶನಿಗೆ ಹೊಸ ವ್ಯಕ್ತಿ ಯಾಗಿ ತೋರಿದಳು. ಅವಳ ರೂಪಕ್ಕೆ ಮಾರುಹೋಗಿ ಮೆಲ್ಲಗೆ, "ನನ್ನನ್ನು ಕರೆದೆಯಾ ಕಮಲಾ?" ಎಂದನು. ಕಮಲೆ ಪೆಟ್ಟು ಬಿದ್ದಂತೆ "ಇಲ್ಲ ಖಂಡಿತವಾಗಿ ಇಲ್ಲ. ನಾನೇತಕ್ಕೆ ಕರೆಯುತ್ತೇನೆ?" ಎಂದು ಬಿರುಸಾಗಿ ಕೇಳಿದಳು.

"ತಪ್ಪೇನು, ಕಮಲಾ?"

"ನಾನು ಕರೆಯಲಿಲ್ಲ-"

"ನೀನು ಕರೆಯದೆಯೇ ಬಂದಿದ್ದೇನೆ. ನನ್ನನ್ನು ಹೊರಕ್ಕೆ ನೂಕಿ ಸುವೆಯಾ?"

"ನೀವು ಬಂದಿರುವುದು ಎಲ್ಲರಿಗೂ ತಿಳಿದು ಅವಮಾನವಾಗುತ್ತೆ.

ಹೊರಟು ಹೋಗಿ. ನಾನು ಕರೆಯಲಿಲ್ಲ."

ಅವಳ ಕೈಹಿಡಿದು ರಮೇಶ, "ನೀನೇ ನನ್ನ ಕೊಠಡಿಗೆ ಬಾ. ಅಲ್ಲಿ ಯಾರೂ ಇಲ್ಲ," ಎಂದನು.

"ನಡುಗುತ್ತಾ ಕೈ ಕಿತ್ತುಕೊಂಡು ಕಮಲೆ ಪಕ್ಕದ ಕೊರಡಿಗೆ ಓಡಿ ಬಾಗಿಲು ಹಾಕಿಕೊಂಡಳು.

ಎಲ್ಲಾ ಹೆಂಗಸರ ತಂತ್ರವೆಂದು ರಮೇಶನಿಗೆ ತಿಳಿಯಿತು. ತನ್ನ ಕೋಣೆಗೆ ಹೋಗಿ ಪತ್ರಿಕೆಯನ್ನೋದಲಾರಂಭಿಸಿದನು. ಏನೂ ಅರ್ಥ ವಾಗಲಿಲ್ಲ. ಗಾಳಿಯೆದುರಿನ ಮೋಡಗಳಂತೆ ಅನೇಕ ಆಲೋಚನೆಗಳು ಅವನ ಮನಸ್ಸಿನಲ್ಲಿ ಹಾದುಹೋದುವು.

ಶೈಲಜೆ ಕಮಲೆಯ ಕೊರಡಿಯ ಬಾಗಿಲು ತಟ್ಟಿದಳು. ಉತ್ತರವಿಲ್ಲ. ಕಿಟಕಿಯಿಂದ ಕೈಚಾಚಿ ಅಗಣಿಯನ್ನು ತೆಗೆದು ಒಳಹೊಕ್ಕಳು. ಕಮಲೆ ನೆಲದ ಮೇಲೆ ಬಿದ್ದು ಮುಖಮುಚ್ಚಿಕೊಂಡು ಅಳುತ್ತಿದ್ದಳು. ಅರ್ಥ ವಾಗದೆ ಶೈಲೆ ಅವಳ ಬಳಿ ಕುಳಿತು, "ಏಕಮ್ಮಾ? ಏನಾಯಿತು," ಎಂದು ಮೃದುವಾಗಿ ಕೇಳಿದಳು.

"ಆತನನ್ನೇಕೆ ಬರಹೇಳಿದೆ? ಬಹಳ ಕೆಟ್ಟ ಕೆಲಸ ಮಾಡಿದೆ." ಎಂದು ಕಮಲೆ ಹೇಳಿದಳು. ತನ್ನ ದುಃಖದ ಕಾರಣ ಕಮಲೆಗೇ ತಿಳಿ ದಿರಲಿಲ್ಲ. ಅನೇಕ ದಿನಗಳಿಂದ ಹುಗಿದಿದ್ದ ದುಃಖ ಹೊರಹೊಮ್ಮಿತ್ತು. ಅವಳು ಸ್ವಪ್ನ ಸಾಮ್ರಾಜ್ಯವನ್ನು ಸೃಷ್ಟಿಸಿಕೊಳ್ಳುತ್ತಿದ್ದಾಗ ರಮೇಶ ಬಂದಿ ದ್ದನು. ಅವನ ಒರಟು ನಡತೆ ಆ ಸುಖ ಸ್ವಪ್ನವನ್ನು ಒಡೆದಿತ್ತು. ರಜ ದಲ್ಲಿಯೂ ಸ್ಕೂಲಿನಲ್ಲೇ ಇಡಲು ಪ್ರಯತ್ನಿಸಿದುದೂ, ದೋಣಿಯಲ್ಲಿ ಅಲಕ್ಷ್ಯದಿಂದ ಕಾಣುತ್ತಿದ್ದುದೂ, ಇವೇ ಮುಂತಾದ ನೆನಪುಗಳು ನುಗ್ಗಿ ಬಂದುವು. ತಾನೇ ಪ್ರೀತಿಯಿಂದ ಅರಸಿ ಬರುವುದಕ್ಕೂ, ಹೇಳಿಕಳುಹಿ ಸಿದಾಗ ಬರುವುದಕ್ಕೂ ಇದ್ದ ಅನಂತ ವ್ಯತ್ಯಾಸ ಈಗತಾನೇ ಅವಳಿಗೆ ತಿಳಿದಿತ್ತು. ಆದರೆ ಕಮಲೆಗೂ ರಮೇಶನಿಗೂ ನಡುವೆ ಅಸಮಾಧಾನ ವಿರಬಹುದೆಂಬುದೇ ಶೈಲೆಗೆ ಅರ್ಥವಾಗಲಿಲ್ಲ.

ಕಮಲೆಯ ತಲೆಯನ್ನೆತ್ತಿ, "ರಮೇಶಬಾಬು ಏನಾದರೂ ಬಯ್ದರೆ? ನನ್ನ ಯಜಮಾನರು ಕರೆದುದು ಅವರಿಗೆ ಅಸಮಾಧಾನವಾಗಿರಬಹುದು.

ಅದೆಲ್ಲಾ ನನ್ನ ಕೆಲಸವೆಂದು ನೀನು ಹೇಳಬೇಕಾಗಿತ್ತು " ಎಂದಳು.

"ಇಲ್ಲ. ಆತನೇನೂ ಹೇಳಲಿಲ್ಲ. ಏತಕ್ಕೆ ಕರೆಕಳುಹಿಸಿದೆ?"

"ತಪ್ಪಾಯಿತು, ಕ್ಷಮಿಸು."

ಕಮಲೆ ಎದ್ದು ಅವಳನ್ನಪ್ಪಿಕೊಂಡು," ಓಡು ವಿಪಿನಬಾಬು ಕಾದಿದ್ದಾರೆ," ಎಂದಳು.

ರಮೇಶ ಪತ್ರಿಕೆಯನ್ನು ಬಿಸುಟು, "ನಾಳೆ ಕಲ್ಕತ್ತೆಯ ಕೆಲಸವನ್ನು ಮುಗಿಸಿಕೊಂಡು ಬರುತ್ತೇನೆ. ಕಮಲೆಯನ್ನು ಬೇಗ ವರಿಸದಿದ್ದರೆ ನಾನು ಪಾಪಿಯಾಗುತ್ತೇನೆ," ಎಂದುಕೊಂಡನು.

## ಅಧ್ಯಾಯ ೩೩

ಕಲ್ಕತ್ತೆಯಲ್ಲಿ ಬೇಗ ಕೆಲಸ ಮುಗಿಸಿಕೊಂಡು, ಕಲುತೊಲದಲ್ಲಿ ಕಾಲಿಡದೆ ಹಿಂದಿರುಗಬೇಕೆಂಬುದೇ ರಮೇಶನ ಉದ್ದೇಶವಾಗಿತ್ತು. ದರ್ಜಿಪುರಕ್ಕೇ ಹೋದನು. ಅಲ್ಲಿ ಕೆಲಸ ಹೆಚ್ಚಿಲ್ಲದೆ ವಿರಾಮವಿತ್ತು. ಗುರುತಾದವರು ಸಿಕ್ಕದಂತೆ ಪ್ರಯತ್ನಿಸುತ್ತಿದ್ದನು.

ಆದರೆ ಪರಿಚಿತಸ್ಥಳ ಹೃದಯವನ್ನು ಸೂರ್ಪಡಿಸಿತ್ತು. ಹಳ್ಳಿಯ ಸರಳ ಜೀವನದಲ್ಲಿ ಕಮಲೆಯ ಸೌಂದರ್ಯ ಮೋಹಕವಾಗಿತ್ತು. ಪಟ್ಟಣದಲ್ಲಿ ಮಾಸುತ್ತಿತ್ತು. ದರ್ಜಿಪುರದಲ್ಲಿ ಕಮಲೆಯ ನೆನಪು ಮಾಯವಾಗುತ್ತಿತ್ತು. ಹೇಮನಳಿನಿಯ ವಿಚಾರ ಮರೆಯಲು ಸಾಧ್ಯವಾಗಲಿಲ್ಲ. ಆ ಪ್ರಯತ್ನದಲ್ಲಿ ಅವಳ ನೆನಪು ಹೆಚ್ಚಾಗತೊಡಗಿತು. ಇಷ್ಟವಿದ್ದರೆ ಜಾಗ್ರತೆಯಾಗಿ ಕೆಲಸ ಮುಗಿಸಿ ಹಿಂದಿರುಗ ಬಹುದಾಗಿತ್ತು. ಮುಗಿಸಿ, ಮರುದಿನ ಅಲಹಾಬಾದಿಗೆ ಹೋಗಿ ನಂತರ ಘಾಸಿಪುರಕ್ಕೆ ಹೋಗಬೇಕೆಂದು ನಿರ್ಧರಿಸಿದನು. ಒಂದು ಬಾರಿ, ಯಾರೂ ಅರಿಯದಂತೆ ಕಲುತೊಲಕ್ಕೆ ಹೋಗಿ ಬರಬೇಕೆಂದು ಆಸೆಯಾಯಿತು. ಹೇಮನಳಿನಿಗೆ ಒಂದು ಕಾಗದ ಬರೆದನು. ಕಮಲೆಯೊಡನೆ ತನಗುಂಟಾದ ಸಂಬಂಧವನ್ನೂ, ಹಿಂತಿರುಗಿದ ಮೇಲೆ ಪತ್ನಿಯಾಗಿ ಅವಳನ್ನು ಸ್ವೀಕರಿಸಬೇಕೆಂದಿದ್ದುದನ್ನೂ ವಿವರವಾಗಿ ಬರೆದನು. ಅವಳಸೆಯನ್ನು ಆಸಂಪೂರ್ಣ

ವಾಗಿ ಬಿಡುವ ಮೊದಲು ಮನಸ್ಸಿನಲ್ಲಿದ್ದ ದುಃಖವನ್ನೆಲ್ಲಾ ಅವಳ ಮುಂದೆ ತೋಡಿಕೊಂಡಿದ್ದನು.

ವಿಳಾಸ ಬರೆಯದೆ ಕಾಗದವನ್ನು ಲಕ್ಕೋಟೆಯಲ್ಲಿ ಹಾಕಿದನು. ಹೇಮನಳಿನಿಯ ಸೇವಕರಲ್ಲನೇಕರು ರಮೇಶನಿಗೆ ಆಪ್ತರಾಗಿದ್ದರು. ಸಂಜೆಯಾದಮೇಲೆ ಹೋಗಿ ಹೇಗಾದರೂ ದೂರದಿಂದ ಹೇಮನಳಿನಿಯನ್ನು ನೋಡಿ ಸೇವಕನ ಸಹಾಯದಿಂದ ಅವಳಿಗೆ ಕಾಗದ ತಲುಪಿಸಲು ನಿಶ್ಚಯಿಸಿದನು.

ಸಂಜೆಯಾಗುತ್ತಲೇ ಕಾಲು ನಡುಗುತ್ತಿರಲು, ಹಳೆಯ ನೆನಪುಗಳಿಂದ ಹೃದಯ ಬಡಿದುಕೊಳ್ಳುತ್ತಿರಲು ಕಾಗದ ತೆಗೆದುಕೊಂಡು ರಮೇಶ ಹೊರಟನು. ಬಾಗಿಲು ಕಿಟಕಿಗಳನ್ನು ಮುಚ್ಚಿದ್ದರು. ತಟ್ಟಿದಾಗ ಒಬ್ಬ ಆಳು ಬಾಗಿಲು ತೆಗೆದನು.

ರಮೇಶ—ನೀನು 'ಸುಖ'ನಲ್ಲವೆ?

"ಹೌದು"

ರಮೇಶ—ಯಜಮಾನರೆಲ್ಲಿ?

ಸುಖ—ಹವಾ ಬದಲಾಯಿಸಲು ಉತ್ತರದೇಶಕ್ಕೆ ಮಗಳೊಡನೆ ಹೋದರು.

ರಮೇಶ—ಎಲ್ಲಿಗೆ?

ಸುಖ—ಗೊತ್ತಿಲ್ಲ.

ರಮೇಶ—ಬೇರೆ ಯಾರಾದರೂ ಹೋದರೋ?

ಸುಖ—ನಳಿನಬಾಬು ಹೋದರು.

ರಮೇಶ—ಅವರು ಯಾರು?

ಸುಖ—ನನಗೆ ಗೊತ್ತಿಲ್ಲ.

ನಳಿನಬಾಬುವಿನ ಹೆಸರು ಕೇಳಿ ರಮೇಶನಿಗೆ ಅಸಮಾಧಾನವಾಯಿತು. ತಾನು ಹೇಮನಳಿನಿಯನ್ನು ತ್ಯಜಿಸಿದ್ದರೂ ಬೇರೆಯವರಿಗೆ ಅವಳನ್ನು ಬಿಟ್ಟುಕೊಡಲು ಸಿದ್ಧನಾಗಿರಲಿಲ್ಲ.

ರಮೇಶ—ಹೊರಡುವಾಗ ಅಮ್ಮಾವರು ಸ್ವಸ್ಥವಾಗಿದ್ದರೋ?

ಸುಖ—ಇದ್ದರು.

ಈ ಉತ್ತರ ರಮೇಶನಿಗೆ ಪ್ರಿಯವಾದುದೆಂದು ಸುಖ ತಪ್ಪುಭಾವನೆಯಲ್ಲಿದ್ದನು.

ರಮೇಶ—ನಾನು ಮೇಲೆ ಹೋಗಬೇಕಾಗಿತ್ತು.

ಸುಖ ದೀಪದೊಡನೆ ಮುಂದೆ ಹೋದನು. ರಮೇಶ ಕೊಠಡಿಗಳಲ್ಲೆಲ್ಲಾ ಓಡಾಡಿದನು. ಎಲ್ಲಾ ಮೊದಲಿನಂತೆಯೇ ಇತ್ತು. ನಳಿನಬಾಬು ಮಾತ್ರ ಹೊಸಬನು. ತಾನು ನಳಿನಿಯೊಡನೆ ಆ ದಿನ ಒಂದು ಕಿಟಕಿಯ ಹತ್ತಿರ ನಿಂತಿದ್ದನು. ಪ್ರತಿದಿನವೂ ಸಂಜೆ ಸೂರ್ಯಕಿರಣಗಳು ಸ್ಥಳವನ್ನು ಬೆಳಗುವುವು. ಹೇಮನಳಿನಿ ಬೇರೊಬ್ಬನೊಡನೆ ಅಲ್ಲಿ ನಿಲ್ಲುವಳೇ? ರಮೇಶನ ಆತ್ಮಾಭಿಮಾನಕ್ಕೆ ಪೆಟ್ಟು ಬಿದ್ದಂತಾಯಿತು. ಮಾರನೆಯ ದಿನ ಅಲಹಾಬಾದಿಗೆ ಹೋಗುವ ಬದಲು ನೇರವಾಗಿ ಘಾಸಿಪುರಕ್ಕೇ ಹೋದನು.

## ಅಧ್ಯಾಯ ೩೪

ರಮೇಶ ಹೊರಟು ಹೋಗಿದ್ದ ಒಂದು ತಿಂಗಳು ಕಮಲೆಗೆ ಒಂದು ಯುಗವಾಗಿ ತೋರಿತು. ಶೈಲಜೆಯ ಪ್ರೇಮ ಪ್ರಕೃತಿ ಅವಳಲ್ಲಿ ಸುಪ್ತವಾಗಿದ್ದ ಪ್ರೇಮವನ್ನು ತಟ್ಟನೆ ಎಚ್ಚರಗೊಳಿಸಿತ್ತು. ರಮೇಶನ ಅಲಸಿಕೆಯಿಂದ ಬೇಸತ್ತ ಚಕ್ರವರ್ತಿ ತಾನೇ ಗಂಗಾನದಿಯ ದಡದ ಮೇಲಿದ್ದ ಒಂದು ಚಿಕ್ಕ ಬಂಗಲೆಯನ್ನು ಬಾಡಿಗೆಗೆ ಗೊತ್ತುಮಾಡಿ, ಸಾಮಾನುಗಳನ್ನೂ ತಂದನು. ರಮೇಶ ಹಿಂದಿರುಗಿ ಬರುವ ವೇಳೆಗೆ ಅವರದೇ ಒಂದು ಮನೆ ಸಿದ್ಧವಾಗಿತ್ತು. ಮನೆಯ ಸುತ್ತಲೂ ದೊಡ್ಡ ಮರಗಳೂ ತೋಟಕ್ಕೆ ಬೇಕಾಗುವಷ್ಟು ನೆಲವೂ ಇದ್ದುವು. ನದಿ ಬತ್ತಿ ಬರಿದಾಗಿದ್ದ ಮರಳಿನಲ್ಲಿ ಕಲ್ಲಂಗರಿ ಬಳ್ಳಿಗಳು ಹಬ್ಬಿದ್ದುವು. ಮನೆಯ ದಕ್ಷಿಣದಲ್ಲಿ ಒಂದು ದೊಡ್ಡ ನಿಂಬೆ ಗಿಡವಿತ್ತು.

ಮನೆ ಬರಿದಾಗಿ ಬಹಳ ದಿನಗಳಾಗಿದ್ದುದರಿಂದ ಧೂಳು, ಕಸ ತುಂಬಿದ್ದುವು. ತೋಟವೂ ಕೊಳಕಾಗಿತ್ತು. ಕಮಲೆ ಇದೊಂದನ್ನೂ ಗಮನಿಸಲಿಲ್ಲ. ತನ್ನದೇ ಮನೆಯೆಂಬ ಉಲ್ಲಾಸದಲ್ಲಿ ಎಲ್ಲವೂ ಅವಳ

ಕಣ್ಣಿಗೆ ಅಂದವಾಗಿದ್ದುವು. ಮನೆಯನ್ನು ವಾಸಕ್ಕೆ ಸರಿಪಡಿಸಬೇಕೆಂದು, ಸಂತೋಷದಿಂದ ದಿನವೆಲ್ಲಾ ಗುಡಿಸಿ ಸಾರಿಸಿ ವ್ಯವಸ್ಥೆಮಾಡಿದಳು.

ರಮೇಶನಿಗೆ ಕಮಲೆ ಪಂಜರದಿಂದ ತಪ್ಪಿಸಿಕೊಂಡ ಹಕ್ಕಿಯಂತೆ ಕಂಡಳು. ಮನೆಯ ಯಜಮಾನಿಯಾಗಿ ಹೊಸ ಗಾಂಭೀರ್ಯವನ್ನು ಪಡೆದಿದ್ದ ಅವಳನ್ನು ನೋಡನೋಡುತ್ತ ಅವನಿಗೆ ಆಶ್ಚರ್ಯವೂ ಸಂತೋಷವೂ ಹೆಚ್ಚುತ್ತ ಹೋದುವು.

"ಏನು ಮಾಡುತ್ತೀ. ಕಮಲ? ಆಯಾಸವಾಗುವುದಿಲ್ಲವೆ?"

ಕಮಲೆ ನಗುತ್ತಾ "ಇಲ್ಲ"ವೆಂದಳು. ರಮೇಶ ತನ್ನ ಕೆಲಸದಲ್ಲಿ ಕುತೂಹಲ ತೋರಿಸಿದ್ದು ಅವಳಿಗೆ ಸಂತೋಷವನ್ನುಂಟುಮಾಡಿತು.

ರಮೇಶ ಪುನಃ "ಊಟವಾಯಿತೆ, ಕಮಲಾ?" ಎಂದನು.

"ಎಷ್ಟೋ ಹೊತ್ತಾಯಿತು."

ರಮೇಶನಿಗೆ ಈ ವಿಚಾರ ಮೊದಲೇ ತಿಳಿದಿತ್ತು. ಕಮಲೆಗೂ ಬೇಸರವಾಗಲಿಲ್ಲ.

"ಒಬ್ಬಳೇ ಎಲ್ಲಾ ಮಾಡುತ್ತೀ! ನನಗೂ ಏನಾದರೂ ಕೆಲಸ ಹೇಳು."

ಕಮಲೆ ನಕ್ಕು, "ಇದು ಗಂಡಸರ ಕೆಲಸವಲ್ಲ," ಎಂದಳು.

"ನೀನು ಏನು ಹೇಳಿದರೂ ನಿಜ! ಉಮಾವನಿಗೆ ಮಾತ್ರ ಕೆಲಸ ಹೇಳುತ್ತೀಯಲ್ಲಾ. ನಾನು ಅಷ್ಟು ಅಪ್ರಯೋಜಕನೆ?"

"ಏನೋ ಗೊತ್ತಿಲ್ಲ. ಆದರೆ ನೀವು ಅಡುಗೆ ಮನೆ ಮುಸಿಯನ್ನು ಗುಡಿಸುವಿರೆಂದು ನೆನಸಿಕೊಂಡರೇನೇ ನಗು ಬರುತ್ತೆ. ಬಹಳ ಧೂಳು! ಸ್ವಲ್ಪ ಹೊರಗೆ ಹೋದರೆ ವಾಸಿ."

ರಮೇಶ—"ನಿನಗಿಲ್ಲವೆ ಧೂಳು ?"

"ನನಗಂತೂ ವಿಧಿಯಿಲ್ಲ. ನೀವೇಕಿರಬೇಕು?"

ರಮೇಶ ತಗ್ಗಿದ ದನಿಯಲ್ಲಿ. "ನಿನ್ನ ಕಷ್ಟ ಸುಖಗಳಲ್ಲಿ ನಾನೂ ಭಾಗಿಯಲ್ಲವೆ ?" ಎಂದನು.

ಕಮಲೆಯ ಮುಖ ಕೆಂಪಾಯಿತು. ಉಮೇಶನನ್ನು ಕೂಗಿ, "ಇಲ್ಲಿ ಬಹಳ ಧೂಳು. ಪೊರಕೆ ಕೊಟ್ಟು ಇನ್ನೊಂದು ಬಿಂದಿಗೆ ನೀರು ತಾ,"

ಎಂದು ಗುಡಿಸಲು ಪ್ರಾರಂಭಿಸಿದಳು.

"ನೀನೇ ಗುಡಿಸಬೇಕೇ, ಕಮಲಾ?" ಎಂದು ರಮೇಶ ಕೂಗಿಕೊಂಡನು. ಹಿಂದಿನಿಂದ ಚಕ್ರವರ್ತಿ, "ತಪ್ಪೇನು? ನೀವು ಇಂಗ್ಲೀಷು ಓದಿ ಎಲ್ಲರೂ ಒಂದೇ ಎಂದು ಬಾಯಲ್ಲಿ ಹೇಳುತ್ತೀರಿ. ಗುಡಿಸುವುದು ಅವಮಾನವಾದರೆ ಆಳಿಗೆ ಆ ಕೆಲಸ ಹೇಳಬಹುದೆ? ನಾನು ವಿದ್ಯಾವಂತನಲ್ಲ. ಆದರೆ ನನ್ನ ಅಭಿಪ್ರಾಯದಲ್ಲಿ ಹೆಂಗಸು ಗುಡಿಸುತ್ತಿದ್ದರೆ ಸೂರ್ಯರಶ್ಮಿಯಂತೆ ಕಾಣಿಸುತ್ತಾಳೆ. ತೋಟದ ಕಸ ತೆಗೆದಾಯಿತಮ್ಮಾ. ತರಕಾರಿ ಎಲ್ಲಿ ಹಾಕಬೇಕೆಂದು ಹೇಳಿದರೆ ಪಾತಿಗಳನ್ನು ಮಾಡುತ್ತೇನೆ."

"ಒಂದು ನಿಮಿಷ ತಾಳಿ, ಮಾವಾ. ಈ ಕೋಣೆ ಗುಡಿಸಿ ಬರುತ್ತೇನೆ." ಅನಂತರ ಮಾವನೊಡನೆ ತೋಟಕ್ಕೆ ಹೋದಳು. ದಿನವೆಲ್ಲಾ ದುಡಿದರೂ ಅವಳಿಗೆ ತೃಪ್ತಿಯಾಗುವಷ್ಟು ಮನೆ ಚೊಕ್ಕಟವಾಗಲಿಲ್ಲ. ಇಷ್ಟವಿಲ್ಲದಿದ್ದರೂ ರಮೇಶ ಇನ್ನೂ ಒಂದು ರಾತ್ರಿಯನ್ನು ಮಾವನ ಮನೆಯಲ್ಲೇ ಕಳೆಯಬೇಕಾಯಿತು. ಕಮಲೆಯೊಡನೆ ತಾನು ಏಕಾಂತದಲ್ಲಿ ಮಾತನಾಡುವ ದೃಶ್ಯವನ್ನು ಕಲ್ಪಿಸಿಕೊಂಡು ಆ ರಾತ್ರಿ ಆನಂದಪಡುತ್ತಿದ್ದನು. ಮಾರನೆಯ ದಿನ ವಕೀಲಿ ವೃತ್ತಿಗೆ ಅಪ್ಪಣೆ ಪಡೆಯಲು ಅಲಹಾಬಾದಿಗೆ ಅವನು ಹೋಗಬೇಕಾಯಿತು.

## ಅಧ್ಯಾಯ ೩೫

ಒಂದೆರಡು ದಿನಗಳನಂತರ ಚಕ್ರವರ್ತಿಯೂ ದೊಡ್ಡ ಮಗಳನ್ನು ನೋಡಲು ಅಲಹಾಬಾದಿಗೆ ಹೋದನು. ಆತನು ಹೊರಟ ದಿನ ಕಮಲೆ ಶೈಲಜೆಯನ್ನು ತನ್ನ ಮನೆಗೆ ಊಟಕ್ಕೆ ಕರೆದಳು. ವಿಪಿನ ಊಟಮಾಡಿ ಹೋದನಂತರ ಶೈಲಜೆ ಅಲ್ಲಿಗೆ ಹೋದಳು.

ನಿಂಬೆಗಿಡದ ಕೆಳಗೆ ಅಡಿಗೆ ಊಟ ಮಾಡಿ ಹರಟುತ್ತಾ ಕುಳಿತರು. ಆ ನೆಳಲಿನಲ್ಲಿ, ನದಿಯ ಸಾಮೀಪ್ಯದಲ್ಲಿ, ಕಮಲೆಯ ಮನಸ್ಸಿನ ದುಗುಡವೆಲ್ಲಾ ಮಾಯವಾಗಿ ಶಾಂತಿ ಆವರಿಸಿತ್ತು. ಮಧ್ಯಾಹ್ನವಾಗುವ ವೇಳೆಗೆ ಶೈಲಜೆ ಮನೆಗೆ ಹೊರಡಲನುವಾದಳು.

"ಒಂದು ದಿನ ನಿಧಾನವಾಗಿ ಹೋದರೆ ಆಗದೆ ?" ಕಮಲೆ ಕೇಳಿದಳು.

ಶೈಲಜೆ "ಇಲ್ಲ"ವೆಂದು ಹೇಳಿ ನಕ್ಕು, ಕತ್ತಲಾಗುವ ಮೊದಲೇ ಕಮಲೆಯೂ ಬರಬೇಕೆಂದು ಹೇಳಿ ಹೊರಟಳು.

ಕಮಲೆ ಮನೆಗೆಲಸವನ್ನೆಲ್ಲಾ ಮುಗಿಸಿ ಶಾಲು ಹೊದ್ದು ಸೂರ್ಯ ನದಿಯ ಹಿಂದೆ ಮುಳುಗುವುದನ್ನು ನೋಡುತ್ತಾ ಕುಳಿತಳು. ಉಮೇಶ ಬಂದು, "ವೀಳ್ಯವನ್ನೇ ಮರೆತುಬಿಟ್ಟರಿ," ಎಂದು ಕೊಟ್ಟನು.

ಕಮಲೆ ಕತ್ತಲಾಯಿತೆಂದು ಎದ್ದಳು. ಉಮೇಶ, "ಚಕ್ರವರ್ತಿ ಗಾಡಿ ಕಳುಹಿಸಿದ್ದಾರೆ " ಎಂದನು.

ಕಮಲೆ ಮನೆಯೊಳಗೆ ಹೋದಳು. ಒಂದು ಸಣ್ಣ ದೀಪ ಉರಿಯುತ್ತಿತ್ತು. ವೀಳ್ಯ ಸುತ್ತಿದ್ದ ಪೊಟ್ಟಣವನ್ನು ಅಲ್ಲಿಟ್ಟು ಬಾಗಿಲನ್ನು ಮುಚ್ಚಲು ಹೊರಡುವಷ್ಟರಲ್ಲಿ ಪೊಟ್ಟಣ ಸುತ್ತಿದ್ದ ಕಾಗದದ ಮೇಲೆ ರಮೇಶನ ಅಕ್ಷರದಲ್ಲಿ ತನ್ನ ಹೆಸರನ್ನು ಕಂಡು ನಿಂತಳು.

ಉಮೇಶನನ್ನು, ಕೂಗಿ, "ಈ ಕಾಗದ ಎಲ್ಲಿ ಸಿಕ್ಕಿತು?" ಎಂದಳು.

"ಯಜಮಾನರ ಕೋಣೆ ಗುಡಿಸಿದಾಗ ಸಿಕ್ಕಿತು."

ಕಮಲೆ ಓದಲಾರಂಭಿಸಿದಳು. ಹೇಮನಳಿನಿಗೆ ಎಲ್ಲಾ ವೃತ್ತಾಂತವನ್ನೂ ತಿಳಿಸಿ ರಮೇಶ ಬರೆದಿದ್ದ ಪತ್ರ! ಕಮಲೆ ಓದಿದಳು.

ಉಮೇಶ, "ಏನಮ್ಮಾ, ಸುಮ್ಮನೆ ನಿಂತಿರಿ? ಕತ್ತಲಾಯಿತು," ಎಂದನು. ಕಮಲೆ ನಿಶ್ಶಬ್ದ. ಉಮೇಶ ಗಾಬರಿಯಿಂದ, "ಮನೆಗೆ ಹೋಗೋಣ ಹೊತ್ತಾಯಿತು," ಎಂದು ಪುನಃ ಎಚ್ಚರಿಸಿದನು. ಹೊರಗಿನಿಂದ ಆಳು ಬಂದು ಗಾಡಿ ಸಿದ್ಧವಾಗಿವೆಯೆಂದು ಹೇಳುವವರೆಗೂ ಕಮಲೆಗೆ ಎಚ್ಚರವಿಲ್ಲ.

## ಅಧ್ಯಾಯ ೩೬

"ಸ್ವಸ್ಥವಾಗಿಲ್ಲವೆ, ಕಮಲಾ? ತಲೆ ನೋವೆ?" ಶೈಲೆ ವಿಚಾರಿಸಿದಳು.

"ಏನೂ ಇಲ್ಲ. ಮಾವನೆಲ್ಲಿ?"

"ಅಮ್ಮ ಅವರನ್ನು ಅಲಹಾಬಾದಿಗೆ ಕಳುಹಿಸಿದರು. ಅಕ್ಕನಿಗೆ

ಸ್ವಲ್ಪ ದಿನಗಳಿಂದ ಸ್ವಸ್ಥವಾಗಿರಲಿಲ್ಲ."

"ಎಂದು ಬರುತ್ತಾರೆ?"

"ಒಂದು ವಾರವಾದರೂ ಆಗಬಹುದು. ಮನೆಗೆಲಸ ಮಾಡಿ ನಿನಗೆ ಆಯಾಸವಾಗಿದೆ. ಬೇಗ ಊಟ ಮಾಡಿ ಮಲಗು."

ರಮೇಶ ತನ್ನ ಪತಿಯಲ್ಲವೆಂದು ಶೈಲೆಗೆ ತಿಳಿಸಲು ಅವಳು ಅಸಮರ್ಥಳಾದಳು.

ಕೋಣೆಯ ಬಾಗಿಲನ್ನು ಹಾಕಿ ಪುನಃ ರಮೇಶನ ಕಾಗದವನ್ನು ಓದಿದಳು. ಮೇಲೆ ವಿಳಾಸವಿಲ್ಲದಿದ್ದರೂ ಅದು ರಮೇಶ ತನ್ನ ಪ್ರೇಯಸಿಗೆ ಬರೆದುದೆಂದೂ, ವಿಧಿ ಅವರ ಸುಖಕ್ಕೆ ಅಡ್ಡಿಯಾಗಿ ತನ್ನನ್ನು ತಂದು ಹಾಕಿತೆಂದೂ ಕಮಲೆ ಅರಿತಳು. ಅವಳನ್ನು ಪ್ರೀತಿಸುತ್ತಿದ್ದರೂ ಕಮಲೆಯ ಮೇಲಿನ ಕನಿಕರದಿಂದ ಅವಳನ್ನು ಮದುವೆಯಾಗುವುದು ಸಾಧ್ಯವಿಲ್ಲವೆಂದು ಬರೆದಿದ್ದನು.

ಮರಳಿನ ದಿಬ್ಬದ ಮೇಲೆ ಕೂಡಿದಾಗಿನಿಂದ ಘಾಸಿಪುರಕ್ಕೆ ಬರುವವರೆಗೂ ತನ್ನ ಜೀವನ ಕಮಲೆಗೆ ಎದ್ದು ಕಾಣಿಸಿತು. ಹೆಂಡತಿಯಲ್ಲವೆಂದು ತಿಳಿದು ರಮೇಶ ಪೇಚಾಟದಲ್ಲಿ ಸಿಕ್ಕಿರಲು ಅವನೇ ತನ್ನ ಗಂಡನೆಂದು ತಾನು ನಿರ್ಧರಿಸಿಕೊಂಡಿದ್ದಳು. ಅವಮಾನ ಹೃದಯವನ್ನು ಸೀಳಿತು. ಜೀವಮಾನವೆಲ್ಲಾ ಆ ಅವಮಾನದಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.

ಬಾಗಿಲನ್ನು ತೆಗೆದು ತೋಟಕ್ಕೆ ಹೋದಳು. ಆಕಾಶ ಕರೀಕಲ್ಲಿನ ಗೋರಿಯಂತೆ ಕಾಣಿಸಿತು. ನಿರ್ಮಲಾಕಾಶದಲ್ಲಿ ನಕ್ಷತ್ರಗಳು ಮಿನುಗುತ್ತಿದ್ದವು. ಮಾವಿನ ತೋಪು ಕತ್ತಲೆಯನ್ನು ಹೆಚ್ಚಿಸಿತ್ತು. ದುಃಖದಿಂದ ಪಾರಾಗುವ ದಾರಿಕಾಣದೆ ಹುಲ್ಲಿನ ಮೇಲೆ ಕದಲದೆ ನಿಶ್ಶಬ್ದವಾಗಿ ಕುಳಿತಳು.

ಹೊತ್ತೆಷ್ಟಾಯಿತೆಂಬ ಅರಿವೇ ಅವಳಿಗಿರಲಿಲ್ಲ. ಛಳಿಯಿಂದ ನಡುಗಲಾರಂಭಿಸಿದಳು. ಬಹಳ ಹೊತ್ತಾದ ಮೇಲೆ ಒಳಗೆ ಹೋಗಿ ಕದ ಮುಚ್ಚಿದಳು. ಬೆಳಗ್ಗೆ ಏಳುವ ವೇಳೆಗೆ ಅವಳ ಹಾಸಿಗೆ ಪಕ್ಕದಲ್ಲಿ ಶೈಲಜೆ ನಿಂತಿದ್ದಳು. ಅಷ್ಟು ಹೊತ್ತು ಮಲಗಿದುದಕ್ಕೆ ನಾಚಿಕೊಂಡು

ಕಮಲೆ ಎದ್ದಳು.

"ನಿನಗೆ ಸ್ವಸ್ಥವಾಗಿಲ್ಲ. ಇನ್ನೂ ಸ್ವಲ್ಪ ಹೊತ್ತು ಮಲಗು. ಏನಾಗುತ್ತೆ, ಹೇಳು" ಎಂದು ಅವಳ ಹತ್ತಿರ ಶೈಲೆ ಕುಳಿತಳು. ಕಮಲೆ ದುಃಖವನ್ನು ತಡೆಯಲಾರದೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಶೈಲಜೆ ಅವಳನ್ನು ತಬ್ಬಿಕೊಂಡು ಸುಮ್ಮನೆ ಕುಳಿತಳು.

ಕಮಲೆ ಅಳು ನಿಲ್ಲಿಸಿ ನಗಲಾರಂಭಿಸಿದಳು.

ಶೈಲೆ, "ನನಗೇನೂ ತಿಳಿಯದೆಂದು ಕೊಂಡಿದ್ದೀ. ಅಲಹಾಬಾದಿಗೆ ಹೋದಂದಿನಿಂದ ರಮೇಶ ಬಾಬು ಕಾಗದ ಬರೆಯಲಿಲ್ಲ. ಅವರಿಗೂ ಕೆಲಸ. ಅಲ್ಲದೆ ಇನ್ನೆರಡು ದಿನಗಳಲ್ಲಿ ಹಿಂದಿರುಗಿ ಬರುತ್ತಾರೆ. ಆದರೆ ಇಷ್ಟು ಹೇಳುವವಳು ನಾನೂ ಹೀಗೆಯೇ ಮಾಡುತ್ತಿದ್ದೆ. ಹೆಂಗಸರಿಗೆ ಬುದ್ಧಿಯೇ ಇಲ್ಲ. ಒಂದು ಸಲ ಅತ್ತು ಬಿಟ್ಟರೆ ಮನಸ್ಸು ಹಗುರವಾಗುತ್ತೆ. ನೀನು ರಮೇಶ ಬಾಬುವನ್ನು ಎಂದಿಗೂ ಕ್ಷಮಿಸುವುದಿಲ್ಲವಲ್ಲವೆ ?"

"ನಿಜ" ಕಮಲೆಯೆಂದಳು.

ಶೈಲೆ ಅವಳ ಕೆನ್ನೆ ಸವರಿ, "ನನಗೆ ಗೊತ್ತಾಯಿತು. ಚಿಂತಿಸಬೇಡ, ನೋಡೋಣ." ಎಂದಳು,

ಆ ದಿನವೇ ಶೈಲೆ ತಂದೆಗೆ ಬರೆದಳು. "ರಮೇಶ ಬಾಬುವಿನಿಂದ ಕಾಗದ ಬರಲಿಲ್ಲವೆಂದು ಕಮಲೆ ಅಳುತ್ತಿದ್ದಾಳೆ. ಹೊಸ ಸ್ಥಳದಲ್ಲಿ ಹೀಗೆ ಅವಳನ್ನು ಬಿಟ್ಟು ಹೋಗಿ ಕಾಗದವನ್ನೂ ಬರೆಯದಿದ್ದರೆ ಹೇಗೆ? ಅಲಹಾಬಾದಿನಲ್ಲಿ ಆತನ ಕೆಲಸ ಮುಗಿಯಲಿಲ್ಲವೆ? ಎಷ್ಟು ಕೆಲಸವಿದ್ದರೂ ಕಾಗದ ಬರೆಯಲಾಗುವುದಿಲ್ಲವೆ?" ಎಂದು ಬರೆದಳು.

ಚಕ್ರವರ್ತಿ ರಮೇಶನನ್ನು ಕಂಡು ಬುದ್ಧಿ ಹೇಳಿದನು. ರಮೇಶನೂ ಕಮಲೆಯ ವಿಚಾರವಾಗಿಯೇ ಚಿಂತಿಸುತ್ತಿದ್ದನು ಅಸಡ್ಡೆಯಿಂದಲ್ಲ! ಅನಿಶ್ಚಯದಿಂದ ಅಲಹಾಬಾದಿನಲ್ಲಿ ದಿನಗಳನ್ನು ತಳ್ಳುತ್ತಿದ್ದನು. ಈ ವೇಳೆಗೆ ಸರಿಯಾಗಿ ಶೈಲೆಯ ಕಾಗದ ಬಂತು. ಕಮಲೆ ತಾನಿಲ್ಲದುದಕ್ಕಾಗಿ ಪೇಚಾಡುತ್ತಿರುವಳೆಂದೂ, ನಾಚಿಕೆಯಿಂದ ಬರೆಯದಿದ್ದಳೆಂದೂ ಭಾವಿಸಿದನು. ತನ್ನ ಸುಖ, ಕಮಲೆಯ ಪ್ರೇಮ ತೋರಿಸಿದ ಹಾದಿಯಲ್ಲಿ

ನಡೆಯಬೇಕೆಂದು ನಿಶ್ಚಯಿಸಿದನು. ವಿಧಿ ಆ ಮರಳುದಿಬ್ಬದ ಮೇಲೆ ತಮ್ಮ ಜೀವನಗಳನ್ನೆ ಅಲ್ಲದೆ ಹೃದಯಗಳನ್ನೂ ಕೂಡಿಸಿತೆಂದು ಕೊಂಡನು.

ಕಮಲೆಗೆ ಕಾಗದ ಬರೆದನು.

ಪ್ರಿಯತಮೆ,

ನಿನ್ನನ್ನು ಹೀಗೆ ಸಂಬೋಧಿಸುವುದು ಪದ್ಧತಿಗೋಸ್ಕರವಲ್ಲ. ಪ್ರಪಂಚದಲ್ಲೆಲ್ಲಾ ನಿನ್ನಷ್ಟು ಪ್ರಿಯರು ನನಗಾರೂ ಇಲ್ಲ. ನಿನಗೆ ಈ ವಿಚಾರದಲ್ಲಿ ಏನಾದರೂ ಅನುಮಾನವಿದ್ದರೆ—ನಿನ್ನ ಮನಸ್ಸನ್ನು ನಾನೆಂದಾದರೂ ನೋಯಿಸಿದ್ದರೆ ಈ ಸಂಬೋಧನೆ ಅದನ್ನೆಲ್ಲಾ ತೊಡೆದು ಹಾಕಲಿ.

ಹೆಚ್ಚು ಮಾತುಗಳಿಂದೇನು? ನನ್ನ ನಡತೆ ನಿನಗೆ ಬೇಸರವನ್ನುಂಟು ಮಾಡಿರಬಹುದು. ಅದಕ್ಕಾಗಿ ನೀನು ಬಯ್ದರೆ ನಾನು ಬೇಡವೆನ್ನಲಾಗುವುದಿಲ್ಲ.

ಆದರೆ ನೀನೇ ನನ್ನ ಪ್ರಿಯತಮೆಯೆಂದು ತಿರುತಿರುಗಿ ಹೇಳುತ್ತೇನೆ. ಹೆಚ್ಚು ಹೇಳಲಾರೆ. ಹಿಂದಿನ ಅನುಮಾನಗಳನ್ನೆಲ್ಲಾ ಮರೆತು ಮುಂದಿನ ಪ್ರೇಮ ಜೀವನದ ತಳಹದಿಯನ್ನು ಹಾಕೋಣ. ನೀನು ನನ್ನನ್ನು ನಂಬುವೆಯೆಂದು ಆಶಿಸಿದ್ದೇನೆ.

ಎಂದಾದರೂ ನೀನು ನನ್ನನ್ನು ಪ್ರೀತಿಸುತ್ತೀಯೆ. ನಾನು ನಿನ್ನ ಪತಿಯಾಗಲು ತಕ್ಕವನಲ್ಲದಿದ್ದರೂ ನಿನ್ನ ಪ್ರೇಮಿ. ಈ ಕಾಗದ ಅಸ್ವಾಭಾವಿಕವಾಗಿದೆ. ಆದರೆ ನನ್ನ ಹೃದಯವನ್ನೆಲ್ಲಾ ಬಿಚ್ಚಿಹೇಳುವ ಕಾಗದ ಬರೆಯಲು ನಾನು ಅಸಮರ್ಥನು. ಮನಸ್ಸುಗಳು ಬೆರೆತ ಮೇಲೆ ಇನ್ನೂ ಚನ್ನಾಗಿರುವ ಕಾಗದಗಳನ್ನೂ ಬರೆಯಬಹುದು. ಕೋಣೆಯ ಮುಚ್ಚು ಬಾಗಿಲನ್ನು ತೆರೆದರಲ್ಲವೆ, ಧಾರಾಳವಾಗಿ ಗಾಳಿ ಬೀಸುವುದು?

ನನ್ನ ಕಮಲಾ, ನಿನ್ನ ಹೃದಯದ ಬಾಗಿಲು ನನಗೆಂದು ಸಿಕ್ಕುವುದು? ಅವಸರಪಟ್ಟು ಪ್ರಯೋಜನವಿಲ್ಲವಲ್ಲವೆ? ಈ ಕಾಗದ ತಲುಪಿದ ಮಾರನೆಯ ದಿನ ನಾನು ಘಾಸಿಪುರದಲ್ಲಿರುತ್ತೇನೆ. ನಮ್ಮ ಮನೆಯಲ್ಲೇ ನೀನಿರಬೇಕೆಂದು ನನ್ನ ಅಭಿಲಾಷೆ. ಮನೆಯಿಲ್ಲದೆ ಅಲೆದು ನನಗೆ ಸಾಕಾಗಿದೆ. ನಮ್ಮ ಹೊಸಿಲನ್ನು ದಾಟಿ ನನ್ನ ಹೃದಯೇಶ್ವರಿಯನ್ನು

ಕಾಣಲು ಕಾತರನಾಗಿದ್ದೇನೆ. ಅದೇ ನಮ್ಮ ಎರಡನೆಯ 'ಶುಭದೃಷ್ಟಿ.' ಮೊದಲನೆಯದು ನದೀದಡದಲ್ಲಿ, ನೀಲಾಕಾಶದ ಕೆಳಗೆ, ನಿರ್ಜನವಾದ ಪ್ರದೇಶದಲ್ಲಿ ನಡೆಯಿತಲ್ಲವೆ? ಅದೆಲ್ಲಾ ಕನಸಿನಂತಿದೆ. ಪ್ರಾತಃಕಾಲದ ಶುಭಸಮಯದಲ್ಲಿ ನಮ್ಮ ಮನೆಯನುಲ್ಲಿ ನಡೆಯುವ ಎರಡನೆಯ ಶುಭ ದೃಷ್ಟಿಗೆ ಕಾದಿದ್ದೇನೆ. ಬಾಗಿಲಿನಲ್ಲಿ ನಿನ್ನ ಮುದ್ದುಮುಖವನ್ನು ನೋಡಲು ಆಶಿಸುತ್ತೇನೆ. ನಿನ್ನ ಪ್ರೇಮಭಿಕ್ಷೆಗೆ ಕಾದು ನಿಂತಿರುವ ನನ್ನನ್ನು ಬರಿಗೈಯಲ್ಲಿ ಹಿಂದಕ್ಕೆ ಕಳುಹಬೇಡ.

ನಿನ್ನ ರಮೇಶ.

## ಅಧ್ಯಾಯ ೩೭

ಮಾರನೆಯ ದಿನ, ದುಃಖಿತಳಾಗಿ ಕುಳಿತಿದ್ದ ಕಮಲೆಯನ್ನು ಶೈಲೆ, "ನಿನ್ನ ಮನೆಗೆ ಹೋಗುವುದಿಲ್ಲವೆ?" ಎಂದು ಕೇಳಿದಳು.

"ಇನ್ನೇನೂ ಕೆಲಸವಿಲ್ಲ."

ಶೈಲ—ಮನೆಯೆಲ್ಲಾ ಸಿದ್ಧವಾಗಿದೆಯೆ?

ಕಮಲ—ಹೌದು.

ಶೈಲ ಹೊರಗೆ ಹೋಗಿ ಬಂದು "ನಾನೊಂದು ಪದಾರ್ಥವನ್ನು ಕೊಟ್ಟರೆ ನನಗೇನು ಕೊಡುವೆ?" ಎಂದಳು.

ಕಮಲ—ನನ್ನ ಹತ್ತಿರ ಏನೂ ಇಲ್ಲವಲ್ಲಾ, ಅಕ್ಕಾ.

ಶೈಲ—ಏನೂ ಇಲ್ಲವೆ?

ಕಮಲ—ಇಲ್ಲವಲ್ಲಾ.

ಕಮಲೆಯ ಕೆನ್ನೆಯನ್ನು ಮುಟ್ಟಿ "ಎಲ್ಲವನ್ನೂ ಯಾರಿಗೋ ಕೊಟ್ಟು ಬಿಟ್ಟಿರುವೆಯಲ್ಲವೆ? ಇದೇನು ನೋಡು," ಎಂದು ಒಂದು ಕಾಗದ ವನ್ನು ತೆಗೆದು ತೋರಿಸಿದಳು.

ರಮೇಶನ ಅಕ್ಷರಗಳನ್ನು ನೋಡಿ ಕಮಲೆಯ ಮುಖ ಬಿಳುಪಾ ಯಿತು.

ಶೈಲ—ನಿನ್ನ ಜಂಭ ಸಾಕು. ಕಿತ್ತುಕೊಳ್ಳಲು ಹಾತೊರೆಯುತ್ತಿರು

ವೆಯಲ್ಲವೆ? ಕೇಳಿಕೊಂಡ ಹೊರತು ಕೊಡುವುದಿಲ್ಲ. ಎಷ್ಟು ಹೊತ್ತು ಸುಮ್ಮನಿರುವೆಯೋ ನೋಡೋಣ.

ಕಾಗದದ ಪೆಟ್ಟಿಗೆಗೆ ದಾರಕಟ್ಟಿ ಎಳೆಯುತ್ತಾ ಉಮೆ"ಅತ್ತೇ" ಎಂದು ಕೂಗುತ್ತಾ ಬಂದಳು.

ಕಮಲೆ ಅವಳನ್ನು ಮುದ್ದಿಸುತ್ತಾ, ಅಳುತ್ತಿದ್ದರೂ ಲಕ್ಷಿಸದೆ ಎತ್ತಿಕೊಂಡು ಹೊರಟುಹೋದಳು. ಶೈಲೆ ಅವಳ ಹಿಂದೆಯೇ ಹೋಗಿ, "ನಾನೇ ಸೋತೆ. ತೆಗೆದುಕೋಮ್ಮ" ಎಂದು ಕಾಗದವನ್ನು ಹಾಕಿ ಉಮೆಯನ್ನು ಎತ್ತಿಕೊಂಡು ಹೋದಳು.

ಕಮಲೆ ಕಾಗದವನ್ನು ತಿರುಗಿಸಿ ನೋಡಿ ತೆಗೆದು ಓದಲಾರಂಭಿಸಿದಳು. ಮೊದಲ ಮಾತುಗಳನ್ನು ಓದಿ ಬೇಸರದಿಂದ ದೂರ ಎಸೆದಳು. ಪುನಃ ತೆಗೆದುಕೊಂಡು ಕಡೆಯವರೆಗೂ ಓದಿದಳು. ಕಾಗದವೆಲ್ಲಾ ಅರ್ಥವಾಯಿತೋ ಇಲ್ಲವೋ! ಅಸಹ್ಯದಿಂದ ದೂರ ಬಿಸುಟಳು. ಪತಿಯಲ್ಲದವನೊಡನೆ ಪ್ರೇಮವೆ! ಎಲ್ಲವನ್ನೂ ತಿಳಿದ ರಮೇಶ ಹೀಗೆ ಅವಮಾನಿಸುವುದೇ! ಘಾಸಿಪುರದಲ್ಲಿ ಅವನನ್ನು ಪ್ರೀತಿಸಲು ಪ್ರಯತ್ನಿಸಿದುದು ಅವನು ತನ್ನ ಪತಿಯೆಂದಲ್ಲವೆ? ತನ್ನ ಮೇಲಿನ ಕನಿಕರದಿಂದ ರಮೇಶ ಹೀಗೆ ಬರೆದಿದ್ದನು. ಜೀವಮಾನವೆಲ್ಲಾ ಈ ಅವಮಾನ ಸಹಿಸಬೇಕು! ಹುಟ್ಟಿದಂದಿನಿಂದ ಯಾರಿಗೂ ಕೇಡು ಬಗೆಯದಿದ್ದ ತನಗೆ ವಿಧಿ ಈ ದುಃಖವನ್ನೇರ್ಪಡಿಸಿದ್ದನು. "ಮನೆ"ಯೆಂಬ ಭೂತದಿಂದ ತಪ್ಪಿಸಿಕೊಳ್ಳಲು ಮಾರ್ಗವನ್ನು ಆಲೋಚಿಸ ತೊಡಗಿದಳು. ರಮೇಶನಲ್ಲಿ ಇಷ್ಟು ಜುಗುಪ್ಸೆಯಾಗಬಹುದೆಂದು ಯಾರಾದರೂ ಹೇಳಿದ್ದರೆ ಎರಡು ದಿನಗಳ ಕೆಳಗೆ ಅವಳು ನಂಬುತ್ತಿರಲಿಲ್ಲ.

ಉಮೇಶ ಬಾಗಿಲಲ್ಲಿ ನಿಂತು ಕೆಮ್ಮಿದನು. ಕಮಲೆ ಸುಮ್ಮನಿರಲು ಮೆಲ್ಲಗೆ "ಅಮ್ಮಾ" ಎಂದನು.

ತಲೆ ಕೆರೆಯುತ್ತಾ "ಸಿದ್ಧುಬಾಬುವಿನ ಮನೆಯ ಮದುವೆಯಲ್ಲಿ ನಾಟಕವಾಡಿಸುತ್ತಾರೆ" ಎಂದನು.

"ಹೋಗಿ ನೋಡಿಕೊಂಡು ಬಾ, ಉಮೇಶ್."

"ಬೆಳಗ್ಗೆ ಎಂಥಾ ಹೂವು ತರಲಿ?"

"ಯಾವುದೂ ಬೇಡ."

ಉಮೇಶ ಹೊರಡುವುದರಲ್ಲಿದ್ದನು. ಕಮಲೆ ಕೂಗಿ ಐದು ರೂಪಾಯಿ ಕೊಟ್ಟಳು.

ಉಮೇಶ ಆಶ್ಚರ್ಯದಿಂದ, "ಏನಾದರೂ ತರಬೇಕೆ, ಅಮ್ಮಾ?" ಎಂದನು.

ಕಮಲ—ನನಗೇನೂ ಬೇಡ. ನಿನಗೇ ತೆಗೆದುಕೋ. ಈ ಬಟ್ಟೆಗಳನ್ನು ಹಾಕಿಕೊಂಡು ನಾಟಕಕ್ಕೆ ಹೋಗುತ್ತೀಯಾ?"

ಉಮೇಶ ಎಂದೂ ಬಟ್ಟೆಗಳ ವಿಚಾರವಾಗಿ ಯೋಚಿಸಿದವನಲ್ಲ. ಕಮಲೆಯನ್ನು ನೋಡಿ ಹಲ್ಲು ಬಿಟ್ಟನು.

ಕಮಲೆ ತನ್ನಲ್ಲಿದ್ದ ಕೆಲವು ಬಟ್ಟೆಗಳನ್ನು ಉಮೇಶನಿಗೆ ಕೊಡಲು ಅವಳ ಕಾಲಿಗೆ ಬಿದ್ದು ತೆಗೆದುಕೊಂಡು ಹೋದನು.

ಕಣ್ಣೊರಸಿಕೊಳ್ಳುತ್ತಾ ಕಮಲೆ ಕಿಟಕಿಯ ಬಳಿ ನಿಂತಳು.

ಶೈಲೆ ಬಂದು, "ನಿನ್ನ ಕಾಗದ ನನಗೆ ತೋರಿಸುವುದಿಲ್ಲವೆ, ಕಮಲ?" ಎಂದಳು. ಅವಳು ಕಮಲೆಯಿಂದ ಯಾವುದನ್ನೂ ರಹಸ್ಯವಾಗಿಡುತ್ತಿರಲಿಲ್ಲ.

"ಅಲ್ಲಿದೆ, ಅಕ್ಕಾ, ಓದು."

"ಇನ್ನೂ ಕೋಪ ಶಾಂತವಾಗಿಲ್ಲ," ಎಂದುಕೊಂಡು ಶೈಲೆ ಕಾಗದವನ್ನು ತೆಗೆದುಕೊಂಡು ಓದಿದಳು. ಪ್ರೇಮದಿಂದ ತುಂಬಿದ್ದರೂ ಹೆಂಡತಿಗೆ ಬರೆದುದಾದುದರಿಂದ ವಿಚಿತ್ರವಾಗಿ ತೋರಿತು. "ನಿನ್ನ ಗಂಡ ಕಾದಂಬರಿಗಳನ್ನು ಬರೆಯುತ್ತಾನೋ?" ಎಂದು ಕೇಳಿದಳು.

ಗಂಡ ಎಂಬ ಮಾತು ಕಮಲೆಗೆ ರುಚಿಸದೆ 'ನನಗೆ ಗೊತ್ತಿಲ್ಲ,' ಎಂದಳು.

"ಈ ದಿನ ನಿನ್ನ ಮನೆಗೆ ಹೋಗುತ್ತೀಯೋ?"

ಕಮಲೆ ಹೌದೆಂದು ತಲೆಯಾಡಿಸಿದಳು.

"ನನಗೂ ಬರಬೇಕೆಂದು ಆಸೆ. ಆದರೆ ನಾನು ನರಸಿಂಗಬಾಬುವಿನ ಮನೆಯ ಮದುವೆಗೆ ಹೋಗಬೇಕು. ಅಮ್ಮನನ್ನು ಕರೆದುಕೊಂಡು ಹೋಗು."

"ಬೇಡ, ಅವರಿಗೇಕೆ ತೊಂದರೆ? ಆಳುಗಳಿದ್ದಾರಲ್ಲಾ."

ಶೈಲೆ ನಗುತ್ತಾ "ಉಮೇಶನಂತಹ ಶೂರನಿರುವಾಗ ಭಯವೇನು?" ಎಂದಳು. ಉಮೆ ಸೀಸದ ಕಡ್ಡಿಯಿಂದ ಗೀಚುತ್ತಾ ಓದುತ್ತಿರುವಂತೆ ನಟಿಸುತ್ತಿದ್ದಳು. ಶೈಲೆ ಎತ್ತಿಕೊಳ್ಳಲು ಗಟ್ಟಿಯಾಗಿ ಅಳಲಾರಂಭಿಸಿದಳು. ಕಮಲೆ ಸಮಾಧಾನಮಾಡಿ ಕೊರಡಿಗೆ ಎತ್ತಿಕೊಂಡು ಹೋಗಿ ಹಾಸಿಗೆಯ ಮೇಲೆ ಕೂಡಿಸಿ ಆಟವಾಡಿಸುತ್ತಿದ್ದಳು. ಪೆಟ್ಟಿಗೆಯಿಂದ ಎರಡು ಚಿನ್ನದ ಬಳೆಗಳನ್ನು ತೆಗೆದು ಅವಳ ಕೈಗೆ ತೊಡಿಸಿದಳು. ಉಮೆ ಬಹಳ ಸಂತೋಷದಿಂದ ಕೈಗಳನ್ನೆತ್ತಿ ನೋಡಿಕೊಂಡು ತಾಯಿಗೆ ತೋರಿಸಲು ಕುಣಿಯುತ್ತಾ ಹೊರಟುಹೋದಳು.

ಶೈಲೆ ಬಳೆಗಳನ್ನು ತೆಗೆದು, "ಇದೇನು ಕಮಲಾ? ಇವನ್ನೇತಕ್ಕೆ ಅವಳಿಗೆ ತೊಡಿಸಿದೆ?" ಎಂದಳು.

"ಅದನ್ನು ಉಮೆಗೇ ಕೊಟ್ಟೆ." ಬಳೆ ತೆಗೆದುದಕ್ಕಾಗಿ ಉಮೆ ಅರಚುತ್ತಿದ್ದಳು.

"ನಿನಗೇನು ಹುಚ್ಚೇ?" ಶೈಲೆ ಕೇಳಿದಳು.

"ಅಕ್ಕಾ, ಹಿಂದಕ್ಕೆ ಕೊಡಬೇಡಿ. ಮುರಿಸಿ ಅವಳಿಗೊಂದು ಸರ ಮಾಡಿಸಿ." ಶೈಲೆ ಕಮಲೆಯನ್ನು ಅಪ್ಪಿಕೊಂಡು. "ನಿನ್ನಂಥಾ ಹುಚ್ಚಿಯನ್ನು ನಾನೆಲ್ಲೂ ನೋಡಿಲ್ಲ" ಎಂದಳು.

ಕಮಲೆ ಕಣ್ಣೀರು ಸುರಿಸುತ್ತಾ, "ಈ ದಿನ ನಿನ್ನನ್ನು ಬಿಟ್ಟು ಹೋಗುತ್ತೇನೆ. ಅಕ್ಕಾ, ನಾನಿಲ್ಲಿ ಬಹಳ ಸುಖವಾಗಿದ್ದೆ," ಎಂದಳು.

ಶೈಲೆಗೂ ಅಳು ಬಂತು. "ಹಾಗೆ ಮಾತನಾಡಬೇಡ, ಕಮಲಾ. ನೀನೆಲ್ಲಿಗೆ ಹೋಗುತ್ತೀ? ನಿನ್ನ ಸ್ವಂತ ಮನೆಯಲ್ಲಿ ಇನ್ನೂ ಸುಖವಾಗಿರುತ್ತೀ. ನಿನಗೆ ಕೂಡ ಬೇಸರವಾಗುವಷ್ಟು ಸಲ ನಾನು ಬರುತ್ತಿರುತ್ತೇನೆ," ಎಂದಳು. ಹೊರಡುವ ಸಮಯ ಬರಲು ಶೈಲೆ "ನಾಳೆ ಮಧ್ಯಾಹ್ನ ಬರುತ್ತೇನೆ," ಎಂದಳು. ಕಮಲೆ ಮಾತನಾಡಲಿಲ್ಲ.

ಬಂಗಲೆಯಲ್ಲಿ ಉಮೇಶ ಕಾದಿದ್ದನು.

"ನಾಟಕ ನೋಡಲು ಹೋಗಲಿಲ್ಲವೆ, ಉಮೇಶ್."

"ನೀವಿಲ್ಲಿ ಬರುತ್ತೀರೆಂದು........"

"ಪರವಾ ಇಲ್ಲ ಹೋಗು. ವಿಷ್ಣುವಿದ್ದಾನೆ. ಬೇಗ ಹೋಗು."

ಉಮೇಶ ಹೊರಟನು. ಕಮಲೆ ತಿರುಗಿ ಕೂಗಿ, "ಮಾವ ಬಂದರೆ...." ಮುಂದೆ ಮಾತನಾಡಲು ತೋರಲಿಲ್ಲ. ಉಮೇಶ ಬಾಯಿ ಬಿಟ್ಟು ಕೊಂಡು ಕೇಳುತ್ತಿದ್ದನು. ಸ್ವಲ್ಪ ಹೊತ್ತಾದ ಮೇಲೆ, "ಮಾವ ಒಳ್ಳೆಯ ವರು. ನಿನಗೇನಾದರೂ ಬೇಕಾದರೆ ಆತನನ್ನು ಕೇಳು. ನನ್ನ ನಮಸ್ಕಾರ ಗಳನ್ನು ತಿಳಿಸು."

ಉಮೇಶನಿಗೆ ಅರ್ಥವಾಗದಿದ್ದರೂ "ಸರಿ", ಎಂದು ಹೊರಟನು.

ಮಧ್ಯಾಹ್ನ ವಿಷ್ಣು "ಎಲ್ಲಿಗೆ ಹೊರಟಿರಿ ಅಮ್ಮಾ ?" ಎಂದನು.

ಕಮಲೆ "ಗಂಗೆಯಲ್ಲಿ ಸ್ನಾನಮಾಡಿ ಬರುತ್ತೇನೆ," ಎಂದಳು.

"ನಾನೂ ಬರಲೆ ?"

"ಬೇಡ. ಮನೆ ನೋಡಿಕೊಂಡಿರು," ಎಂದು ಅವನ ಕೈಗೆ ಒಂದು ರೂಪಾಯಿ ಕೊಟ್ಟು ಹೊರಟಳು.

## ಅಧ್ಯಾಯ ೩೮

ಆನಂದಬಾಬು ಹೇಮನಳಿನಿಯನ್ನು ಹುಡುಕಿಕೊಂಡು ಮಹಡಿಯ ಮೇಲಕ್ಕೆ ಹೋದನು. ಅವಳು ಕೋಣೆಯಲ್ಲಿರಲಿಲ್ಲ. ಮನೆ ಬಿಟ್ಟೂ ಹೋಗಿರಲಿಲ್ಲ. ಬಿಸಿಲು ಮಹಡಿಯ ಮೇಲೆ ಹೋದನು. ಸೂರ್ಯನ ತನಿಬೆಳಕಿನಲ್ಲಿ ಮನೆಗಳ ಛಾವಣಿಗಳು ಕಾಣಿಸುತ್ತಿದ್ದುವು. ತಂಗಾಳಿ ಬೀಸುತ್ತಿದ್ದಿತು. ಹೇಮನಳಿನಿ ಚಿಂತಿಸುತ್ತಾ ಒಂದು ಮೂಲೆಯಲ್ಲಿ ಕುಳಿತಿದ್ದಳು. ಆನಂದಬಾಬು ಹಿಂದೆ ಹೋಗಿ ನಿಂತರೂ ಅವಳಿಗೆ ತಿಳಿಯಲಿಲ್ಲ. ಮೆಲ್ಲಗೆ ಅವಳ ಭುಜದ ಮೇಲೆ ಕೈಯಿಡಲು ಗಾಬರಿಯಿಂದ ತಲೆಯೆತ್ತಿದಳು. ಅವಳ ಪಕ್ಕದಲ್ಲಿ ಕುಳಿತು, "ಹೇಮಾ! ನಿಮ್ಮ ತಾಯಿ ಬದುಕಿದ್ದರೆ ಚನ್ನಾಗಿತ್ತು. ನನ್ನಿಂದ ಏನೂ ಪ್ರಯೋಜನವಿಲ್ಲ," ಎಂದನು.

ತಂದೆಯ ಮುಖದಲ್ಲಿ ತುಂಬಿದ್ದ ಸಹಾನುಭೂತಿ, ಪ್ರೇಮ, ಮರುಕಗಳನ್ನು ನೋಡಿ ಹೇಮನಳಿನಿಯ ಮನಸ್ಸು ಕರಗಿತು. ಈ ಕೆಲವು ದಿನಗಳು ಹೇಮನಳಿನಿಯ ದುಃಖವನ್ನು ಮುದುಕನೂ ಅನುಭವಿಸಿ ಕಂಗೆಟ್ಟು

ಹೋಗಿದ್ದನು. ಮಗಳ ದುಃಖ ಶಮನ ಮಾಡಲು ಅಸಾಧ್ಯವೆಂದು ತೋರಿದಾಗ ಅವಳ ತಾಯಿಯ ನೆನಪುಂಟಾಯಿತು. ಹೇಮನಳಿನಿಗೆ ಇದೆಲ್ಲಾ ಅರ್ಥವಾಯಿತು. ನಾಚಿಕೊಂಡು ತನ್ನ ಸ್ವಾರ್ಥ ಪೂರ್ವಕ ದುಃಖವನ್ನು ಮರೆಯಬೇಕೆಂದು ನಿರ್ಧರಿಸಿದಳು.

"ಈ ದಿನ ಹೇಗಿದ್ದೀಯಪ್ಪಾ?"

ಹೇಮನಳಿನಿ ಆತನ ಆರೋಗ್ಯವನ್ನು ವಿಚಾರಿಸಿ ಬಹಳ ದಿನಗಳಾಗಿದ್ದುವು.

"ನನಗೇನಾಗಿದೆ? ನಿನ್ನದೇ ನನಗೆ ಯೋಚನೆ. ನನಗೆ ಕಷ್ಟ ಬಂದರೆ ತಡೆಯಬಲ್ಲೆ. ನೀನಿನ್ನೂ ಎಳೆಯ ಹುಡುಗಿ," ಎಂದು ಅವಳ ಭುಜ ತಟ್ಟಿದನು.

ಹೇಮ—ಅಮ್ಮ ಸತ್ತಾಗ ನನಗೆಷ್ಟು ವರ್ಷ?

ಆನಂದ— ಇನ್ನೂ ಮೂರೇ ವರ್ಷ. ಆಗತಾನೇ ಮಾತು ಬರುತ್ತಿತ್ತು. "ಅಮ್ಮ ಎಲ್ಲಿ?" ಎಂದು ನೀನು ಕೇಳಿದೆ. "ಅವಳ ತಂದೆಯ ಹತ್ತಿರ ಹೋದಳು" ಎಂದೆ. ನೀನು ಹುಟ್ಟುವ ಮೊದಲೇ ನಿಮ್ಮ ತಾತ ಸತ್ತುಹೋಗಿದ್ದರು. ನಿನಗೆ ಅರ್ಥವಾಗದೆ ನನ್ನನ್ನೇ ನೋಡುತ್ತಾ ನಿಂತೆ. ಕೈ ಹಿಡಿದು ನಿಮ್ಮ ತಾಯಿಯ ಕೋಣೆಗೆ ಕರೆದುಕೊಂಡು ಹೋದೆ ಅಲ್ಲಿರಬಹುದೆಂದು ನಿನ್ನ ಅಭಿಪ್ರಾಯ. ನಿಮ್ಮ ತಂದೆ ಏನು ಬೇಕಾದರೂ ಮಾಡಬಲ್ಲನೆಂದು ನೀನು ನಂಬಿದ್ದೆ. ಸಾವಿನ ಮೇಲೆ ನನ್ನ ಶಕ್ತಿ ನಡೆಯದೆಂದು ನಿನಗೆ ತಿಳಿದಿರಲಿಲ್ಲ. ಈಗ ನೋಡು! ನಿನ್ನ ಮೇಲೆ ಎಷ್ಟು ಪ್ರೀತಿಯಿದ್ದರೂ ನಿನ್ನ ದುಃಖ ಕಡಮೆ ಮಾಡಲಾರೆ." ಮಗಳ ತಲೆಯ ಮೇಲೆ ಕೈಯಿಟ್ಟನು.

ಹೇಮನಳಿನಿ ಆತನ ಕೈಸವರುತ್ತಾ, "ನನಗೆ ಅಮ್ಮನ ಜ್ಞಾಪಕವೇ ಇಲ್ಲ. ಯಾವಾಗಲೂ ಒಂದು ಪುಸ್ತಕ ಹಿಡಿದು ಮಲಗಿರುತ್ತಿದ್ದಳು. ನಾನು ಆ ಪುಸ್ತಕ ಕಿತ್ತುಕೊಳ್ಳಲು ಪ್ರಯತ್ನಿಸುತ್ತಿದ್ದೆ"

ಹೀಗೆ ಹಿಂದಿನ ಸುದ್ದಿಗಳನ್ನು ಮಾತಾಡುತ್ತಾ ಹೋದರು. ಹೇಮನಳಿನಿ ತನ್ನ ತಾಯಿಯ ವಿಚಾರವಾಗಿ ಪ್ರಶ್ನಿಸುತ್ತಾ ಹೋದಳು. ಮಾತನಾಡುತ್ತಿದ್ದಂತೆ ಸೂರ್ಯ ಮುಳುಗಿದನು. ಆ ಪಟ್ಟಣದ ಅವಾಂತರದಲ್ಲಿ

ತಂದೆ ಮಗಳಿಬ್ಬರೂ ಕತ್ತಲಾಗುವವರೆಗೂ ಶಾಂತವಾಗಿ ಮಾತನಾಡುತ್ತಾ ಇದ್ದರು.

ಜೋಗೇಂದ್ರ ಮೆಟ್ಟಲು ಹತ್ತಿಬರಲು ಇಬ್ಬರೂ ಎದ್ದರು.

ಜೋಗೇಂದ್ರ—ಹೇಮ, ಯಾವಾಗಲೂ ಇಲ್ಲೇ ಇರುತ್ತೀ.

ಅವನಿಗೆ ಅಸಮಾಧಾನ. ಮನೆ ಸದಾ ದುಃಖದಿಂದ ತುಂಬಿತ್ತು. ಹೊರಗೆ ಹೋದರೆ ಮದುವೆ ನಿಂತುದಕ್ಕೆ ಕಾರಣ ಕೇಳುತ್ತಿದ್ದರು.

"ಹೇಮನಳಿನಿಗೆ ಬುದ್ಧಿಯಿಲ್ಲ. ಇಂಗ್ಲಿಷ್ ಕಾದಂಬರಿಗಳನ್ನು ಹುಡುಗಿಯರು ಓದಬಾರದು. ರಮೇಶ ಬಿಟ್ಟು ಹೋದನೆಂದು ಸದಾ ಎಲ್ಲರ ಎದುರಿಗೂ ತನ್ನ ದುಃಖವನ್ನು ಪ್ರಕಟಿಸುತ್ತಾಳೆ" ಎನ್ನುವನು.

ಆನಂದಬಾಬು, "ತಣ್ಣಗಿತ್ತು. ಮಾತನಾಡುತ್ತಾ ಕುಳಿತೆವು."

ಮಗಳನ್ನು ಜೋಗೇಂದ್ರ ಪ್ರಶ್ನಿಸದಿರಲೆಂಬುದು ಮುದುಕನ ಆಶಯ.

ಜೋಗೇಂ—ಒಳಗಡೆ ಮಾತನಾಡಲು ಆಗುವುದಿಲ್ಲವೇನು? ಹೇಮಳ ಹುಚ್ಚನ್ನು ಹೆಚ್ಚು ಮಾಡುತ್ತೀರಿ. ನಾನು ಮನೆ ಬಿಟ್ಟು ಹೋಗ ಬೇಕಾಗುತ್ತೆ.

ಹೇಮ—ನೀನಿನ್ನೂ ಚಹಾ ಕುಡಿದಿಲ್ಲವೆ ಅಪ್ಪಾ?

ಆನಂದ—ಈವತ್ತು ನನಗೆ ಬೇಡ.

ಜೋಗೇಂ—ಏನು, ಸನ್ಯಾಸವನ್ನು ಸ್ವೀಕರಿಸುತ್ತೀರೋ? ನನ್ನ ಗತಿ ಏನು? ಗಾಳಿ ಕುಡಿದುಕೊಂಡಿರಲು ನನಗೆ ಸಾಧ್ಯವಿಲ್ಲ.

ಆನಂದ—ಸನ್ಯಾಸವೇನು? ರಾತ್ರಿ ನಿದ್ದೆ ಬರಲಿಲ್ಲ ಸ್ವಲ್ಪ ತಿಂಡಿ ಕಡಮೆ ಮಾಡೋಣವೆಂದು ಕೊಂಡೆ.

ಈ ದಿನ ಆನಂದಬಾಬುವಿಗೆ ಚಹದ ಆಲೋಚನೆಯೇ ಬಂದಿರ ಲಿಲ್ಲ. ಹೇಮನಳಿನಿ ಮೊದಲಿನಂತೆ ವಿಶ್ವಾಸವಾಗಿ ಮಾತನಾಡುತ್ತಿದ್ದುದ ರಿಂದ ಹೊತ್ತೇ ತಿಳಿದಿರಲಿಲ್ಲ. ಆದರೆ ತಂದೆಗೆ ಚಹಾ ಬೇಡವೆನ್ನುವುದನ್ನು ಹೇಮನಳಿನಿ ನಂಬಲಿಲ್ಲ.

"ಬಾಪ್ಪ, ಚಹಾ ಕುಡಿಯೋಣ" ಎಂದು ಅವಳು ಕರೆದಾಗ ತನ್ನ ಆರೋಗ್ಯದ ನೆನಪೇ ಇಲ್ಲದೆ ಆನಂದಬಾಬು ಅವಳ ಹಿಂದೆ ಹೋದನು.

ಒಳಗೆ ಅಕ್ಷಯನಿದ್ದನು. ಹೇಮ ದುಃಖವನ್ನು ಮರೆಯುವ ವೇಳೆಗೆ

ಇವನು ಬಂದುದು ಆನಂದಬಾಬುವಿಗೆ ಅಸಮಾಧಾನವಾಯಿತು. ಹೇಮ ನಳಿನಿಯನ್ನು ನೋಡಿ ಅಕ್ಷಯ ಎದ್ದು "ನಾನು ಹೊರಡುತ್ತೇನೆ, ಜೋಗೆನ್" ಎಂದನು, ಆದರೆ ಹೇಮನಳಿನಿಯೇ "ಏಕೆ, ಅಕ್ಷಯಬಾಬು? ಅಷ್ಟು ಅವಸರವೇನು? ಒಂದು ಬಟ್ಟಲು ಚಹಾ ಕುಡಿದು ಹೋಗಿ." ಎಂದಳು. ಅಕ್ಷಯ ಕುಳಿತು, "ನೀವು ಬರುವ ಮೊದಲೇ ಎರಡು ಬಟ್ಟ ಲಾಯಿತು. ಬಲವಂತ ಮಾಡಿದರೆ ಇನ್ನೆರಡು ಕುಡಿಯ ಬಲ್ಲೆ" ಎಂದನು.

ಹೇಮನಳಿನಿ ನಕ್ಕು "ಬಲವಂತ ಮಾಡಬೇಕೆ ?" ಎಂದಳು.

ಅಕ್ಷಯ—ನಿಜ. ಒಳ್ಳೆಯದು ಯಾವುದನ್ನೂ ನಾನು ನಿರಾಕರಿಸು ವುದಿಲ್ಲ.

ಜೋಗೇಂ—ಒಳ್ಳೆಯದು ಯಾವುದೂ ನಿನ್ನನ್ನೂ ಬೇಡವೆನ್ನ ದಿರಲಿ. ಅದಕ್ಕಿಂತ ಒಳ್ಳೆ ಆಶೀರ್ವಾದವಿದಿಯೆ?

ಆ ದಿನ ಹೇಮನಳಿನಿ ನಗುನಗುತ್ತಿದ್ದಳು. ತಂದೆಯೊಡನೆ "ಅಕ್ಷಯ ಬಾಬು ನಿಮ್ಮ ಮಾತ್ರೆ ತೆಗೆದು ಕೊಳ್ಳದೆಯೇ ಆರೋಗ್ಯವಾಗಿದ್ದಾರೆ. ಅವು ಗಳಿಂದ ಏನಾದರೂ ಪ್ರಯೋಜನವಿದ್ದಿದ್ದರೆ ತಲೆ ನೋವಾದರೂ ಬರು ತ್ತಿತ್ತು."

ಜೋಗೇಂ—ಅವನು ಮಾತ್ರೆಗೆ ದ್ರೋಹಮಾಡಿದ್ದಾನೆ.

ತನ್ನನ್ನು ಎಲ್ಲರೂ ಹಾಸ್ಯಮಾಡಿದುದರಿಂದ ಆನಂದಬಾಬುವಿಗೆ ಬಹಳ ಸಂತೋಷವಾಯಿತು

ಆನಂದ—ನನ್ನ ಮಾತು ಕೇಳುವವನು ಅವನೊಬ್ಬನೇ. ಅವನ ನಂಬಿಕೆಯನ್ನೂ ನೀವು ನಾಶಮಾಡುತ್ತೀರಿ.

ಅಕ್ಷಯ—ನೀವು ಹೆದರಬೇಡಿ, ಆನಂದಬಾಬು. ನನ್ನ ನಂಬಿಕೆ ಕೆಡಿಸಲು ಯಾರಿಗೂ ಸಾಧ್ಯವಿಲ್ಲ.

ಹೇಮನಳಿನಿ ತಲೆ ಬಾಚಿಕೊಳ್ಳಲು ಎದ್ದು ಹೋದಳು. ಅಕ್ಷಯನೂ ಹೊರಟುಹೋದನು ಜೋಗೇಂದ್ರ ತಂದೆಯೊಡನೆ, "ಹೇಮನಳಿನಿಗೆ ಬೇಗ ಮದುವೆ ಮಾಡಬೇಕು," ಎಂದನು. ಆನಂದಬಾಬುವಿಗೆ ಗಾಬರಿ ಯಾಯಿತು. ಜೋಗೇಂದ್ರ ಪುನಃ, "ಜನರು ಆಡಿಕೊಳ್ಳುತ್ತಾರೆ. ಯಾರಿಗೂ ನಿಜ ಹೇಳುವ ಹಾಗಿಲ್ಲ. ಮದುವೆಯಾದರೆ ಮಾತು ನಿಲ್ಲುತ್ತೆ.

ಹೇಳುವುದು ವಾಸಿ."

ಆನಂದ–ಯಾರಿಗೆ ಕೊಟ್ಟು ಮದುವೆ ಮಾಡುವುದು?

ಜೋಗೇಂ—ಈಗ ಸಿಕ್ಕುವವನು ಒಬ್ಬನೆ. ನನ್ನ ಮಾತು ಕೇಳುವುದು ಅಕ್ಷಯನೊಬ್ಬನೇ. ಮಾತ್ರ ಕೊಟ್ಟರೆ ತೆಗೆದುಕೊಳ್ಳುತ್ತಾನೆ. ಮದುವೆಯಾಗೆಂದರೆ ಆಗುತ್ತಾನೆ.

ಆನಂದ–ನಿನಗೆ ಹುಚ್ಚೇ ಜೋಗೇನ್? ಹೇಮನಳಿನಿ ಅಕ್ಷಯನನ್ನು ಮದುವೆಯಾಗುವಳೆ?

ಜೋಗೇ—ನೀವು ತಲೆ ಹಾಕದಿದ್ದರೆ ನಾನು ಒಪ್ಪಿಸುತ್ತೇನೆ.

ಆನಂದ—ಬೇಡ ಜೋಗೇನ್. ಅವಳನ್ನು ಹಿಂಸೆಮಾಡಬೇಡ. ಬಹಳ ಸಂಕಟಪಡುತ್ತಿದ್ದಾಳೆ. ಮದುವೆಗೇನು ಅವಸರ?

ಜೋಗೇನ್–ನಾನು ಬಲವಂತಮಾಡುವುದಿಲ್ಲ. ನಿಧಾನವಾಗಿಯೇ ಹೇಳುತ್ತೇನೆ. ಜಗಳವಾಡದೆ ಮಾತನಾಡುವುದಕ್ಕೇ ನನಗೆ ಬರುವುದಿಲ್ಲವೆ?

ಜೋಗೇಂದ್ರನಿಗೆ ನಿಧಾನಮಾಡುವ ಅಭ್ಯಾಸವಿರಲಿಲ್ಲ. ಹೇಮನಳಿನಿ ತಲೆ ಬಾಚಿಕೊಂಡು ಬರುತ್ತಲೇ "ಹೇಮಾ ನಿನ್ನೊಡನೆ ಮಾತನಾಡಬೇಕು." ಎಂದನು.

ಹೇಮ ಗಾಬರಿಯಿಂದ ಅವನ ಹಿಂದೆ ಹೋದಳು.

"ತಂದೆಯವರು ಎಷ್ಟು ಇಳಿದು ಹೋಗಿದ್ದಾರೆ, ನೋಡಿದೆಯಾ?"

ಹೇಮನಳಿನಿ ಸುಮ್ಮನಿದ್ದಳು.

ಜೋಗೇಂದ್ರ–"ಎಚ್ಚರಿಕೆಯಾಗಿರದಿದ್ದರೆ ಅವರು ಖಾಯಿಲೆ ಬೀಳುವುದು ಖಂಡಿತ." ತಾನೇ ತಂದೆಯ ಖಾಯಿಲೆಗೆ ಕಾರಣಳೆಂದು ಅವನ ಅಭಿಪ್ರಾಯವೆಂದು ಧ್ವನಿಯಿಂದ ಹೇಮನಳಿನಿಗೆ ತಿಳಿಯಿತು. ಸೆರಗಿನಿಂದ ದಾರಗಳನ್ನೆಳೆಯುತ್ತಾ ಸುಮ್ಮನೆ ನಿಂತಿದ್ದಳು.

ಜೋಗೇಂ—"ಆದುದಾಯಿತು. ಕಳೆದುಹೋದುದಕ್ಕೆ ಚಿಂತಿಸಿ ಫಲವಿಲ್ಲ. ತಂದೆಯವರ ಮನಸ್ಸಿಗೆ ಶಾಂತಿಯುಂಟಾಗಬೇಕಾದರೆ ನೀನು ಆ ವಿಚಾರವನ್ನೆಲ್ಲಾ ಮರೆತುಬಿಡಬೇಕು" ಎಂದು ತಂಗಿಯ ಮುಖವನ್ನೇ ನೋಡುತ್ತಾ ನಿಂತನು.

ಹೇಮ—ನಾನಿನ್ನು ಆ ವಿಚಾರ ಮಾತನಾಡುವುದಿಲ್ಲ.

ಜೋಗೇಂ—ಅದೇನು ಪ್ರಯೋಜನ? ಹಾಗೆ ಜನರ ಬಾಯಿ ಮುಚ್ಚಿಸಲಾಗುವುದಿಲ್ಲ.

ಹೇಮ—ಮತ್ತೇನು ಮಾಡಬೇಕು?

ಜೋಗೇ—ಅದಕ್ಕೊಂದೇ ದಾರಿ.

ಹೇಮನಳಿನಿಗೆ ಜೋಗೇಂದ್ರನ ಅಭಿಪ್ರಾಯ ತಿಳಿಯಿತು.

"ಸ್ಥಳ ಬದಲಾಯಿಸಿದರೆ ಒಳ್ಳೆಯದು. ಮೂರು ನಾಲ್ಕು ತಿಂಗಳು ಬಿಟ್ಟು ಬಂದರೆ ಜನರಿಗೆ ಮರೆತು ಹೋಗಿರುತ್ತೆ," ಎಂದಳು.

ಜೋಗೇಂ—ಅದರಿಂದಲೂ ಪ್ರಯೋಜನವಿಲ್ಲ. ನೀನು ಸುಖವಾಗಿದ್ದೀಯೆಂದು ತಂದೆಯುವರಿಗೆ ತೋರುವವರೆಗೂ ಅವರು ಸರಿಹೋಗುವುದಿಲ್ಲ.

ಹೇಮನಳಿನಿ ಕಣ್ಣಲ್ಲಿ ತುಂಬಿದ ನೀರನ್ನು ಒರೆಸಿಕೊಂಡು, "ಹಾಗಾದರೆ ಏನು ಮಾಡಬೇಕು?" ಎಂದಳು.

ಜೋಗೇಂ—ನಾನು ಹೇಳಿದರೆ ನಿನಗೆ ರುಚಿಸುವುದಿಲ್ಲ. ನೀನು ಬೇಗ ಮದುವೆಯಾಗುದೊಂದೇ ದಾರಿ.

ಹೇಮನಳಿನಿಗೆ ಮಾತನಾಡಲಾಗಲಿಲ್ಲ.

ಜೋಗೇಂದ್ರ ಬೇಸರದಿಂದ, "ಎಲ್ಲವನ್ನೂ ಹೆಂಗಸರು ಅತಿ ಮಾಡುತ್ತಾರೆ. ನಿನಗಾಗಿರುವಂತೆ ಎಷ್ಟೋ ಜನರಿಗಾಗಿದೆ. ಎಷ್ಟೊ ಮದುವೆಗಳಲ್ಲಿ ಗಲಾಟೆಯಾಗಿದೆ. ಬೇರೆ ಮದುವೆ ಮಾಡಿಕೊಂಡು ಹಾಯಾಗಿರುತ್ತಾರೆ. ಇಲ್ಲದಿದ್ದರೆ ಬದುಕಿರುವುದೇ ಅಸಾಧ್ಯ. ಎಲ್ಲರಿಗೂ ಗೋಳನ್ನು ತೋರಿಸಿ ಕೊಳ್ಳುವುದು ನಿನಗೆ ಚನ್ನಾಗಿ ತೋರಬಹುದು. ಅವಮಾನದಿಂದ ನಮ್ಮ ಪ್ರಾಣ ಹೋಗುತ್ತೆ. ಯಾರನ್ನಾದರೂ ಯೋಗ್ಯನನ್ನು ಮದುವೆಯಾಗಿ ಈ ನಾಟಕ ಮುಗಿಸು."

ಒಂದೊಂದು ಮಾತೂ ಹೇಮನಳಿನಿಯನ್ನು ಅಲಗಿನಂತೆ ಚುಚ್ಚಿತು. "ನಾನು ಸನ್ಯಾಸಿನಿಯಾಗುವೆನೆಂದು ಹೇಳಿದೆನೆ?"

"ಇಲ್ಲದಿದ್ದರೆ ಮದುವೆಯಾಗು. ಪ್ರಪಂಚದಲ್ಲಿ ಎಲ್ಲಾ ನಮ್ಮಿಷ್ಟದಂತೆಯೇ ನಡೆಯುವುದಿಲ್ಲ. ಸರಿಮಾಡಿಕೊಂಡು ಜೀವನವನ್ನು ನಡೆಸಿಕೊಂಡು ಹೋಗಬೇಕು."

"ನನ್ನನ್ನೇಕೆ ಅಪಹಾಸ್ಯಮಾಡುತ್ತೀ ? ನನ್ನಿಷ್ಟದ ಮಾತನ್ನೇ ನಾನೆತ್ತಲಿಲ್ಲವಲ್ಲ."

"ನೀನೇನೂ ಮಾತನಾಡುವುದಿಲ್ಲ. ಆದರೂ ನನಗೆ ತಿಳಿಯುತ್ತೆ. ಯಾರಾದರೂ ಸರಿಬೀಳದಿದ್ದರೆ ಅವರೆದುರಿಗೇ ನಿನ್ನ ಅಸಮಾಧಾನವನ್ನು ತೋರಿಸುತ್ತೀ. ಕಷ್ಟ ಸುಖಗಳಲ್ಲಿ ನಮ್ಮನ್ನು ನಂಬಿಕೊಂಡಿರುವವ ನಿದ್ದಾನೆ. ತನ್ನ ಪ್ರಾಣವನ್ನು ನಿನ್ನ ಸುಖಕ್ಕಾಗಿ ಕೊಡುವ ಗಂಡನೆಲ್ಲಿದ್ದಾನೆಂದು ನಿನಗೆ ಗೊತ್ತು. ಆದರೆ ನಾಟಕದಲ್ಲೇ ನಿನಗೆ ಸಂತೋಷ ವಿದ್ದರೆ ......"

ಹೇಮನಳಿನಿ ತಟ್ಟನೆ ಎದ್ದು ನಿಂತಳು. "ನೀನು ಹಾಗೆ ಮಾತನಾಡ ಬೇಡ. ಅಪ್ಪ ಖಂಡಿತವಾಗಿ ಹೇಳಿದರೆ ನಾನು ಯಾರನ್ನು ಬೇಕಾದರೂ ಮದುವೆ ಮಾಡಿಕೊಳ್ಳುತ್ತೇನೆ. ಅವರ ಮಾತಿಗೆ ಎದುರಾಡಿದಾಗ ನೀನು ನಾಟಕವೆನ್ನು."

ಜೋಗೇಂದ್ರ ಸಮಾಧಾನವಾಗಿ, "ಕೋಪಿಸಿಕೊಳ್ಳ ಬೇಡ, ಹೇಮಾ. ಕೋಪ ಬಂದಾಗ ಸಿಕ್ಕಿದಹಾಗೆ ಮಾತನಾಡುವುದು ನನ್ನ ಸ್ವಭಾವವೆಂದು ನಿನಗೂ ತಿಳಿದಿದೆ. ನಿನ್ನದು ಮೃದುಸ್ವಭಾವವೆಂದೂ, ನೀನು ತಂದೆಯನ್ನು ಪ್ರೀತಿಸುತ್ತೀಯೆಂದೂ ನಾನು ಬಲ್ಲೆ-" ಎಂದು ಹೇಳಿ ತಂದೆಯನ್ನು ಹುಡುಕಿಕೊಂಡು ಹೋದನು.

ಆನಂದಬಾಬು ತನ್ನ ಕೋಣೆಯಲ್ಲಿ ಕುಳಿತಿದ್ದನು. ಜೋಗೇಂದ್ರ ಹೇಮನಳಿನಿಯನ್ನು ಪೀಡಿಸುತ್ತಿದ್ದಾನೆಂದು ಮುದುಕ ತಲ್ಲಣಿಸುತ್ತಿದ್ದನು.

ಜೋಗೇಂ—ಹೇಮನಳಿನಿ ಮದುವೆಗೆ ಒಪ್ಪಿದಳು. ನಾನೇನೂ ಬಲವಂತ ಮಾಡಲಿಲ್ಲ. ನೀವು ಖಂಡಿತವಾಗಿ ಹೇಳಿದರೆ ಅಕ್ಷಯನನ್ನೇ ಮದುವೆಯಾಗುತ್ತಾಳೆ.

ಆನಂದ—ನಾನು ಹೇಳಬೇಕೆ?

ಜೋಗೇಂ—ಹೌದು. ಅವಳೇ ಹೇಳುತ್ತಾಳೆಯೆ? ನಾನೇ ಬೇಕಾದರೂ ಹೇಳುತ್ತೇನೆ.

ಆನಂದ—ಬೇಡ, ಬೇಡ. ನಾನೇ ಹೇಳುತ್ತೇನೆ. ಇನ್ನೂ ಕೆಲವು ದಿನ ಹೋಗಲಿ. ಅವಸರವೇನು?

ಜೋಗೇಂ—ಬೇಡ. ತಡಮಾಡಿದರೆ ಏನಾದರೂ ಅಡ್ಡಿ ಬರುತ್ತೆ. ಬಹಳ ದಿನ ಹೀಗಿರಲು ಸಾಧ್ಯವಿಲ್ಲ.

ಆನಂದಬಾಬುವಿಗೂ ಜೋಗೇಂದ್ರನನ್ನು ಕಂಡರೆ ಹೆದರಿಕೆ. "ಆಗಲಿ ಹೇಳುತ್ತೇನೆ," ಎಂದನು.

ಜೋಗೇಂ—ಈಗಲೇ ಹೇಳಿ. ನಿಮಗೋಸ್ಕರ ಕಾದಿದ್ದಾಳೆ. ಬೇಗ ಗೊತ್ತು ಮಾಡಿಬಿಡಿ.

ಆನಂದ—ನೀನಿಲ್ಲಿಯೇ ಇರು. ನಾನೊಬ್ಬನೇ ಮಾತನಾಡಿ ಬರುತ್ತೇನೆ.

ಜೋಗೇಂ—ಆಗಲಿ ಕಾದಿರುತ್ತೇನೆ.

ಆನಂದಬಾಬು ಹೋಗುವ ವೇಳೆಗೆ ಕೋಣೆಯಲ್ಲಿ ದೀಪವಿರಲಿಲ್ಲ. ಹೇಮನಳಿನಿ ಅಳುದನಿಯಲ್ಲಿ, "ದೀಪ ಆರಿಹೋಯಿತಪ್ಪಾ, ಬೇರೆ ದೀಪ ತರಿಸಲೆ?" ಎಂದಳು. ಅವಳೇ ಆರಿಸಿದಳೆಂದು ಆನಂದಬಾಬುವಿಗೆ ತಿಳಿಯಿತು. "ಬೇಡಮ್ಮಾ, ದೀಪವೇಕೆ?" ಎಂದು ಅವಳ ಪಕ್ಕದಲ್ಲಿದ್ದ ಕುರ್ಚಿಯಲ್ಲಿ ಕುಳಿತನು.

"ನಿನ್ನ ಆರೋಗ್ಯವನ್ನು ಎಚ್ಚರಿಕೆಯಿಂದ ನೋಡಿಕೊಳ್ಳಬೇಕಪ್ಪಾ," ಎಂದಳು.

"ನನಗೇನಾಗಿದೆ? ನೀನೇ ಹುಷಾರಾಗಿರಬೇಕು."

ಹೇಮ—"ಎಲ್ಲರೂ ಹೀಗೇ ಹೇಳುತ್ತೀರಿ. ಹೇಳಿದ ಹಾಗೆ ನಾನು ಕೇಳುತ್ತೇನೆ. ನಿನ್ನ ಮಾತಿಗೆ 'ಇಲ್ಲವೆಂದು' ಎಂದಾದರೂ ಹೇಳಿದ್ದೇನೆಯೆ?" ಎಂದು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.

"ಇಲ್ಲಮ್ಮಾ, ಇಲ್ಲ. ನಾನು ಹೇಳುವ ಮೊದಲೇ, ನನ್ನಿಷ್ಟವನ್ನು ತಿಳಿದುಕೊಂಡು, ನಿಮ್ಮ ತಾಯಿಯ ಹಾಗೆ ನನ್ನ ಉಪಚಾರಮಾಡುತ್ತೀ. ಎಂದೆಂದಿಗೂ ನೀನು ಸುಖವಾಗಿರಮ್ಮಾ."

ಹೇಮ—ನಾನು ನಿನ್ನ ಬಳಿ ಇರಕೂಡದೆ?

ಆನಂದ—ಬೇಡವೆಂದೆನೆ?

ಹೇಮ—ಜೋಗೇಂದ್ರನಿಗೆ ಮದುವೆಯಾಗುವವರೆಗಾದರೂ ಇಲ್ಲಿರಬಹುದಲ್ಲವೆ? ನಾನಿಲ್ಲದಿದ್ದರೆ ನಿನ್ನನ್ನು ನೋಡಿಕೊಳ್ಳುವರಾರು?

ಆನಂದ—ನನ್ನನ್ನು ನೋಡಿಕೊಳ್ಳುವುದೇನು?

ಹೇಮ ದೀಪವನ್ನು ತಂದು, "ಬಹಳ ಕತ್ತಲು! ಕೆಲವು ದಿನಗಳಿಂದ ವೃತ್ತಪತ್ರಿಕೆಯನ್ನೇ ಓದಲಿಲ್ಲ. ಈಗ ಓದಲೆ?" ಎಂದಳು.

ಆನಂದಬಾಬು "ಸ್ವಲ್ಪ ತಾಳು. ಬರುತ್ತೇನೆ," ಎಂದು ಹೇಳಿ ಜೋಗೇಂದ್ರನ ಬಳಿಗೆ ಹೋದನು. "ನಾಳೆಯವರೆಗೂ ನಿಧಾನಿಸೋಣ," ಎಂದು ಹೇಳಬೇಕೆಂದಿದ್ದವನು, ಜೋಗೇಂದ್ರನ ಪ್ರಶ್ನೆಗೆ, "ಮಾತ ನಾಡಿದೆ," ಎಂದನು.

"ಒಪ್ಪಿಕೊಂಡಳೋ?"

"ಒಪ್ಪಿಕೊಂಡ ಹಾಗೇ."

"ಹಾಗಾದರೆ ಅಕ್ಷಯನಿಗೆ ಹೇಳುತ್ತೇನೆ."

"ಬೇಡ. ಈಗಲೇ ಹೇಳಬೇಡ. ಅವಸರದಿಂದ ಕೆಲಸಕೆಡುತ್ತೆ. ಪ್ರಯಾಣ ಹೋಗಿ ಬಂದ ಮೇಲೆ ಎಲ್ಲಾ ಗೊತ್ತು ಮಾಡೋಣ." ಎಂದನು.

ಜೋಗೇಂದ್ರ ಉತ್ತರ ಕೊಡದೆ ಅಕ್ಷಯನ ಮನೆಗೆ ಹೋಗಿ "ನಿನ್ನ ಮದುವೆಗೆ ದಿನ ಗೊತ್ತು ಮಾಡೋಣ," ಎಂದನು.

ಅಕ್ಷಯನಿಗೆ ಆಶ್ಚರ್ಯದಿಂದ ಮಾತೇ ಹೊರಡಲಿಲ್ಲ.

## ಅಧ್ಯಾಯ ೩೯

ಹೇಮನಳಿನಿ ಬೆಳಗ್ಗೆ ಬೇಗ ಎದ್ದು ತಂದೆಯನ್ನು ಹುಡುಕಿಕೊಂಡು ಹೋದಳು. ಆನಂದಬಾಬು ಮಲಗುವ ಮನೆಯಲ್ಲಿ ಕಿಟಕಿಯ ಬಳಿ ಚಿಂತಿಸುತ್ತಾ ಕುರ್ಚಿಯ ಮೇಲೆ ಕುಳಿತಿದ್ದನು. ಕೋಣೆಯಲ್ಲಿ ಒಂದು ಮಂಚ, ಬೀರು ಮಾತ್ರವಿದ್ದುವು. ಗೋಡೆಯ ಮೇಲೆ ಹೇಮನಳಿನಿಯ ತಾಯಿಯ ಪಟವಿದ್ದಿತು. ಆಕೆಯ ಕೆಲವು ಪದಾರ್ಥಗಳು ಬೀರುವಿನಲ್ಲಿ ದ್ದುವು. ಹೇಮನಳಿನಿ ತಂದೆಯ ಹಿಂದೆ ನಿಂತು ಆತನ ತಲೆಯ ಮೇಲೆ ಕೈಯಾಡಿಸಿದಳು.

"ಈದಿನ ಬೇಗ ಚಹಾ ಮುಗಿಸಿ ನಿನ್ನ ಕೋಣೆಯಲ್ಲಿ ಕುಳಿತು

ಹಿಂದಿನ ದಿನಗಳ ವಿಚಾರವಾಗಿ ಮಾತನಾಡೋಣ. ನನಗೆ ಅದು ತುಂಬಾ ಇಷ್ಟ."

ಅವಳೇಕೆ ಚಹಾ ಬೇಗ ಮುಗಿಸಬೇಕೆಂದಳೆಂಬುದು ಆನಂದ ಬಾಬುವಿಗೆ ತಿಳಿಯಿತು. ಬೇಗ ಮುಗಿಸಿದರೆ ಅಕ್ಷಯನಿಂದ ತಪ್ಪಿಸಿಕೊಳ್ಳ ಬಹುದಾಗಿತ್ತು. ಹೆದರಿದ ಹರಿಣಿಯಂತಿದ್ದ ಮಗಳನ್ನು ನೋಡಿ ಆತನಿಗೆ ತುಂಬಾ ಮರುಕವುಂಟಾಯಿತು.

ಕೆಳಗೆ ಬಂದು ನೀರಿನ್ನೂ ಮರಳುತ್ತಿರಲಿಲ್ಲವೆಂದು ಆಳಿನ ಮೇಲೆ ರೇಗಿದನು. ಇಷ್ಟು ಬೇಗ ಚಹಾ ಬೇಕೆಂದು ತನಗೆ ತಿಳಿದಿರಲಿಲ್ಲವೆಂದು ಆಳು ಉತ್ತರ ಕೊಟ್ಟನು. ಈಗಿನ ಆಳುಗಳು ತುಂಬಾ ತಲೆ ಹರಟೆ ಮಾಡುವರೆಂದೂ, ಆಳುಗಳನ್ನು ಎಬ್ಬಿಸುವುದಕ್ಕೇ ಒಬ್ಬ ಆಳಿರಬೇಕೆಂದೂ ಆನಂದಬಾಬು ಕೂಗಾಡಿದನು.

ಬಿಸಿನೀರು ಬರಲು, ಎಂದಿನಂತೆ ಮಾತನಾಡುತ್ತಾ ನಿಧಾನವಾಗಿ ಚಹಾ ಕುಡಿಯದೆ ಆನಂದಬಾಬು ಬೇಗ ಬೇಗ ಕುಡಿಯಲಾರಂಭಿಸಿದನು.

ಹೇಮ—ಏನಷ್ಟವಸರ? ಎಲ್ಲಾದರೂ ಹೋಗಬೇಕೆ?

ಆನಂದ—ಇಲ್ಲ. ಛಳಿಯಾದುದರಿಂದ ಬೇಗ ಕುಡಿದೆ. ಬಿಸಿತರಿ ಒಳ್ಳೆಯದು.

ಅಷ್ಟರಲ್ಲಿ ಅಕ್ಷಯನೊಡನೆ ಜೋಗೇಂದ್ರ ಅಲ್ಲಿಗೆ ಬಂದನು. ಅಕ್ಷಯ ಜಾಗರೂಕತೆಯಿಂದ, ಬಟ್ಟೆಗಳನ್ನು ಧರಿಸಿದ್ದನು. ಕೈಯಲ್ಲಿ ಬೆಳ್ಳಿ ಹಿಡಿಯ ಬೆತ್ತ, ಜೇಬಿನಲ್ಲಿ ಗಡಿಯಾರದ ಸರವಣಿ ಇದ್ದುವು. ಎಡ ಗೈಯಲ್ಲಿ ಒಂದು ಪುಸ್ತಕವಿತ್ತು. ಹೇಮನಳಿನಿಯ ಹತ್ತಿರಕ್ಕೆ ಒಂದು ಕುರ್ಚಿಯನ್ನೆಳೆದುಕೊಂಡು "ನಿಮ್ಮ ಗಡಿಯಾರ ಮುಂದಕ್ಕಿದೆ" ಎಂದನು.

ಹೇಮನಳಿನಿ ಅವನ ಕಡೆ ನೋಡಲೂ ಇಲ್ಲ. ಮಾತನಾಡಲೂ ಇಲ್ಲ.

ಆನಂದಬಾಬು, "ಹೇಮಾ, ಮೇಲೆ ಹೋಗಿ ನನ್ನ ಬಟ್ಟೆಗಳನ್ನು ಬಿಸಿಲಿಗೆ ಹಾಕೋಣ," ಎಂದನು.

ಜೋಗೇಂದ್ರ—"ಏನಷ್ಟವಸರ? ಸೂರ್ಯ ಓಡಿಹೋಗುವುದಿಲ್ಲ. ಹೇಮಾ, ಅಕ್ಷಯನಿಗೆ ಒಂದು ಬಟ್ಟಲು ಚಹಾ ಕೊಡು. ನನಗೂ ಬೇಕು.

ಆದರೆ ಅತಿಥಿಗಳ ಉಪಚಾರ ಮೊದಲು."

ಅಕ್ಷಯ ನಕ್ಕು, "ಉಪಚಾರವೇನು?" ಎಂದನು.

ಹೇಮನಳಿನಿ ಎರಡು ಬಟ್ಟಲುಗಳಲ್ಲಿ ಚಹಾ ಸುರಿದು ಇಬ್ಬರ ಮುಂದೆಯೂ ಇಟ್ಟಳು.

ಆನಂದ—ಹೊತ್ತಾಯಿತು, ಬಾ ಹೇಮ. ಮೇಲೆ ಹೋಗೋಣ.

ಜೋಗೇಂ—ಬಟ್ಟಿಗಳಿರಲಿ. ಅಕ್ಷಯ.... ....

ಆನಂದಬಾಬುವಿಗೆ ಬಹಳ ಸಿಟ್ಟು ಬಂತು. "ಸುಮ್ಮನೆ ನೀವಿಬ್ಬರೂ ಅವಳನ್ನು ಹಿಂಸಿಸುತ್ತೀರಿ. ನನಗೂ ಸಾಕಾಯಿತು. ಮುಂದಕ್ಕೆ ನಮ್ಮ ಕೋಣೆಯಲ್ಲೇ ಚಹಾ ಕುಡಿಯೋಣ ಹೇಮಾ," ಎಂದನು.

"ತಾಳಪ್ಪಾ. ಚಹಾ ತೀರ ಕುಡಿ. ನಿಮ್ಮ ಕೈಯಲ್ಲಿರುವ ಪುಸ್ತಕ ವೇನು, ಅಕ್ಷಯಬಾಬು?" ಹೇಮ ಕೇಳಿದಳು.

"ನೀವೇ ನೋಡಿ," ಎಂದು ಅಕ್ಷಯ ಕೊಟ್ಟನು.

ಕಾಗದ ಬಿಚ್ಚಿ ನೋಡಲು ಟೆನಿಸನ್ನನ ಕವಿತೆಗಳ ಪುಸ್ತಕ. ಅವಳು ಮೊದಲೊಂದು ಸಲ ಅದೇ ಬಹುಮಾನವನ್ನು ಸ್ವೀಕರಿಸಿದ್ದಳು. ಬೇರೆ ಯಾರಿಗೂ ತಿಳಿಯದಂತೆ ಮಹಡಿಯ ಮೇಲೆ ಡ್ರಾಯರಿನಲ್ಲಿ ಒಂದು ಪುಸ್ತಕವನ್ನಿಟ್ಟಿದ್ದಳು.

ಜೋಗೇಂದ್ರ, "ತೆಗೆದು ನೋಡು," ಎಂದು ರಟ್ಟು ತೆಗೆದು ತೋರಿಸಿದನು. ಒಳಗೆ "ಶ್ರೀಮತಿ ಹೇಮನಳಿನಿಗೆ—ಅಕ್ಷಯನ ಮೆಚ್ಚಿಗೆಯ ಕುರುಹಾಗಿ," ಎಂದು ಬರೆದಿತ್ತು.

ಹೇಮನಳಿನಿ ಪುಸ್ತಕವನ್ನು ಕೆಳಗೆ ಹಾಕಿ "ಬಾಪ್ಪ," ಎಂದು ಆನಂದಬಾಬುವಿನೊಡನೆ ಎದ್ದು ಹೋದಳು.

ಜೋಗೇಂದ್ರ ಬೇಸರದಿಂದ, "ಈ ಮನೆಯಲ್ಲಿರಲು ನನಗೆ ಸಾಧ್ಯವಿಲ್ಲ. ಎಲ್ಲಾದರೂ ಉಪಾಧ್ಯಾಯನಾಗಿ ಹೊಟ್ಟೆ ಹೊರೆಯುವುದು ಮೇಲು," ಎಂದನು.

ಅಕ್ಷಯ—ಅಷ್ಟು ಮನಸ್ಸಿಗೆ ಹಚ್ಚಿಕೊಳ್ಳಬಾರದು. ಹೇಮನಳಿನಿಗೆ ನನ್ನಲ್ಲಿ ವಿಶ್ವಾಸವಿಲ್ಲ. ಅವಳು ರಮೇಶನನ್ನು ಮರೆಯುವಂತೆ ಮಾಡುವುದೇ ನಮ್ಮ ಈಗಿನ ಕೆಲಸ.

ಜೋಗೇಂ—ನಿಜ. ಆದರೆ ಹೇಗೆ?

ಅಕ್ಷಯ—ಮದುವೆಯಾಗಲಿರುವವನು ನಾನೊಬ್ಬನೇ ಅಲ್ಲ. ಅವಳಿಗೆ ಇಷ್ಟನಾದ ವರನನ್ನು ಹುಡುಕಬೇಕು.

ಜೋಗೇಂ—ಪೇಟೆಯಿಂದ ತರುವುದಕ್ಕಾಗುತ್ತದೆಯೇ?

ಅಕ್ಷಯ—ಅವಸರದಿಂದ ಕೆಲಸ ಕೆಡುವುದು. ಮದುವೆಯ ಮಾತನ್ನೇ ಎತ್ತದೆ ಇದ್ದು ವರನ ಗುರುತು ಮಾಡಿಕೊಡಬೇಕು.

ಜೋಗೇಂ—ಆಲೋಚನೆಯೇನೋ ಸರಿಯೆ. ಆದರೆ ವರನಾರು?

ಅಕ್ಷಯ—ಆತನ ಗುರುತು ನನಗಿಲ್ಲ. ಆದರೆ ಡಾಕ್ಟರ್ ನಳಿನಾಕ್ಷ ನನ್ನು ನೋಡಿರಬಹುದು.

ಜೋಗೇಂ—ನಳಿನಾಕ್ಷ!

ಅಕ್ಷಯ—ಅಷ್ಟು ಆಶ್ಚರ್ಯವೆ? ಬ್ರಹ್ಮ ಸಮಾಜದಲ್ಲಿ ಆತನ ವಿಚಾರವಾಗಿ ಏನೇನೋ ಮಾತಿದೆ. ಆದರೆ ಒಳ್ಳೆಯ ವರ.

ಜೋಗೇಂ—ಅದು ನಿಜ. ಆದರೆ ಆತನು ಒಪ್ಪುವನೆ?

ಅಕ್ಷಯ—ತಟ್ಟನೆ ಒಪ್ಪಲಾರನು. ನಿಧಾನಿಸ ಬೇಕು. ನಾಳೆ ಆತನ ಉಪನ್ಯಾಸವಿದೆ. ಬಹಳ ಚನ್ನಾಗಿ ಮಾತನಾಡುತ್ತಾನೆ. ಮಾತ ನಾಡುವವರನ್ನು ಕಂಡರೆ ಹೆಂಗಸರಿಗೆ ಬಹಳ ಸಂತೋಷ! ಪಾಪ! ಹೇಳಿ ದ್ದನ್ನು ಕೇಳುವ ಗಂಡನೇ ವಾಸಿಯೆಂದು ಅವರು ಅರಿಯರು.

ಜೋಗೇಂ—ನಳಿನಾಕ್ಷನ ಸಮಾಚಾರವನ್ನೆಲ್ಲಾ ತಿಳಿಸು.

ಅಕ್ಷಯ—ಸ್ವಲ್ಪ ಅಸಮಾಧಾನವಾದರೆ ಹಿಂದೆಗೆಯಕೂಡದು—ಎಂದು ಹೇಳತೊಡಗಿದನು.

"ನಳಿನಾಕ್ಷನ ತಂದೆ ರಾಜವಲ್ಲಭ, ಫರೀದ್‌ಪುರದ ಒಬ್ಬ ಸಣ್ಣ ಜಮೀನ್‌ದಾರ. ಮೂವತ್ತು ವರ್ಷಕ್ಕೆ ಬ್ರಹ್ಮ ಸಮಾಜಕ್ಕೆ ಸೇರಿದನು. ಆತನ ಹೆಂಡತಿ ಮಾತ್ರ ಸೇರಲು ಒಪ್ಪಲಿಲ್ಲ. ನಳಿನಾಕ್ಷನೂ ಬ್ರಹ್ಮ ಸಮಾಜಕ್ಕೆ ಸೇರಿದನು. ವೈದ್ಯನಾಗಿ ಸರ್ಕಾರದ ಕೆಲಸಕ್ಕೆ ಸೇರಿ ಅಲ್ಲಲ್ಲಿ ಇರುತ್ತಿದ್ದನು. ಎಲ್ಲಾ ಕಡೆಯೂ ಒಳ್ಳೆಯ ಹೆಸರು ಪಡೆದು ಗಟ್ಟಿಗ ನಾದ ವೈದ್ಯನೆನ್ನಿಸಿಕೊಂಡನು.

ತಟ್ಟನೆ ಮುದುಕ ರಾಜವಲ್ಲಭ ಒಬ್ಬ ವಿಧವೆಯನ್ನು ಮದುವೆ

ಯಾಗಲು ನಿಶ್ಚಯಿಸಿದನು. ಎಷ್ಟು ಹೇಳಿದರೂ ಹಠಬಿಡದೆ ಹೋದು ದರಿಂದ ನಳಿನಾಕ್ಷನ ತಾಯಿ ಗಂಡನನ್ನು ಬಿಟ್ಟು ಕಾಶಿಗೆ ಹೋಗಲು ನಿಶ್ಚಯಿಸಿದಳು. ಆಗ ನಳಿನಾಕ್ಷ ರಂಗಪುರದಲ್ಲಿ ಸ್ವಂತ ವೈದ್ಯ ವೃತ್ತಿ ಯಲ್ಲಿದ್ದನು. ತಾನೂ ತಾಯಿಯೊಡನೆ ಹೋಗುವುದಾಗಿ ನಿಶ್ಚಯಿಸಿ ದನು. ಮುದುಕಿ "ನಿನಗೇಕೆ ತೊಂದರೆ," ಎಂದು ಹೇಳಿದರೂ ತಾಯಿಯ ದುಃಖದಲ್ಲಿ ಭಾಗಿಯಾದ ನಳಿನಾಕ್ಷ ಅವಳೊಡನೆ ಕಾಶಿಗೆ ಹೋದನು. ಮದುವೆಯಾಗೆಂದು ತಾಯಿ ಹೇಳಿದಳು. "ಈಗಲೇ ಸುಖವಾಗಿದ್ದೇನೆ" ಎಂದು ಆತ ಉತ್ತರವಿತ್ತನು. ಬ್ರಹ್ಮಸಮಾಜವನ್ನು ಬಿಟ್ಟು ಬೇರೆ ಮದುವೆಯಾಗಲು ಅವನಿಗಿಷ್ಟವಿಲ್ಲವೆಂದು ತಿಳಿದು, "ನನಗಾಗಿ ನೀನು ಸನ್ಯಾಸಿಯಾಗಬಾರದು. ಬೇಕಾದವರನ್ನು ಮದುವೆಯಾಗು," ಎಂದಳು.

ನಳಿನಾಕ್ಷ ಯೋಚಿಸಿ, "ನಿನಗೆ ಇಷ್ಟವಾದ ಸೊಸೆಯನ್ನೇ ತರು ತ್ತೇನೆ," ಎಂದು ವಧುವನ್ನು ಹುಡುಕಿಕೊಂಡು ಹೋದನು.

ಆಮೇಲೇನಾಯಿತೋ ಅನೇಕ ಕಥೆಗಳಿವೆ. ಅನಾಥ ಬಾಲಕಿ ಯೊಬ್ಬಳನ್ನು ಮದುವೆಯಾದನೆಂದೂ ಅವಳು ಸತ್ತಳೆಂದೂ ಹೇಳುತ್ತಾರೆ. ಕೆಲವರು ಸುಳ್ಳೆನ್ನುತ್ತಾರೆ. ನನಗೆ ತೋರುವುದು, ಮದುವೆಯೇ ಆಗಲಿಲ್ಲ ವೆಂದು. ಈ ಮದುವೆಗೆ ನಳಿನಾಕ್ಷನ ತಾಯಿ ಒಪ್ಪಬಹುದು. ಹೇಮ ನಳಿನಿಯ ವಿಶ್ವಾಸಪ್ರಕೃತಿ ಯಾರ ಮನಸ್ಸನ್ನಾದರೂ ಸೆಳೆಯುವುದು. ಗುರುತಾದರೆ ನಳಿನಾಕ್ಷ ಒಪ್ಪಿಯೇ ತೀರುತ್ತಾನೆ."

ಹೀಗೆ ಹೇಳಿ ಇಬ್ಬರಿಗೂ ಬೇಗ ಗುರುತು ಮಾಡಿಸಬೇಕೆಂದು ಅಕ್ಷಯ ಹೇಳಿದನು.

## ಅಧ್ಯಾಯ ೪೦

ಅಕ್ಷಯ ಹೊರಡುತ್ತಲೇ ಜೋಗೇಂದ್ರ ಮಹಡಿಯ ಮೇಲಕ್ಕೆ ಹೋದನು. ಆನಂದಬಾಬು, ಹೇಮನಳಿನಿ ಮಾತನಾಡುತ್ತಾ ಕುಳಿ ತಿದ್ದರು. ಕೂಗಾಡಿದುದಕ್ಕೆ ಪಶ್ಚಾತ್ತಾಪಪಟ್ಟು ಆನಂದಬಾಬು ಜೋಗೇಂದ್ರನನ್ನು ವಿಶ್ವಾಸದಿಂದ "ಬಾ ಜೋಗೇಂದ್ರ, ಕುಳಿತುಕೋ,"

ಎಂದನು.

ಜೋಗೇಂ—ನೀವೂ, ಹೇಮನಳಿನಿಯೂ ಮನೆಬಿಟ್ಟು ಹೊರಗೆ ಹೋಗುವುದಿಲ್ಲ. ಇದು ಒಳ್ಳೆಯದಲ್ಲ.

ಆನಂದ—ನಾವು ಯಾವಾಗಲೂ ಹಾಗೆಯೇ. ಹೋಗುವುದೆಲ್ಲಿಗೆ?

ಹೇಮ—ನಾನು ಎಲ್ಲಿಗೆ ಬೇಕಾದರೂ ಬರುತ್ತೇನೆ.

ಇಷ್ಟವಿಲ್ಲದಿದ್ದರೂ ಅವರಿಗೋಸ್ಕರ ಹೊರಗೆ ಹೊರಡಲು ಹೇಮ ನಳಿನಿ ಸಿದ್ಧವಾಗಿದ್ದಳು.

ಜೋಗೇಂ—ನಾಳೆ ಒಂದು ಉಪನ್ಯಾಸವಿದೆ. ಹೇಮನಳಿನಿಯನ್ನು ಕರೆದುಕೊಂಡು ಹೋಗಿ.

ಅವಳಿಗೆ ಗುಂಪಿನಲ್ಲಿ ಹೋಗುವುದು ಇಷ್ಟವಿಲ್ಲವೆಂದರಿತಿದ್ದ ಆನಂದ ಬಾಬು ಅವಳ ಮುಖವನ್ನು ನೋಡಿದನು.

ಹೇಮ—ಉಪನ್ಯಾಸವೇ? ಯಾರಿಂದ?

ಜೋಗೇಂ—ಡಾಕ್ಟರ್ ನಳಿನಾಕ್ಷ.

ಆನಂದ—ನಳಿನಾಕ್ಷ!

ಜೋಗೇಂ—ಚನ್ನಾಗಿ ಮಾತನಾಡುತ್ತಾರೆ. ಬಹಳ ಒಳ್ಳೆಯ ಮನುಷ್ಯ.

ಎರಡು ಘಂಟೆಗಳ ಕೆಳಗೆ ಜೋಗೇಂದ್ರನಿಗೆ ನಳಿನಾಕ್ಷನ ಸುದ್ದಿಯೇ ತಿಳಿದಿರಲಿಲ್ಲ!

ಹೇಮ—ಹಾಗಾದರೆ ಹೋಗಿ ಬರೋಣಪ್ಪಾ.

ಜನರಲ್ಲಿ ಬೆರೆತು ಮಾತನಾಡುವುದರಿಂದ ಮನಸ್ಸಿನ ದುಃಖ ಕಡಮೆ ಯಾಗಬಹುದೆಂದು ಆನಂದಬಾಬುವಿಗೆ ಹೇಮನಳಿನಿ ಮನೆ ಬಿಟ್ಟು ಹೊರಡುವುದು ಸಂತೋಷವನ್ನು ಮಾಡಿತು.

ಆನಂದ-ಹಾಗಾದರೆ ಎಲ್ಲರೂ ನಾಳೆ ಹೋಗೋಣ, ಜೋಗೇಂದ್ರಾ. ನಳಿನಾಕ್ಷನ ವಿಚಾರದ ಕಥೆಗಳಲ್ಲಿ ಯಾವುದು ನಿಜ?

ಜೋಗೇಂ—ವೈದಿಕರದು ತಲೆಯೆಲ್ಲಾ ಹರಟೆ. ಎಲ್ಲರನ್ನೂ ಬಯ್ಯುತ್ತಾರೆ.

ಆನಂದ—ಸದಾ ಒಬ್ಬರನ್ನು ನಿಂದಿಸುತ್ತಿದ್ದರೆ ಮನಸ್ಸು ಕೆಡುತ್ತದೆ.

ಜೋಗೇಂ—ನನ್ನನ್ನೇ ಆಕ್ಷೇಪಿಸುತ್ತಿದ್ದೀರೋ? ಸಮಯ ಬಂದಾಗ ಒಳ್ಳೆಯವರನ್ನು ಹೊಗಳುವ ಶಕ್ತಿಯೂ ನನಗಿದೆ.

ಆನಂದ—ನಿನ್ನನ್ನೆನ್ನಲಿಲ್ಲ. ನಿನ್ನ ವಿಚಾರ ನನಗೆ ತಿಳಿಯದೆ?

ಜೋಗೇಂದ್ರ ನಳಿನಾಕ್ಷನ ಕಥೆಯನ್ನೆಲ್ಲಾ ಹೇಳಿದನು. "ತಾಯಿ ಗೋಸ್ಕರ ಕಾಶಿಗೆ ಹೋದನು. ಅದಕ್ಕೆ ಎಷ್ಟೋ ಕಥೆಗಳನ್ನು ಹುಟ್ಟಿಸಿದ್ದಾರೆ. ಅವನ ನಡತೆಯನ್ನು ನಾನೇನೋ ಮೆಚ್ಚಿದೆ. ನಿನ್ನ ಅಭಿಪ್ರಾಯವೇನು, ಹೇಮಾ?"

ಹೇಮ—"ನನ್ನ ಅಭಿಪ್ರಾಯವೂ ಅದೆ."

ಜೋಗೇಂ—ನನಗೆ ತಿಳಿದಿತ್ತು. ಅವಳೂ ತಂದೆಗೋಸ್ಕರ ಸ್ವಾರ್ಥವನ್ನು ಮರೆಯುವಳೆಂದು ನಾನು ಬಲ್ಲೆ.

ಆನಂದಬಾಬು ಪ್ರೀತಿಯಿಂದ ಮಗಳ ಮುಖವನ್ನು ನೋಡಿದನು. ಹೇಮಳ ಮುಖ ಕೆಂಪಾಗಿ, ಅವಳು ತಲೆತಗ್ಗಿಸಿದಳು.

## ಅಧ್ಯಾಯ ೪೧

ಉಪನ್ಯಾಸದಿಂದ ಹಿಂದಿರುಗುವ ವೇಳೆಗೆ ಸಂಜೆಯಾಗಿತ್ತು. ಮೇಜಿನ ಮುಂದೆ ಕುಳಿತು ಚಹಾ ಕುಡಿಯುತ್ತ ಆನಂದಬಾಬು "ಉಪನ್ಯಾಸ ಚನ್ನಾಗಿತ್ತು" ಎಂದನು. ಆಲೋಚನೆಯಲ್ಲಿ ಮಗ್ನನಾಗಿದ್ದ ಆನಂದಬಾಬುವಿಗೆ ಹೇಮನಳಿನಿ ಹೊರಟುಹೋದುದು ತಿಳಿಯಲೇ ಇಲ್ಲ. ನಳಿನಾಕ್ಷ ಇನ್ನೂ ಯುವಕ. ಆದರೂ ಗಾಂಭೀರ್ಯದಿಂದ ತುಂಬಿದ ಮುಖ. ಆತನು "ನಷ್ಟ"ದ ವಿಚಾರವಾಗಿ ಮಾತನಾಡಿದ್ದನು. ನಷ್ಟವಿಲ್ಲದೆ ಲಾಭವಿಲ್ಲವೆಂದು ಪ್ರತಿಪಾದಿಸಿದ್ದನು. ಕಷ್ಟವಿಲ್ಲದೆ ಸಂಪಾದಿಸಿದುದು ನಿಜವಾದ ಲಾಭವಲ್ಲ. ತ್ಯಾಗದಿಂದ ಮಾತ್ರ ನಿಜವಾದ ಸುಖ ಲಭಿಸುವುದು. ಸಂಪಾದಿಸಿದ ವಸ್ತುಗಳನ್ನು ಕಳೆದುಕೊಳ್ಳುವವನು ದುರದೃಷ್ಟಶಾಲಿಯೇ. ಆದರೆ ಮನುಷ್ಯನ ಆತ್ಮ ಕಳೆದುಕೊಳ್ಳುವುದರಿಂದ, ಹೆಚ್ಚಾಗಿ ಸಂಪಾದಿಸುವ ಶಕ್ತಿಯನ್ನು ಪಡೆಯುವುದು. ನಷ್ಟವುಂಟಾದಾಗ ತಲೆತಗ್ಗಿಸಿ ಕೈಜೋಡಿಸಿ, "ಇದೇ ನನಗೊಂದು ವರ.

ತ್ಯಾಗದಿಂದ, ದುಃಖದಿಂದ, ಕಣ್ಣೀರಿನಿಂದ ಬಂದ ಶ್ರೇಯಸ್ಸು” ಎಂದು ತಿಳಿದೆವಾದರೆ ಪರಮಾತ್ಮನನ್ನು ತಿಳಿದವರಾಗುವೆವು.

ಆತನ ಮಾತು ಹೇಮನಳಿನಿಯ ಮನಸ್ಸಿನ ಮೇಲೆ ಹೆಚ್ಚು ಪರಿಣಾಮವನ್ನುಂಟುಮಾಡಿತ್ತು. ನಕ್ಷತ್ರಗಳಿಂದಾವೃತವಾದ ಆಕಾಶದ ಕೆಳಗೆ ಬಿಸಿಲು ಮಚ್ಚಿನ ಮೇಲೆ ಚಿಂತಿಸುತ್ತಾ ಕುಳಿತಿದ್ದಾಗ ಅವಳ ಹೃದಯ ತುಂಬಿ ಭೂವ್ಯೋಕಾಶಗಳು ಬರಿದಲ್ಲವೆಂಬ ಭಾವನೆಯುಂಟಾಯಿತು. ಉಪನ್ಯಾಸದಿಂದ ಹಿಂದಿರುಗುತ್ತಿದ್ದಾಗ ಜೋಗೇಂದ್ರ ಅಕ್ಷಯನೊಡನೆ, “ಒಳ್ಳೆ ಮನುಷ್ಯನನ್ನೇ ತೋರಿಸಿದೆ. ಆತನ ಉಪನ್ಯಾಸದಲ್ಲಿ ನನಗೆ ಅರ್ಧ ಕೂಡ ಅರ್ಥವಾಗಲಿಲ್ಲ” ಎಂದನು.

ಅಕ್ಷಯ—ರೋಗಿಗೆ ತಕ್ಕ ಔಷಧ ಕೊಡಬೇಕು. ಹೇಮನಳಿನಿ ರಮೇಶನ ವಿಚಾರವಾಗಿ ಮೋಸಹೋಗಿದ್ದಾಳೆ. ಅವಳನ್ನೆಚ್ಚರಿಸಬೇಕಾದರೆ ಮಂತ್ರವಾದಿಯೇ ಬೇಕು. ನಮ್ಮಂತಹ ಸಾಧಾರಣ ಮನುಷ್ಯರಿಗೆ ಸಾಧ್ಯವಿಲ್ಲ. ಅವನು ಮಾತನಾಡುತ್ತಿದ್ದಾಗ ಅವಳ ಮುಖವನ್ನು ನೋಡಿದೆಯಾ?

ಜೋಗೇಂ—ನೋಡಿದೆ. ಬಹಳ ಆನಂದವಾದಂತಿತ್ತು. ಉಪನ್ಯಾಸವನ್ನು ಮೆಚ್ಚಿದರೆ ಉಪನ್ಯಾಸಕನನ್ನು ಮದುವೆಯಾಗುವಳೆಂಬುದೇನು ಖಂಡಿತ?

ಅಕ್ಷಯ—ಬೇರೆ ಯಾರಾದರೂ ಆ ಉಪನ್ಯಾಸ ಕೊಟ್ಟಿದ್ದರೆ ಅವಳು ಮೆಚ್ಚುತ್ತಿರಲಿಲ್ಲ. ಅಂತಹ ವಿರಕ್ತರನ್ನು ಕಂಡರೆ ಹೆಂಗಸರಿಗೆ ಇಷ್ಟ. ಉಮೆ ಸನ್ಯಾಸಿಗೋಸ್ಕರ ತನ್ನ ದೇಹವನ್ನು ಶೋಷಿಸಿ ಕೊಂಡಳೆಂದು ಕಾಳಿದಾಸ ವರ್ಣಿಸಿಲ್ಲವೆ? ಬೇರೆ ಯಾರನ್ನಾದರೂ ರಮೇಶನಿಗೆ ಹೋಲಿಸಿದರೆ ಅವರು ಮೇಲಾಗಿ ಕಾಣುವುದು ಕಷ್ಟ. ನಳಿನಾಕ್ಷ ಎಲ್ಲರಂತಲ್ಲ. ಅವನನ್ನು ಬೇರೆ ಯಾರಿಗೂ ಹೋಲಿಸುವುದಕ್ಕೇ ಆಗುವುದಿಲ್ಲ. ಅದೂ ಅಲ್ಲದೆ ನಳಿನಾಕ್ಷನನ್ನು ಕರೆದರೆ ಅವಳಿಗೆ ನಮ್ಮ ಉದ್ದೇಶ ತಿಳಿಯುವುದಿಲ್ಲ. ಮೆಚ್ಚಿಕೆಗೂ ಮದುವೆಗೂ ದೂರವಿಲ್ಲ.

ಜೋಗೇಂ—ನನಗೆ ಈ ತಂತ್ರಗಳೆಲ್ಲಾ ತಿಳಿಯುವುದಿಲ್ಲ. ಇದ್ದುದನ್ನು ಇದ್ದಂತೆ ಹೇಳುವುದೇ ನನ್ನ ಸ್ವಭಾವ. ನಳಿನಾಕ್ಷ ನನಗೇನೋ

ಮೆಚ್ಚಿಗೆಯಾಗಲಿಲ್ಲ.

ಅಕ್ಷಯ—ಹೀಗೆ ಪ್ರಾರಂಭಿಸಿದರೆ ಹೇಗೆ? ಎಲ್ಲಾ ನಮ್ಮ ಇಷ್ಟ ದಂತೆ ನಡೆಯುವುದಿಲ್ಲ. ಹೇಮನಳಿನಿ ಬಲವಂತದಿಂದ ರಮೇಶನನ್ನು ಮರೆಯಲಾರಳು. ನನ್ನ ಮಾತಿನಂತೆ ನಡೆದರೆ ಆಗುತ್ತೆ.

ಜೋಗೇಂ—ನಳಿನಾಕ್ಷ ಮಾಯಾವಿಯಂತೆ ಕಾಣುತ್ತಾನೆ. ಅಂಥ ವರನ್ನು ಕಂಡರೆ ನನಗೆ ನಂಬಿಕೆಯಿಲ್ಲ. ಒಂದು ತೊಂದರೆ ತಪ್ಪಿಸಿ ಕೊಳ್ಳಲು ಇನ್ನೊಂದರೊಳಗೆ ಸಿಕ್ಕಿದರೆ?

ಅಕ್ಷಯ—ಈಚೆಗೆ ನಿನಗೆ ತುಂಬಾ ಹೆದರಿಕೆ. ರಮೇಶನಲ್ಲಿ ನಿಮಗೆ ಅಪನಂಬಿಕೆಯೇ ಇರಲಿಲ್ಲ. ಅವನ ಸಮಾನರಿಲ್ಲವೆಂದೂ, ನಿಷ್ಕಪಟಿ ಯೆಂದೂ, ಶಂಕರಾಚಾರ್ಯರಂತಹ ವೇದಾಂತಿಯೆಂದೂ ಭಾವಿಸಿದಿರಿ. ನನಗೇನೋ ಮೊದಲಿಂದಲೂ ಅವನಲ್ಲಿ ನಂಬಿಕೆಯಿರಲಿಲ್ಲ. ಆದರೆ ಬಾಯಿ ಬಿಡಲು ಭಯ. ಅವನನ್ನು ಟೀಕೆ ಮಾಡಿದ್ದರೆ ನನ್ನಂತಹ ಪಾಮರನನ್ನು ನೀವು ನಂಬುತ್ತಲೇ ಇರಲಿಲ್ಲ. ಅಂತಹವರಿಗೆ ದೂರದಿಂದ ಕೈಮುಗಿಯು ವುದು ಮೇಲೇ ಹೊರತು ತಂಗಿಯನ್ನು ಮದುವೆಮಾಡಿ ಕೊಡುವುದು ಒಳ್ಳೆಯದಲ್ಲ, "ಒಂದು ಮುಳ್ಳು ಮತ್ತೊಂದನ್ನು ಹೊರಗೆ ನೂಕುವು ದೆಂದು" ಸಂಸ್ಕೃತದಲ್ಲಿ ಒಂದು ಗಾದೆಯಿದೆ. ಈಗ ನಮಗಿರುವುದು ಇದೊಂದೇ.

ಜೋಗೇಂ—ರಮೇಶ ಅಯೋಗ್ಯನೆಂದು ನಿನಗೆ ತಿಳಿದಿರಲಿಲ್ಲ. ನಿನಗೆ ಅವನಲ್ಲಿ ದ್ವೇಷವಿದ್ದುದರಿಂದ ಅವನೇನು ಮಾಡಿದರೂ ತಪ್ಪಾಗಿ ತೋರುತ್ತಿತ್ತು. ತಂತ್ರಗಳು ನನಗೆ ತಿಳಿಯುವುದಿಲ್ಲ; ನೀನೇ ಮಾಡ ಬೇಕು. ನನಗೇನೋ ನಳಿನಾಕ್ಷ ಯೋಗ್ಯನೆಂದು ತೋರಲಿಲ್ಲ.

ಜೋಗೇಂದ್ರ, ಅಕ್ಷಯರು ಕೋಣೆಯೊಳಗೆ ಪ್ರವೇಶಿಸಲು ಹೇಮ ನಳಿನಿ ಬೇರೆ ಬಾಗಿಲಿನಿಂದ ಹೊರಟು ಹೋದಳು. "ನಾನು ಬರುವುದನ್ನು ಕಿಟಕಿಯಿಂದ ನೋಡಿರಬೇಕು." ಎಂದು ಅಕ್ಷಯ ತಿಳಿದುಕೊಂಡನು. ಆನಂದಬಾಬುವಿನ ಬಳಿ ಕುಳಿತು ಚಹಾ ಕುಡಿಯುತ್ತಾ "ನಳಿನಾಕ್ಷ ಹೃದಯದಲ್ಲಿ ಅನುಭವಿಸಿ ಮಾತನಾಡುವುದರಿಂದ ಆತನ ಮಾತು ಹೃದಯವನ್ನು ಮುಟ್ಟುತ್ತವೆ" ಎಂದನು.

ಆನಂದ—ಬಹಳ ಬುದ್ಧಿವಂತ.

ಅಕ್ಷಯ—ಬುದ್ಧಿಯೊಂದೇ ಅಲ್ಲ. ಅವನಂತಹ ತ್ಯಾಗಿಯೇ ಇಲ್ಲ.

ಜೋಗೇಂದ್ರ— (ಬೇಸರದಿಂದ) ಏನು ತ್ಯಾಗವೋ, ಏನೋ. ಬೇಸರವಾಗಿ ಹೋಯಿತು.

ಹಿಂದಿನದಿನ ಜೋಗೇಂದ್ರನೇ ನಳಿನಾಕ್ಷನ ಗುಣಗಾನ ಮಾಡಿದ್ದನು.

ಆನಂದ—ಹಾಗೆ ಹೇಳಬಾರದು ಜೋಗೇಂದ್ರ. ಹೊರಗೆ ಒಳ್ಳೆಯವರಾಗಿ ತೋರಿದರೆ ಅವರ ಹೃದಯವೂ ಒಳ್ಳೆಯದಾಗಿರುತ್ತದೆ. ನಮ್ಮ ಬುದ್ಧಿ ಪ್ರಕಟಿಸಲು ಎಲ್ಲರ ವಿಚಾರದಲ್ಲಿಯೂ ಅನುಮಾನಪಡಬಾರದು. ನಳಿನಾಕ್ಷ ಯಾರ ವಿಚಾರವಾಗಿಯೋ ಮಾತನಾಡಲಿಲ್ಲ. ಸ್ವಾನುಭವದಿಂದ ಮಾತನಾಡಿದನು. ತೋರಿಕೆಗಾಗಿ ಹಾಗೆ ಮಾತನಾಡಲು ಸಾಧ್ಯವಿಲ್ಲ. ನನಗೆ ಆತನನ್ನು ಸ್ವಂತವಾಗಿ ಕಂಡು ಮಾತನಾಡಬೇಕೆನ್ನಿಸಿತು.

ಅಕ್ಷಯ—ಆತನು ಜಾಗರೂಕನಾಗಿರದಿದ್ದರೆ ಆರೋಗ್ಯ ಕೆಡಿಸಿಕೊಳ್ಳುತ್ತಾನೆ.

ಆನಂದ—ಏಕೆ, ಆತನ ಆರೋಗ್ಯ ಸರಿಯಾಗಿಲ್ಲವೆ?

ಅಕ್ಷಯ—ದಿನವೆಲ್ಲಾ ದೇವರ ಧ್ಯಾನದಲ್ಲಿ ಕಳೆಯುತ್ತಾನೆ. ಆರೋಗ್ಯದ ಕಡೆ ಗಮನ ಕೊಡುವುದಿಲ್ಲ.

ಆನಂದ—ಅದು ತಪ್ಪು. ದೇಹವನ್ನು ನಾವು ಸೃಷ್ಟಿಸಿಲ್ಲವಾದುದರಿಂದ ಅದನ್ನು ಅಲಕ್ಷ್ಯಮಾಡಬಾರದು. ಆತನ ಆರೋಗ್ಯವನ್ನು ನಾನು ಸರಿಪಡಿಸಬಲ್ಲೆನು. ಸ್ವಲ್ಪ ಎಚ್ಚರಿಕೆಯಾಗಿದ್ದರೆ ಸರಿ. ಮೊದಲನೆಯದಾಗಿ........

ಜೋಗೇಂದ್ರ ಬೇಸರದಿಂದ—"ಈ ಮಾತೆಲ್ಲಾ ಅಪ್ರಕೃತ. ನಳಿನಾಕ್ಷ ಗಟ್ಟಿಯಾಗಿದ್ದಾನೆ. ಅವನನ್ನು ನೋಡಿದಮೇಲೆ ಧ್ಯಾನ ದೇಹದಾರ್ಢ್ಯವನ್ನು ಹೆಚ್ಚಿಸುವಂತೆ ತೋರಿತು.

ಆನಂದ—ಏನೋಪ್ಪ. ಅಕ್ಷಯನ ಮಾತು ನಿಜವಿರಬಹುದು. ವಿವೇಕಶಾಲಿಗಳೇ ಆರೋಗ್ಯದ ಕಡೆ ಗಮನಕೊಡದೆ ಬೇಗ ಸತ್ತು ದೇಶದ್ರೋಹಮಾಡುತ್ತಾರೆ. ಅದು ತಪ್ಪು. ನಳಿನಾಕ್ಷಬಾಬು ಬಹಳ ಬುದ್ಧಿ

ವಂತ. ನೀನು ಅರ್ಥಮಾಡಿಕೊಳ್ಳಲಿಲ್ಲ. ಆತನು ಆರೋಗ್ಯವನ್ನು ಕಾಪಾಡಿಕೊಳ್ಳಬೇಕು.

ಅಕ್ಷಯ—ನಿಮಗೆ ಗುರುತುಮಾಡಿಸುತ್ತೇನೆ. ನೀವೇ ಹೇಳಿ ನೋಡಿ. ನನಗೆ ನೀವು ಹೇಳಿದ ಸೊಪ್ಪಿನ ರಸ ಬಹಳ ಗುಣಕಾರಿಯಾಗಿ ತೋರಿತು. ಮೆದುಳಿನಿಂದ ಕೆಲಸ ಮಾಡುವವರಿಗೆ ಬಹಳ ಉಪಯೋಗ ಕರವಾದುದು. ನಳಿನಾಕ್ಷ ಬಾಬುವಿಗೆ ಹೇಳಿ.

ಜೋಗೇಂದ್ರ ತಟ್ಟನೆದ್ದು "ನಿನ್ನ ಮಾತುಗಳಿಂದ ನನಗೆ ಹುಚ್ಚು ಹಿಡಿಯುತ್ತೆ, ಅಕ್ಷಯಾ" ಎಂದು ಹೊರಗೆ ಹೋದನು.

## ಅಧ್ಯಾಯ ೪೨

ಹೇಮನಳಿನಿಗೆ ದುಃಖ ಪ್ರಾಪ್ತವಾಗುವ ಮೊದಲು ಆನಂದಬಾಬು ಆರೋಗ್ಯವಾಗಿದ್ದರೂ ತಪ್ಪದೆ ಮಾತ್ರೆ ಔಷಧಗಳನ್ನು ತೆಗೆದುಕೊಳ್ಳುತ್ತಿದ್ದನು. ಈಚೆಗೆ ಅವುಗಳಲ್ಲಿ ಅಭಿಲಾಷೆ ತಪ್ಪಿದ್ದಿತು. ಆರೋಗ್ಯ ಕೆಟ್ಟಿದೆಯೆಂಬ ಅನುಮಾನದ ಮೇಲೆ ಅನೇಕ ಔಷಧಗಳನ್ನು ತೆಗೆದುಕೊಳ್ಳುತ್ತಿದ್ದ ಆನಂದಬಾಬು ಈಗ ನಿಜವಾಗಿ ಅಸ್ವಸ್ಥನಾಗಿದ್ದರೂ ಆ ವಿಚಾರವಾಗಿ ಮಾತೇ ಆಡುತ್ತಿರಲಿಲ್ಲ. ಆತನು ಆಯಾಸದಿಂದ ಕುರ್ಚಿಯ ಮೇಲೆ ನಿದ್ರಿಸುತ್ತಿದ್ದನು. ಜೋಗೇಂದ್ರನ ಹೆಜ್ಜೆಯ ಸದ್ದು ಕೇಳಿ ಅವನನ್ನು ಸದ್ದುಮಾಡಬೇಡವೆಂದು ಹೇಳಲು ಹೇಮನಳಿನಿ ಓಡಿದಳು. ಆದರೆ ಅವನೊಡನೆ ನಳಿನಾಕ್ಷನೂ ಇದ್ದುದನ್ನು ನೋಡಿ ಬೇರೆ ಕೊರಡಿಗೆ ಹೋಗಲು ಪ್ರಯತ್ನಿಸಿದಳು. ಜೋಗೇಂದ್ರ ನೋಡಿ, "ಹೇಮಾ, ನಳಿನಾಕ್ಷಬಾಬು ಬಂದಿದ್ದಾರೆ, ನೋಡು." ಎಂದನು.

ನಳಿನಾಕ್ಷ ಮುಂದೆ ಬಂದು ತಲೆಯೆತ್ತದೆ ನಮಸ್ಕರಿಸಿದನು. ಆನಂದಬಾಬು ಎಚ್ಚರವಾಗಿ ಮಗಳನ್ನು ಕೂಗಿದನು. ಹೇಮ ಹೋಗಿ, ಆತನಿಗೆ ನಳಿನಾಕ್ಷಬಾಬು ಬಂದ ಸುದ್ದಿಯನ್ನು ಹೇಳಿದಳು. ಜೋಗೇಂದ್ರ ಆತನನ್ನು ಕರೆತರಲು, ಆನಂದಬಾಬು ಎದ್ದು ಎದುರುಗೊಂಡನು.

"ನೀವು ಬಂದುದು ನಮ್ಮ ಅದೃಷ್ಟ. ಕುಳಿತುಕೋ ಹೇಮಾ.

ನಿಮ್ಮ ಉಪನ್ಯಾಸ ಕೇಳಲು ನಾವಿಬ್ಬರೂ ಬಂದಿದ್ದೆವು. ನಿಮ್ಮಮಾತು ನಮ್ಮ ಮನಸ್ಸಿನ ಮೇಲೆ ಬಹಳ ಪರಿಣಾಮವನ್ನುಂಟುಮಾಡಿತು. ಇಲ್ಲವೆ ಹೇಮಾ? ಕೈಬಿಟ್ಟು ಹೋದಮೇಲೇ ಒಂದು ವಸ್ತುವಿನ ಸ್ವಾಮ್ಯ ನಮ್ಮದು ಹೌದೋ, ಅಲ್ಲವೋ, ಎಂದು ತಿಳಿಯುವುದು. ನಿಮ್ಮಲ್ಲಿ ಒಂದು ಅರಿಕೆ ಯಿದೆ, ನಳಿನಬಾಬು. ನಾವು ಮನೆಯಲ್ಲೇ ಇರುತ್ತೇವೆ. ನೀವು ಆಗಾಗ ಬಂದು ಮಾತನಾಡುತ್ತಿರಬೇಕು."

ನಳಿನಾಕ್ಷ ಹೇಮನಳಿನಿಯ ಮುಖ ನೋಡಿ, "ಉಪನ್ಯಾಸದಲ್ಲಿ ದೊಡ್ಡ ಮಾತುಗಳನ್ನು ಉಪಯೋಗಿಸಿದುದರಿಂದ ನಾನೊಬ್ಬ ದುರ ಹಂಕಾರಿಯೆಂದು ತಿಳಿಯಬೇಡಿ. ವಿದ್ಯಾರ್ಥಿಗಳ ಬಲವಂತದಿಂದ ಉಪ ನ್ಯಾಸ ಮಾಡಬೇಕಾಯಿತು. ಒಂದು ಸಲ ಕೇಳಿದ ಮೇಲೆ ತಿರುಗಿ ಉಪನ್ಯಾಸ ಬೇಕೆನ್ನುವುದಿಲ್ಲ. ನನ್ನ ಮಾತಿನಲ್ಲಿ ಮುಕ್ಕಾಲುಭಾಗ ಅವರಿಗೆ ಅರ್ಥವಾಗಲಿಲ್ಲ. ನೀವೂ ಬೇಸರದಿಂದ ಗಡಿಯಾರ ನೋಡುತ್ತಿದ್ದಿರಿ, ಜೋಗೇಂದ್ರಬಾಬು.

ಜೋಗೇಂ—ನನ್ನ ಅಭಿಪ್ರಾಯಕ್ಕೆ ಬೆಲೆಯಿಲ್ಲ. ನಿಮ್ಮ ಮಾತು ತಿಳಿಯುವಷ್ಟು ವಿವೇಕವಿದ್ದರಲ್ಲವೆ?

ಆನಂದ—ಕೆಲವು ವಿಚಾರ ತಿಳಿಯಬೇಕಾದರೆ ವಯಸ್ಸಾಗಬೇಕು.

ನಳಿನಾಕ್ಷ—ಕೆಲವು ವಯಸ್ಸುಗಳಲ್ಲಿ ತಿಳಿದುಕೊಳ್ಳುವ ಅಗತ್ಯವೇ ಇಲ್ಲ.

ಆನಂದ—ನಳಿನಬಾಬು, ನಿಮಗೊಂದು ಮಾತು ಹೇಳಬೇಕು. ನಿಮ್ಮಂತಹವರು ಹುಟ್ಟುವುದು ಲೋಕಕಲ್ಯಾಣಕ್ಕಾಗಿ. ನಿಮ್ಮ ಆರೋಗ್ಯ ವನ್ನು ಅಲಕ್ಷ್ಯಮಾಡಿದರೆ ಲೋಕನೇವೆ ಮಾಡಲಾಗುವುದಿಲ್ಲ.

ನಳಿನಾಕ್ಷ—ಸ್ವಲ್ಪ ಗುರುತಾದರೆ ನಾನು ವಿರಾಗಿಯಲ್ಲವೆಂದು ತಿಳಿಯುತ್ತದೆ. ಹುಟ್ಟಿ ಬೆಳೆದುದು ಬೇರೆಯವರ ಆಶ್ರಯದಲ್ಲಿ. ಸೃಷ್ಟಿಸ ಲಾಗದುದನ್ನು ನಾಶಮಾಡುವ ಹಕ್ಕಿಲ್ಲವಾದುದರಿಂದ, ಆರೋಗ್ಯವನ್ನು ಅಲಕ್ಷ್ಯ ಮಾಡುವ ಹಾಗಿಲ್ಲ.

ಆನಂದ—ನಿಜ, ನಿಮ್ಮ ಉಪನ್ಯಾಸದಲ್ಲೂ ಹಾಗೆಯೇ ಹೇಳಿದಿರಿ.

ಜೋಗೇಂ—ನಾನು ಹೋಗಬೇಕು. ಕೆಲಸವಿದೆ.

ನಳಿನಾಕ್ಷ—ಕ್ಷಮಿಸಿ ಜೋಗೇಂದ್ರಬಾಬು. ಅರ್ಥವಾಗದಂತೆಯೇ ಸದಾ ನಾನು ಮಾತನಾಡುವುದಿಲ್ಲ. ನಿಮ್ಮ ಜತೆಯಲ್ಲಿ ನಾನೂ ಸ್ವಲ್ಪ ದೂರ ಬರುತ್ತೇನೆ.

ಜೋಗೇಂ—ನಾನು ಹೊರಟೆನೆಂದು ನೀವೂ ಹೊರಡಬೇಡಿ. ಹೆಚ್ಚು ಹೊತ್ತು ಕುಳಿತಿರಲು ನನಗೆ ಯಾವಾಗಲೂ ಸಾಧ್ಯವಿಲ್ಲ.

ಆನಂದ—ಅವನು ಬರುವುದು ಹೋಗುವುದು ತಿಳಿಯುವುದೇ ಇಲ್ಲ. ನೀವು ಕುಳಿತುಕೊಳ್ಳಿ, ನಳಿನಾಕ್ಷಬಾಬು.

ಜೋಗೇಂದ್ರ ಹೊರಟು ಹೋದಮೇಲೆ ಆನಂದಬಾಬು ನಳಿನಾಕ್ಷನನ್ನು "ನೀವಿರುವುದೆಲ್ಲಿ?" ಎಂದು ಕೇಳಿದನು.

ನಳಿನಾಕ್ಷ ನಕ್ಕು, "ನಾನು ಎಲ್ಲಿರುವೆನೆಂದು ಹೇಳಲಾರೆ. ಸ್ನೇಹಿತರ ಮನೆಗಳಲ್ಲೆಲ್ಲಾ ಇರುತ್ತೇನೆ. ಅದೇ ಸುಖವಾಗಿದ್ದರೂ ಮನಶ್ಶಾಂತಿಗಾಗಿ ಬಾಡಿಗೆ ಮನೆಯಲ್ಲಿದ್ದೇನೆ. ನಿಮ್ಮ ಪಕ್ಕದ ಮನೆಯನ್ನು ಜೋಗೇಂದ್ರ ಬಾಬು ಗೊತ್ತುಮಾಡಿ ಕೊಟ್ಟಿದ್ದಾನೆ. ಇಲ್ಲಿ ಅಷ್ಟೇನೂ ಗಲಾಟೆಯಿಲ್ಲ.

ಆನಂದಬಾಬುವಿಗೆ ಇದನ್ನು ಕೇಳಿ ಸಂತೋಷವಾದರೂ, ಹೇಮ ನಳಿನಿಗೆ ನೋವುಂಟಾಯಿತು. ಹಿಂದೆ ರಮೇಶನಿದ್ದ ಮನೆಯದು.

ಎಲ್ಲರೂ ಚಹಾ ಕುಡಿಯಲು ಕೆಳಗಿಳಿದು ಹೋದರು.

ಆನಂದ—ಹೇಮಾ, ನಳಿನ ಬಾಬುವಿಗೆ ಚಹಾ ಕೊಡು.

ನಳಿನಾಕ್ಷ ಬೇಡವೆಂದನು.

ಆನಂದ—ಏಕೆ, ಚಹಾ ಕುಡಿಯುವುದಿಲ್ಲವೆ? ಒಂದು ದೋಸೆಯನ್ನಾದರೂ ತೆಗೆದುಕೊಳ್ಳಿ.

ನಳಿನ—ಕ್ಷಮಿಸಿ.

ಆನಂದ—ನೀವು ವೈದ್ಯರು. ನಿಮಗೆ ಹೇಳಲಾಗುವುದಿಲ್ಲ. ಊಟವಾದ ಎರಡು ಮೂರು ಘಂಟೆಗೆ ಚಹಾಕುಡಿದರೆ ಬಿಸಿನೀರು ಕುಡಿದಂತೆ ಜೀರ್ಣಶಕ್ತಿಗೆ ಸಹಕಾರಿ. ಅಭ್ಯಾಸವಿಲ್ಲದಿದ್ದರೆ ನೀರಾಗಿ ಕುಡಿಯಿರಿ.

ನಳಿನಾಕ್ಷ ಹೇಮನಳಿನಿಯ ಕಡೆ ನೋಡಿದನು. "ತಪ್ಪು ತಿಳಿದುಕೊಳ್ಳ ಬೇಡಿ. ನಿಮ್ಮ ಪದ್ಧತಿಗಳನ್ನು ನಾನು ಆಕ್ಷೇಪಿಸುವುದಿಲ್ಲ. ನಾನೂ ಹಿಂದೆ ಸಂತೋಷವಾಗಿ ಚಹಾ ತೆಗೆದುಕೊಳ್ಳುತ್ತಿದ್ದೆ. ನಮ್ಮ ತಾಯಿಗೆ

ಆಚಾರದಲ್ಲಿ ಬಹಳ ನಂಬಿಕೆ. ನನ್ನನ್ನುಳಿದು ಅವಳಿಗೆ ಬೇರೆ ದಿಕ್ಕಿಲ್ಲ. ಅವಳಿಗಿಷ್ಟವಿಲ್ಲದುದರಿಂದ. ನಾನು ಚಹಾ ಬಿಡಬೇಕಾಯಿತು." ನಳಿನಾಕ್ಷನ ಮಾತು ಹೇಮನಳಿನಿಗೆ ಹೊಸದಾಗಿ ಕಂಡುವು. ಮಾತಿನ ಆಡಂಬರದಲ್ಲಿ ಅವನ ವ್ಯಕ್ತಿತ್ವ ಮರೆಯಾಗಿದ್ದಿತು. ಆತನಿಗೆ ಹೊಸಬರನ್ನು ಮಾತನಾಡಿಸಲು ಸಂಕೋಚವೆಂದೂ, ಅಭ್ಯಾಸವಿಲ್ಲವೆಂದೂ ಅವಳಿಗೆ ತಿಳಿದಿರಲಿಲ್ಲ. ತಾಯಿಯ ವಿಚಾರವಾಗಿ ಆತನು ಮಾತನಾಡಿದಾಗ ಹೇಮನಳಿನಿ ಗೌರವದಿಂದ ಕೇಳಿದಳು. ಆತನ ತಾಯಿಯ ವಿಚಾರ ತಿಳಿಯಬೇಕೆಂದು ಕುತೂಹಲವಿದ್ದರೂ ನಾಚಿಕೆಯಿಂದ ಸುಮ್ಮನಾದಳು.

ಆನಂದ—ಅದು ಸರಿ. ಮೊದಲೇ ತಿಳಿದಿದ್ದರೆ ನಾನು ಬಲವಂತ ಮಾಡುತ್ತಿರಲಿಲ್ಲ ಕ್ಷಮಿಸಿ.

ನಳಿನ—ಅದರಲ್ಲೇನು ತಪ್ಪು?

ಆತನು ಹೊರಟು ಹೋದಮೇಲೆ ಹೇಮನಳಿನಿ ತಂದೆಯೊಡನೆ ಮಹಡಿಯ ಮೇಲಕ್ಕೆ ಹೋಗಿ ವೃತ್ತಪತ್ರಿಕೆಯನ್ನೋದಿದಳು. ಆನಂದ ಬಾಬು ಆಯಾಸದಿಂದ ಹಾಗೆಯೇ ನಿದ್ದೆಹೋದನು.

## ಅಧ್ಯಾಯ ೪೩

ನಳಿನಾಕ್ಷನಿಗೆ ಆನಂದಬಾಬು ಹೇಮನಳಿನಿಯರೊಡನಿದ್ದ ಪರಿಚಯ ಬಹುಬೇಗ ಸ್ನೇಹವಾಗಿ ಪರಿಣಮಿಸಿತು ಗುರುತಾಗುವ ಮುಂಚೆ ಆಧ್ಯಾತ್ಮಿಕ ವಿಚಾರಗಳನ್ನು ಬಿಟ್ಟು ಆತನೊಡನೆ ಸಾಧಾರಣ ವಿಚಾರಗಳನ್ನು ಮಾತನಾಡುವುದು ಅಸಾಧ್ಯವೆಂದು ಹೇಮನಳಿನಿ ತಿಳಿದಿದ್ದಳು. ಸರಸಿಯಾದರೂ ಆತನಲ್ಲಿ ಒಂದು ವಿಧವಾದ ಗಾಂಭೀರ್ಯವಿದ್ದಿತು. ಒಂದುದಿನ ಆನಂದಬಾಬು ಹೇಮನಳಿನಿ ನಳಿನಾಕ್ಷರೊಡನೆ ಮಾತನಾಡುತ್ತಿದ್ದಾಗ ಜೋಗೇಂದ್ರ ನುಗ್ಗಿಬಂದು, "ಅಪ್ಪಾ, ಜನರೆಲ್ಲಾ ನಮ್ಮನ್ನು ನಳಿನಾಕ್ಷಬಾಬುವಿನ ಶಿಷ್ಯರೆಂದು ಕರೆಯುತ್ತಾರೆ. ಅದಕ್ಕಾಗಿ ನಾನು ಪರೇಶನೊಡನೆ ಜಗಳವಾಡಬೇಕಾಯಿತು," ಎಂದನು.

ಆನಂದಬಾಬು ನಗುತ್ತಾ, "ಜಗಳವೇಕೆ? ನಾವೆಲ್ಲರೂ ಗುರುಗಳೇ

ಆದರೆ ಶಿಷ್ಯರಾಗುವರಾರು?

ನಳಿನಾಕ್ಷ— ಒಪ್ಪಿದೆ, ಆನಂದಬಾಬು. ಎಲ್ಲರೂ ಶಿಷ್ಯರಾಗಿ ಕಲಿಯತಕ್ಕದ್ದನ್ನೆಲ್ಲಾ ಕಲಿಯೋಣ.

ಜೋಗೇಂದ್ರ ಸಮಾಧಾನವಾಗದೆ, "ಅದು ಸರಿ. ಆದರೆ ಇದು ಹಾಸ್ಯದ ಮಾತಲ್ಲ ನೀವು ಈ ಅಭ್ಯಾಸಗಳನ್ನು ಬಿಡದಿದ್ದರೆ, ಸ್ನೇಹಿತರು ನಿಮ್ಮನ್ನು ಬಂದು ನೋಡಿದರೂ ಶಿಷ್ಯರೆನ್ನುತ್ತಾರೆ.

ನಳಿನಾಕ್ಷ—ಯಾವ ಅಭ್ಯಾಸಗಳು?

ಜೋಗೇಂ—ಯೋಗಿಯಂತೆ ಏನೇನೋ ಚೇಷ್ಟೆ ಮಾಡುತ್ತೀರಂತೆ. ಪ್ರಾತಃಕಾಲ ಸೂರ್ಯನನ್ನು ಧ್ಯಾನಿಸುತ್ತೀರಂತೆ. ಊಟಕ್ಕೆ ಮೊದಲು ಏನೇನೋ ಮಂತ್ರ ಹೇಳುತ್ತೀರಂತೆ. ಸಾಧಾರಣರಿಗೆ ಅರ್ಥವಾಗುವುದಿಲ್ಲ.

ಹೇಮನಳಿನಿಗೆ ಬೇಸರವಾಯಿತು. ನಳಿನಾಕ್ಷ ನಗುತ್ತಾ, "ನನ್ನದು ತಪ್ಪಿರಬಹುದು. ಸದಾ ಕತ್ತಿ ಒರೆಯಲ್ಲಿರಲಾಗುವುದಿಲ್ಲ. ಕತ್ತಿಯು ಹಿಡಿಯ ಮೇಲೆ ಕೆತ್ತನೆ ಕೆಲಸಮಾಡಿ ತೋರಿಸಿದಂತೆ ಮನುಷ್ಯನೂ ಸಮಾಜದಲ್ಲಿ ತನ್ನ ನಿಜವಾದ ವ್ಯಕ್ತಿತ್ವವನ್ನು ಒರೆಯಲ್ಲಿರಿಸಿ ಹಿಡಿಯನ್ನು ಮಾತ್ರ ತೋರಿಸುವನು. ಆದರೆ ನಾನು ಮನೆಯಲ್ಲಿ ಮಾಡುವುದನ್ನೆಲ್ಲಾ ಜನ ಹೇಗೆ ತಿಳಿದರು?

ಜೋಗೇಂ—ಹರಟುವವರು ಸತ್ಯಾಂಶವಿಲ್ಲದಿದ್ದರೂ ಕಥೆಗಳನ್ನು ಸೃಷ್ಟಿಸುತ್ತಾರೆ. ಇಲ್ಲದಿದ್ದರೆ ಪ್ರಪಂಚ ಹೇಗೆ ನಡೆಯುತ್ತದೆ? ಅದೂ ಅಲ್ಲದೆ ಬೇರೆಯವರು ಮಾಡದ ಕೆಲಸ ಮಾಡಿದರೆ ಜನ ಆಡಿಕೊಳ್ಳುತ್ತಾರೆ. ಹೇಮನಳಿನಿ ಕೂಡ ನೀವು ಮಾಳಿಗೆಯ ಮೇಲೆ ಮಾಡುವುದನ್ನು ತಂದೆಯವರಿಗೆ ಹೇಳಿದ್ದಾಳೆ.

ಹೇಮನಳಿನಿಗೆ ಅಸಮಾಧಾನವಾದುದನ್ನು ನೋಡಿ ನಳಿನಾಕ್ಷ, "ತಪ್ಪೇನು? ನನ್ನ ಪೂಜೆಯ ವೇಳೆಯಲ್ಲಿ ನೀವೂ ಮಾಳಿಗೆಯಮೇಲೆ ಓಡಾಡುತ್ತಿರಬಹುದು. ಕಣ್ಣಿದ್ದವರೆಲ್ಲರಿಗೂ ಕಾಣುತ್ತದೆ," ಎಂದನು.

ಆನಂದ—ನಿಮ್ಮ ಪೂಜೆ ತಪ್ಪೆಂದು ಹೇಮನಳಿನಿ ಹೇಳಲಿಲ್ಲ. ಆದಾವ ಪೂಜೆಯೆಂದು ತಿಳಿಯುವ ಕುತೂಹಲದಿಂದ ಕೇಳಿದಳು.

ಜೋಗೇಂ—ನನಗಂತೂ ಅರ್ಥವಾಗುವುದಿಲ್ಲ. ಈ ಗುಪ್ತ ಪೂಜೆಗಳಲ್ಲಿ ವಿಶ್ವಾಸವೂ ಇಲ್ಲ. ಅವುಗಳಿಂದ ಹುಚ್ಚು ಹಿಡಿಯಬಹುದು. ನಾನೊಬ್ಬ ಸಾಧಾರಣ ಮನುಷ್ಯ. ಸಿಕ್ಕಿದಷ್ಟು ಎತ್ತರಕ್ಕೆ ನೀವು ಹೋದರೆ ಕಲ್ಲೆಸೆದು ನಿಮ್ಮನ್ನು ಮುಟ್ಟಿದೆನೆಂದು ತೃಪ್ತಿಪಡಬೇಕು.

ನಳಿನಾಕ್ಷ—ಕಲ್ಲೆಸೆಯುವುದರಲ್ಲಿಯೂ ಅನೇಕ ವಿಧಗಳಿವೆ. ಕೆಲವು ಸುಮ್ಮನೆ ತಾಗುತ್ತವೆ. ಕೆಲವು ನೋವನ್ನುಂಟುಮಾಡುತ್ತವೆ. ಹುಚ್ಚನೆಂದರೆ ತಪ್ಪಿಲ್ಲ. ಆದರೆ ಮತಬೋಧಕನೆಂದೂ, ಶಿಷ್ಯರನ್ನು ಸಂಗ್ರಹಿಸುತ್ತೇನೆಂದೂ ಹೇಳಿದರೆ ದೊಡ್ಡ ಮಾತಾಗುತ್ತದೆ.

ಜೋಗೇಂ—ಕೋಪಮಾಡಿಕೊಳ್ಳಬೇಡಿ. ನಿಮ್ಮ ಮನೆಯಲ್ಲಿ ನಿಮ್ಮ ಇಚ್ಛೆಬಂದ ಹಾಗಿರಿ. ನನಗೇನೋ ಎಲ್ಲರೂ ಹೋಗುವ ಹಾದಿಯೇ ಸಾಕು. ಅದನ್ನು ಬಿಟ್ಟು ಹೋದರೆ ಜನ ನಗುತ್ತಾರೆ. ನನಗೆ ಅದು ಸರಿಹೋಗುವುದಿಲ್ಲ.

ನಳಿನಾಕ್ಷ—ಏನು ಹೊರಟಿರಿ? ನನಗೆ ಅವಮಾನ ಮಾಡಿ ಓಡಿ ಹೋಗುತ್ತೀರಾ? ಅದಾಗುವುದಿಲ್ಲ.

ಜೋಗೇಂ—ಈವತ್ತಿಗೆ ನಾಕು. ಸ್ವಲ್ಪ ಹೊತ್ತು ಹೋಗಿ ಬರುತ್ತೇನೆ.

ಅಣ್ಣ ಹೊರಟುಹೋದಮೇಲೆ ಹೇಮನಳಿನಿ ತಲೆತಗ್ಗಿಸಿಕೊಂಡು ಕುಳಿತಿದ್ದಳು. ಕಣ್ಣುಗಳಲ್ಲಿ ನೀರಾಡುತ್ತಿದ್ದಿತು. ಅವಳು ನಳಿನಾಕ್ಷನ ಮೇಲ್ಪಂಜ್ತಿಯನ್ನನುಸರಿಸಿ ತನ್ನ ಜೀವನವನ್ನು ಸರಿಪಡಿಸಿಕೊಳ್ಳಲು ಹವಣಿಸುತ್ತಿದ್ದಳು. ದುಃಖದ ಬೇಗೆಯಲ್ಲಿ ನಳಿನಾಕ್ಷ ಮಾರ್ಗದರ್ಶಕನಾಗಿ ಕಂಡಿದ್ದನು. ಆತ್ಮ ಸಂಯಮದಿಂದ ಮನಸ್ಸನ್ನು ಹದಕ್ಕೆ ತರಲು ಪ್ರಯತ್ನಿಸುತ್ತಿದ್ದಳು.

ದುಃಖ ಒಳಗೇ ಹುದುಗಿರುವ ಭಾವನೆಯಲ್ಲ. ಅದಕ್ಕಾಗಿ ಏನಾದರೂ ತ್ಯಾಗ ಮಾಡಬೇಕೆಂದು ಮನಸ್ಸು ಹಾತ್ಪೊರೆಯುವುದು. ಇದುವರೆಗೂ ಹೇಮನಳಿನಿ ಏನನ್ನೂ ಮಾಡದೆ ಜನರಲ್ಲಿ ಬೆರೆಯದಿದ್ದಳು. ನಳಿನಾಕ್ಷನಂತೆ ತಾನೂ ಕಠಿಣವ್ರತವನ್ನು ಕೈಗೊಳ್ಳಬೇಕೆಂದು ನಿರ್ಧರಿಸಿದುದು ಮನಸ್ಸು ಹಗುರವಾಯಿತು. ಕೋಣೆಯಲ್ಲಿದ್ದ ಜಮಖಾನೆಗಳನ್ನು

ತೆಗೆಯಿಸಿ ಮಂಚವನ್ನು ಮರೆಮಾಡಿದಳು. ಪ್ರತಿದಿನವೂ ನೀರುಹಾಕಿ ಕೋಣೆಯನ್ನು ಸಾರಿಸುತ್ತಿದ್ದಳು. ಅಲ್ಲಿದ್ದ ಅಲಂಕಾರ ವಸ್ತುವೆಂದರೆ ಒಂದು ಹೂವಿನಪಾತ್ರೆ. ಸ್ನಾನಮಾಡಿ, ಬಿಳಿ ಮಡಿಯುಟ್ಟು, ಬಿಸಿಲು ಬೀಳುವ ಕಡೆ ನೆಲದ ಮೇಲೆ ಕುಳಿತು ಚಿಂತಿಸುವಳು.

ಆನಂದಬಾಬುವಿಗೆ ಈ ರೀತಿಯ ವ್ರತ ಸಾಧ್ಯವಾಗದಿದ್ದರೂ ಅದರಿಂದ ಹೇಮನಳಿನಿಯ ಮೇಲುಂಟಾದ ಪರಿಣಾಮ ಆತನಿಗೆ ಸಂತೋಷ ವನ್ನೇ ಉಂಟುಮಾಡಿತು. ನಳಿನಾಕ್ಷ ಮನೆಗೆ ಬಂದಾಗ ಮೂವರೂ ಹೇಮನಳಿನಿಯ ಕೋಣೆಯಲ್ಲಿ ನೆಲದ ಮೇಲೆ ಕುಳಿತು ಮಾತನಾಡು ತ್ತಿದ್ದರು.

ಜೋಗೇಂದ್ರ ಅಸಮಾಧಾನದಿಂದ—ನಿಮಗೆಲ್ಲಾ ಏನಾಗಿದೆಯೋ ತಿಳಿಯುವುದಿಲ್ಲ. ಮೂವರೂ ಸೇರಿ ಮನೆಯನ್ನು ದೇವಸ್ಥಾನವಾಗಿ ಮಾಡಿದ್ದೀರಿ. ನನ್ನಂತಹವನಿಗೆ ಇಲ್ಲಿ ಸ್ಥಳವೇ ಇಲ್ಲ," ಎನ್ನುವನು.

ಮೊದಲು ಹೇಮನಳಿನಿ ಅಣ್ಣನ ಮೇಲೆ ರೇಗುತ್ತಿದ್ದಳು. ಈಗ ನಳಿನಾಕ್ಷನಂತೆ ಸುಮ್ಮನೆ ನಕ್ಕುಬಿಡುವಳು. ಆತನ ಆಧಾರದ ಮೇಲೆ ಅವಳ ಭಕ್ತಿ ನಿಂತಿದ್ದುದರಿಂದ ಜೋಗೇಂದ್ರನ ಹಾಸ್ಯ ಅವಳಿಗೆ ನೋವ ನ್ನುಂಟುಮಾಡುತ್ತಿರಲಿಲ್ಲ. ಸ್ನೇಹಿತರೆಲ್ಲಾ ಅಪಹಾಸ್ಯ ಮಾಡುತ್ತಿದ್ದ ರೆಂದು ತಿಳಿದಿದ್ದರೂ ನಳಿನಾಕ್ಷನಲ್ಲಿದ್ದ ನಂಬಿಕೆ ವಿಶ್ವಾಸ ಲೋಕದ ಅವ ಹೇಳನವನ್ನೆದುರಿಸುವ ಧೈರ್ಯವನ್ನು ಅವಳಿಗೆ ಕೊಟ್ಟಿದ್ದುವು.

ಒಂದು ಪ್ರಾತಃಕಾಲ ಸ್ನಾನ ಪೂಜೆಗಳನ್ನು ಮುಗಿಸಿ ಒಬ್ಬಳೇ ಕಿಟಕಿಯ ಬಳಿ ಧ್ಯಾನಿಸುತ್ತಾ ಕುಳಿತಿದ್ದಾಗ ಆನಂದಬಾಬು ನಳಿನಾಕ್ಷ ನನ್ನು ಕರತಂದನು. ಹೇಮನಳಿನಿಯ ಹೃದಯ ತುಂಬಿದ್ದಿತು. ಭಕ್ತಿ ಯಿಂದ ಇಬ್ಬರಿಗೂ ನಮಸ್ಕರಿಸಿದಳು.

ಆನಂದ—"ಸಂಕೋಚಪಡಬೇಡಿ, ನಳಿನಾಕ್ಷಬಾಬು. ಅವಳು ಮಾಡಿದುದು ಸರಿಯೇ." ಎಂದೂ ಇಷ್ಟು ಬೇಗ ನಳಿನಾಕ್ಷ ಅವರ ಮನೆಗೆ ಬಂದಿರಲಿಲ್ಲವಾದುದರಿಂದ ಹೇಮನಳಿನಿ ಕುತೂಹಲದಿಂದ ಆತನ ಮುಖ ವನ್ನು ನೋಡಿದಳು. ತನ್ನ ತಾಯಿಗೆ ಸ್ವಸ್ಥವಾಗಿಲ್ಲವೆಂದು ತಿಳಿದುದರಿಂದ ರಾತ್ರಿ ತಾನು ಕಾಶಿಗೆ ಹೊರಡಬೇಕೆಂದೂ, ಅವರನ್ನು ನೋಡಿ ಹೋಗಲು

ಬಂದನೆಂದೂ ಆತನು ತಿಳಿಸಿದನು.

ಆನಂದ—ದೇವರು ನಿಮ್ಮ ತಾಯಿಯನ್ನು ಬೇಗ ಗುಣಪಡಿಸಲಿ. ನಿಮ್ಮಿಂದ ನಮಗಾದ ಸಹಾಯಕ್ಕೆ ಪ್ರತ್ಯುಪಕಾರ ಮಾಡಲಾರೆನು.

ನಳಿನಾಕ್ಷ—ನಾನೇ ನಿಮ್ಮಲ್ಲಿ ಋಣಿ. ನನ್ನ ಯೋಗಕ್ಷೇಮವನ್ನು ನೋಡಿಕೊಂಡಿರಿ. ಅದೂ ಅಲ್ಲದೆ ನಿಮ್ಮ ನಂಬಿಕೆ ನನ್ನ ಧ್ಯಾನಕ್ಕೆ ಬಲ ಕೊಟ್ಟಿದೆ. ನನ್ನಂತೆ ನಂಬುವವರ ಸಹವಾಸದ ಉಪಯೋಗ ನನಗೆ ತಿಳಿದು ಬಂತು.

ಆನಂದ—ನೀವು ಬರುವ ಮೊದಲು ನಮಗಿದ್ದ ಕೊರತೆಯೇನೆಂದು ತಿಳಿದಿರಲಿಲ್ಲ. ಈಗ ನಿಮ್ಮ ಸಹಾಯದ ಆವಶ್ಯಕತೆ ತಿಳಿಯಿತು. ನಾವು ಹೊರಗೆಲ್ಲೂ ಹೋಗುವುದಿಲ್ಲ. ನಾನು ಹೋದರೂ ಹೇಮ ಬರುವುದಿಲ್ಲ. ನಿಮ್ಮ ಉಪನ್ಯಾಸವಿದೆಯೆಂದು ಜೋಗೇಂದ್ರ ಹೇಳಿದಾಗ ಮರುಮಾತ ನಾಡದೆ ಹೊರಟೆವು. ನಮ್ಮ ಸಹಾಯಕ್ಕೆ ದೇವರೇ ನಿಮ್ಮನ್ನೊದಗಿಸಿದ ನೆಂದು ಕಾಣುತ್ತದೆ. ನಿಮಗೆ ನಾವು ಸದಾ ಋಣಿಗಳು.

ನಳಿನಾಕ್ಷ—ನನ್ನ ಜೀವನರಹಸ್ಯ ತಿಳಿದಿರುವುದು ನಿಮಗೆ ಮಾತ್ರ. ಸತ್ಯವನ್ನು ತಿಳಿಯಬೇಕಾದರೆ ರಹಸ್ಯವನ್ನು ಹೊರಗೆಡಹದೆ ಆಗುವು ದಿಲ್ಲ. ನಿಮ್ಮಿಂದ ನನಗಿದು ಸಾಧ್ಯವಾಯಿತು.

ನಳಿನಾಕ್ಷ ಹೊರಡುವವರೆಗೂ ಹೇಮನಳಿನಿ ಮೌನವಾಗಿದ್ದಳು. "ನಿಮ್ಮ ತಾಯಿಯ ದೇಹಸ್ಥಿತಿಯನ್ನು ನಮಗೆ ತಿಳಿಸಿ" ಎಂದು ಹೇಳಿ ನಮಸ್ಕರಿಸಿದಳು.

## ಅಧ್ಯಾಯ ೪೪

ಅಕ್ಷಯ ಆನಂದಬಾಬುವಿನ ಮನೆಯ ಕಡೆ ಬಂದು ಬಹಳ ದಿನ ಗಳಾಗಿದ್ದುವು. ನಳಿನಾಕ್ಷ ಕಾಶಿಗೆ ಹೋದದಿನ ಜೋಗೇಂದ್ರ ಆತನನ್ನು ಚಹಾ ಕುಡಿಯಲು ಕರೆತಂದನು. ರಮೇಶನ ನೆನಪು ಹೇಮನಳಿನಿಗೆ ಎಷ್ಟಿದೆಯೆಂದು ತಿಳಿಯಲು ಅಕ್ಷಯ ಆತುರನಾಗಿದ್ದನು. ಅವಳು ಸರಳವಾಗಿ, "ಈಚೆಗೆ ನೀವು ಬಹಳ ಅಪರೂಪ," ಎಂದಳು.

"ಪ್ರತಿದಿನವೂ ಬರಬೇಕಾದಷ್ಟು ಮುಖ್ಯನೇ ?"

ಹೇಮನಳಿನಿ ನಕ್ಕು "ಮುಖ್ಯರಾದವರು ಮಾತ್ರ ಬರುವುದಾದರೆ ಅನೇಕರು ನಿಂತುಹೋಗ ಬೇಕಾಗುವುದು" ಎಂದಳು.

ಜೋಗೇಂ—ಅಕ್ಷಯ ತಾನೇ ವಿನಯಶಾಲಿಯೆಂದುಕೊಂಡರೆ ಹೇಮನಳಿನಿ ಅವನನ್ನೂ ಮೀರಿಸುತ್ತಾಳೆ. ಪ್ರತಿದಿನವೂ ನೋಡಲು ನಮ್ಮಂತಹವರೇ ಸರಿ. ತಪಸ್ವಿಗಳು ಬೆಟ್ಟಗುಡ್ಡಗಳಲ್ಲಿ ವಾಸಿಸಬೇಕು. ಮನೆಗಳಲ್ಲಿ ಬಂದು ನಿಂತರೆ ಅಕ್ಷಯ ನಾನು ಕಾಡಿಗೆ ಹೋಗ ಬೇಕಾಗುವುದು.

ಜೋಗೇಂದ್ರ ತನ್ನನ್ನು ಅಪಹಾಸ್ಯ ಮಾಡುತ್ತಿದ್ದನೆಂದು ತಿಳಿದರೂ ಹೇಮನಳಿನಿ ಮಾತನಾಡದೆ ಚಹಾ ಬಗ್ಗಿಸಿದಳು.

"ನೀನು ಕುಡಿಯುವುದಿಲ್ಲವೆ ?" ಜೋಗೇಂದ್ರ ಕೇಳಿದನು.

"ಇಲ್ಲ. ನಾನು ಬಿಟ್ಟುಬಿಟ್ಟೆ."

ಜೋಗೇಂ—ನೀನೂ ತಪಸ್ವಿನಿಯಾಗಿ ಬಿಟ್ಟೆ, ನಾಕು, ಬಿಡು, ಹೇಮಾ. ಚಹಾ ಕುಡಿದರೆ ನಿನ್ನ ತಪಸ್ಸಿಗೆ ಭಂಗ ಬರುವುದಿಲ್ಲ." ಎಂದು ಅವಳೆದುರಿಗೆ ಒಂದು ಬಟ್ಟಲು ಚಹಾ ಇಟ್ಟನು.

ಅವಳು ಮುಟ್ಟದೆ, "ಅಪ್ಪಾ, ಏನಾದರೂ ಸ್ವಲ್ಪ ತಿನ್ನು," ಎಂದಳು.

ಆನಂದಬಾಬು ನಡುಗುವ ದನಿಯಲ್ಲಿ, "ತಿನ್ನಲು ನನಗೆ ಸಾಧ್ಯ ವಿಲ್ಲಮ್ಮಾ ! ಜೋಗೇಂದ್ರನ ಅಸಭ್ಯತೆ ಮಿತಿಮೀರಿ ಹೋಯಿತು. ಕೋಪ ದಲ್ಲಿ ಏನಾದರೂ ಮಾತನಾಡಿಬಿಟ್ಟರೆ ಆಮೇಲೆ ಪೇಚಾಡ ಬೇಕಾಗು ತ್ತದೆ." ಎಂದನು.

ಹೇಮನಳಿನಿ ತಂದೆಯ ಬಳಿಗೆ ಹೋಗಿ, "ಸಿಟ್ಟಾಗಬೇಡಪ್ಪಾ, ಜೋಗೇಂದ್ರ ವಿಶ್ವಾಸಕ್ಕೆ ಚಹಾ ಕೊಟ್ಟನು. ನೀವೇನಾದರೂ ತೆಗೆದು ಕೊಳ್ಳಿ. ಬರೀ ಚಹಾ ಕುಡಿದರೆ ವೈಗಾಗುವುದಿಲ್ಲ." ಆತನ ಮುಂದೆ ದೋಸೆಯನ್ನಿಟ್ಟಳು.

ಆನಂದಬಾಬು ನಿಧಾನವಾಗಿ ತಿನ್ನಲಾರಂಭಿಸಿದನು. ಹೇಮನಳಿನಿ ಜೋಗೇಂದ್ರ ಕೊಟ್ಟ ಚಹವನ್ನು ಕುಡಿಯಲು ತೆಗೆದುಕೊಂಡಳು. ಅಕ್ಷಯ

ತಟ್ಟನೆದ್ದು, "ನನಗೊಂದು ಬಟ್ಟಲು ಚಹಾ ಬೇಕು. ದಯವಿಟ್ಟು ಕೊಡಿ," ಎಂದನು.

ಜೋಗೇಂದ್ರ ಹೇಮನಳಿನಿಯ ಕೈಯಿಂದ ಬಟ್ಟಲನ್ನು ತೆಗೆದು ಕೊಂಡು "ತಪ್ಪಾಯಿತು ಕ್ಷಮಿಸಿ, ಅಪ್ಪಾ," ಎಂದನು.

ಆನಂದಬಾಬುವಿಗೆ ಮಾತು ಹೊರಡಲಿಲ್ಲ. ಕಣ್ಣೀರು ತುಂಬಿ ಬಂದಿತು. ಜೋಗೇಂದ್ರನೂ, ಅಕ್ಷಯನೂ ಹೊರಗೆ ಹೋದರು. ಸ್ವಲ್ಪ ತಿಂದು ಆನಂದಬಾಬು ಮಗಳ ಕೈ ಹಿಡಿದುಕೊಂಡು ಮಹಡಿಯ ಮೇಲೆ ಹೋದನು. ಆ ರಾತ್ರಿ ಆನಂದಬಾಬುವಿಗೆ ವಿಪರೀತ ನೋವುಂಟಾ ಯಿತು. ವೈದ್ಯ ನೋಡಿ, ಆರು ತಿಂಗಳಾದರೂ ವಿಶ್ರಾಂತಿ ತೆಗೆದುಕೊಳ್ಳ ಬೇಕೆಂದು ಅಭಿಪ್ರಾಯಪಟ್ಟನು.

ವೈದ್ಯ ಹೋದ ಮೇಲೆ "ಹೇಮಾ, ಕಾಶಿಗೆ ಹೋಗಿ ಕೆಲವು ದಿನ ಇದ್ದು ಬರೋಣ," ಎಂದನು ಹೇಮನಳಿನಿಗೂ ಅದೇ ಆಲೋಚನೆ ತಲೆದೋರಿತ್ತು. ನಳಿನಾಕ್ಷ ಹೊರಟು ಹೋದಂದಿನಿಂದ ಅವಳ ಭಕ್ತಿಯ ಕಾವು ಕಡಮೆಯಾದಂತಿತ್ತು. ಆತನ ದೃಢಭಕ್ತಿಯೂ, ಆಹ್ಲಾದವೂ ಅವಳ ನಂಬಿಕೆಯನ್ನು ಬಲಪಡಿಸಿದ್ದುವು. ಪ್ರಯತ್ನಪಟ್ಟರೂ ಈಗ ಮೊದಲಿನ ಉತ್ಸಾಹವಿರಲಿಲ್ಲ. ಬೇಸರಿಕೆಯಿಂದಾದ ದುಃಖವನ್ನು ತಡೆಯುವುದೇ ಕಷ್ಟವಾಗಿದ್ದುದರಿಂದ ತಂದೆಯ ಮಾತಿಗೆ ತಕ್ಷಣ ಒಪ್ಪಿಗೆ ಯಿತ್ತಳು.

ಪ್ರಯಾಣಸಿದ್ಧತೆಯನ್ನು ನೋಡಿ ಜೋಗೇಂದ್ರ ಎಲ್ಲಿಗೆಂದು ಕೇಳಿ ದನು. ಆತನ ತಂದೆ ಉತ್ತರದೇಶಕ್ಕೆಂದು ಹೇಳಿದನು.

"ಯಾವ ಊರಿಗೆ?"

ಕಾಶಿಗೆ ಹೋಗುವ ವಿಚಾರ ತಿಳಿಸಲಿಷ್ಟವಿಲ್ಲದೆ ಆನಂದಬಾಬು "ಸ್ವಲ್ಪ ಹಾಗೇ ತಿರುಗಾಡಿ ಬರುತ್ತೇವೆ," ಎಂದನು.

ಜೋಗೇಂ—ಮುಖ್ಯೋಪಾಧ್ಯಾಯನ ಕೆಲಸಕ್ಕೆ ಅರ್ಜಿ ಹಾಕಿ ದ್ದೇನೆ. ಇಲ್ಲದಿದ್ದರೆ ನಾನೂ ಬರುತ್ತಿದ್ದೆ.

## ಅಧ್ಯಾಯ ೪೫

ಪ್ರಾತಃಕಾಲ ರಮೇಶ ಅಲಹಾಬಾದಿನಿಂದ ಘಾಸಿಪುರಕ್ಕೆ ಹಿಂದಿರುಗಿದನು. ಜನರ ಓಡಾಟವಿರಲಿಲ್ಲ. ಛಳಿಗೆ ಗಿಡಗಳೆಲ್ಲಾ ಎಲೆಗಳಲ್ಲಿ ಹುದುಗಿಕೊಂಡಂತಿತ್ತು. ಹಳ್ಳಿಗಳನ್ನು ಮಂಜು ಮುಸುಕಿತ್ತು. ಮನೆ ಹತ್ತಿರವಾದಂತೆಲ್ಲಾ ರಮೇಶನ ಎದೆ ಬಡಿದುಕೊಳ್ಳಲಾರಂಭಿಸಿತು.

ಬಾಗಿಲಲ್ಲಿ ಗಾಡಿ ನಿಲ್ಲಿಸಿ ಇಳಿದನು. ಕಮಲೆ ಸದ್ದನ್ನು ಕೇಳಿ ತನ್ನನ್ನು ನಿರೀಕ್ಷಿಸುತ್ತಿರಬಹುದು. ಅವಳಿಗಾಗಿ ತಂದಿದ್ದ ಬೆಲೆಯುಳ್ಳ ಹಾರವನ್ನು ತಾನೇ ಕೊರಳಿಗೆ ಹಾಕಬೇಕೆಂದು ಕೈಯಲ್ಲಿ ಹಿಡಿದುಕೊಂಡನು. ಮನೆಯ ಹತ್ತಿರ ಬಂದು ನೋಡಲು ಬಾಗಿಲುಗಳನ್ನೆಲ್ಲಾ ಮುಚ್ಚಿ ವಿಷ್ಣು ನಿದ್ರೆ ಹೋಗುತ್ತಿದ್ದನು. ನಿಂತು ಗಟ್ಟಿಯಾಗಿ ಕೂಗಿದನು. ಆ ಸದ್ದಿಗೆ ಬೇರೊಬ್ಬರು ಎದ್ದು ಬರಬಹುದೆಂದು ನಿರೀಕ್ಷಿಸಿದನು. ರಾತ್ರಿಯೆಲ್ಲಾ ನಿದ್ದೆಗೆಟ್ಟು ಆತುರದಿಂದ ಬಂದವನಿಗೆ ಈ ಸ್ವಾಗತವೇ! ವಿಷ್ಣುವನ್ನು ತಟ್ಟಿ ಎಬ್ಬಿಸಬೇಕಾಯಿತು. ಗಾಬರಿಯಿಂದ ಎದ್ದನು.

"ಅಮ್ಮಾವರು ಮನೆಯಲ್ಲಿದ್ದಾರೆಯೇ?"

ಸ್ವಲ್ಪ ಹೊತ್ತು ಪ್ರಶ್ನೆಯ ಅರ್ಥ ಅವನಿಗೆ ಹೊಳೆಯಲಿಲ್ಲ. "ತೂಕಡಿಸುತ್ತಾ ಇದ್ದಾರೆ" ಎಂದು ಹಾಗೆಯೇ ಮಲಗಿದನು.

ನೂಕಿದರೆ ಬಾಗಿಲು ತೆರೆಯಿತು. ಎಲ್ಲಾ ಕೋಣೆಗಳಲ್ಲೂ ಹುಡುಕಿ "ಕಮಲಾ" ಎಂದು ಕೂಗಿದರೂ ಉತ್ತರವಿಲ್ಲ. ತೋಟದಲ್ಲಿ, ಅಡಿಗೆ ಮನೆಯಲ್ಲಿ, ಆಳುಗಳ ಕೋಣೆಯಲ್ಲಿ, ಕೊಟ್ಟಿಗೆಯಲ್ಲಿ, ಎಲ್ಲಿ ನೋಡಿದರೂ ಕಮಲೆಯಿಲ್ಲ.

ಆ ವೇಳೆಗೆ ಸೂರ್ಯೋದಯವಾಗಿ ಕಾಗೆಗಳು ಕೂಗುತ್ತಿದ್ದುವು. ಹಳ್ಳಿಯ ಹುಡುಗಿಯರು ಕೊಡಗಳನ್ನು ಹೊತ್ತು ನೀರಿಗೆ ಹೊರಟಿದ್ದರು. ಅಲ್ಲಲ್ಲಿ ಹೆಂಗಸರು ಗೋಧಿ ಬೀಸುವಾಗ ಹಾಡುವ ಸದ್ದು ಕೇಳಿಸುತ್ತಿತ್ತು.

ವಿಷ್ಣುವಿಗೆ ಎಚ್ಚರವಾಗಿರಲಿಲ್ಲ. ಅವನ ಬಳಿ ಹೆಂಡದ ವಾಸನೆ ತುಂಬಿತ್ತು. ರಮೇಶ ಜೋರಾಗಿ ಅಲುಗಿಸಲು ಎದ್ದು ನಿಂತನು.

"ಅಮ್ಮಾವರೆಲ್ಲಿ ?"

"ಮನೆಯಲ್ಲೇ ಇದ್ದಾರೆ."

"ನಿನ್ನ ತಲೆ!"

ವಿಷ್ಣು—ನಿನ್ನೆ ಬಂದರು.

ರಮೇಶ—ಎಲ್ಲಿ ಹೋದರು?

ವಿಷ್ಣು ಬಾಯಿ ಬಿಟ್ಟುಕೊಂಡು ನಿಂತಿದ್ದನು. ಆ ವೇಳೆಗೆ ಕಮಲೆ ಕೊಟ್ಟ ಒಟ್ಟಿಗಳನ್ನು ಧರಿಸಿ, ನಿದ್ರೆಯಿಲ್ಲದೆ ಕೆಂಪಾದ ಕಣ್ಣುಗಳ ಉಮೇಶ ಬಂದನು.

"ಅಮ್ಮಾವರೆಲ್ಲಿ ಉಮೇಶ್?"

"ನಿನ್ನೆಯಿಂದ ಇಲ್ಲೇ ಇದ್ದಾರೆ."

"ನೀನೆಲ್ಲಿಗೆ ಹೋಗಿದ್ದೆ?"

"ಸಿಧುಬಾಬುವಿನ ಮನೆಯಲ್ಲಿ ನಾಟಕ ನೋಡಲು ಅಮ್ಮಾವರೇ ಕಳುಹಿಸಿದರು" ಆ ವೇಳೆಗೆ ಗಾಡಿಯವನು ಬಾಡಿಗೆಗಾಗಿ ಬಂದನು. ರಮೇಶ ಪುನಃ ಗಾಡಿ ಹತ್ತಿ ಮಾವನ ಮನೆಗೆ ಹೋದನು. ಅಲ್ಲಿ ಏನೋ ಗಲಾಟೆಯಿದ್ದುದರಿಂದ ಕಮಲೆ ಖಾಯಿಲೆಯಾಗಿರಬಹುದೆಂದು ಊಹಿಸಿದನು. ಸಾಯಂಕಾಲ ಉಮೆಗೆ ಖಾಯಿಲೆಯಾಗಿ ಗಾಬರಿಯಿಂದ ಯಾರೂ ನಿದ್ರೆ ಹೋಗಿರಲಿಲ್ಲವೆಂದು ತಿಳಿದಾಗ ಕಮಲೆಯೂ ಉಮೆಯನ್ನು ನೋಡಿಕೊಳ್ಳಲು ಬಂದಿರಬಹುದೆಂದು ರಮೇಶ ಭಾವಿಸಿದನು. ವಿಪಿನನನ್ನು ನೋಡಿ "ಉಮೆಯನ್ನು ನೋಡಿ ಕಮಲೆ ಗಾಬರಿಯಾಗಿರಬೇಕು," ಎಂದನು. ವಿಪಿನನಿಗೆ ಕಮಲೆ ಬಂದಳೋ ಇಲ್ಲವೋ ಖಂಡಿತವಾಗಿ ತಿಳಿದಿರಲಿಲ್ಲ. ಸುಮ್ಮನೆ ತಲೆಯಾಡಿಸಿ "ಹೌದು. ಆಕೆಗೆ ಮಗುವನ್ನು ಕಂಡರೆ ಬಹಳ ಪ್ರಿತಿ. ಏನೂ ಗಾಬರಿಯಿಲ್ಲವೆಂದು ಡಾಕ್ಟರು ಹೇಳಿದರು" ಎಂದನು.

ತನ್ನ ಮತ್ತು ಕಮಲೆಯ ಸಮಾಗಮಕ್ಕೆ ವಿಧಿ ಬೇಕೆಂದು ಅಡ್ಡಿಗಳನ್ನೊಡ್ಡುತ್ತಿರುವಂತೆ ರಮೇಶನಿಗೆ ತೋರಿತು. ಅಷ್ಟು ಹೊತ್ತಿಗೆ ಉಮೇಶ ಒಳಕ್ಕೆ ಹೋದನು. ಸದ್ದು ಮಾಡಬೇಡವೆಂದು ಶೈಲಜೆ ಹೇಳಲು ಅವನು ಕಮಲೆ ಎಲ್ಲೆಂದು ಕೇಳಿದನು.

"ನೀನೇ ನಿನ್ನೆ ಕರೆದುಕೊಂಡು ಹೋದೆ. ಲಕ್ಷ್ಮಿಯನ್ನು ಕಳುಹಿಸ

ಬೇಕೆನ್ನುವಷ್ಟರಲ್ಲಿ ಉಮೆಗೆ ಖಾಯಿಲೆಯಾಯಿತು."

ಉಮೇಶ ಗಾಬರಿಯಿಂದ "ಇಲ್ಲಿಲ್ಲವೆ?" ಎಂದನು.

ಶೈಲ—ಹಾಗೆಂದರೇನು? ನೀನು ರಾತ್ರಿ ಎಲ್ಲಿ ಹೋಗಿದ್ದೆ?

ಉಮೇಶ—ಸಿಧುಬಾಬುವಿನ ಮನೆಯಲ್ಲಿ ನಾಟಕ ನೋಡಲು ಅಮ್ಮನೇ ಕಳುಹಿಸಿದ್ದರು.

ಶೈಲ—ಒಳ್ಳೆ ಆಸಾಮಿ ನೀನು! ವಿಷ್ಣುವೆಲ್ಲಿದ್ದ?

ಉಮೇಶ—ಅವನಿಗೇನೂ ತಿಳಿಯದು. ತುಂಬಾ ಕುಡಿದುಬಿಟ್ಟಿದ್ದ.

ಶೈಲ—ನನ್ನ ಯಜಮಾನರನ್ನು ಬೇಗ ಕರೆ.

ವಿಪಿನ ಬರಲು "ನೋಡಿ, ಎಂಥಾ ಕೆಲಸವಾಗಿದೆ!" ಎಂದಳು.

ವಿಪಿನ ಗಾಬರಿಯಿಂದ "ಏನಾಯಿತು" ಎಂದನು.

ಶೈಲ—ಕಮಲ ನಿನ್ನೆ ಮನೆಗೆ ಹೋದವಳು ಎಲ್ಲಿಯೂ ಇಲ್ಲವಂತೆ.

ವಿಪಿನ—ರಾತ್ರಿ ಇಲ್ಲಿಗೆ ಬರಲಿಲ್ಲವೆ?

ಶೈಲ—ಉಮೆ ಖಾಯಿಲೆಯಾದಾಗ ಕರೆಸೋಣವೆಂದಿದ್ದೆ. ಕರೆ ತರಲು ಯಾರೂ ಇರಲಿಲ್ಲ. ರಮೇಶಬಾಬು ಬಂದಿದ್ದಾರೆಯೆ?

ವಿಪಿನ—ಇಲ್ಲೆ ಇದ್ದಾಳೆಂದುಕೊಂಡಿದ್ದಾನೆ. ಈಗ ಬಂದಿದ್ದಾನೆ.

ಶೈಲ—ಉಮೆ ಸ್ವಸ್ಥವಾಗಿದ್ದಾಳೆ. ಕಮಲೆಯನ್ನು ಹುಡುಕಿ.

ವಿಪಿನ ರಮೇಶರು ಬಂಗಲೆಗೆ ಹಿಂದಿರುಗಿ ವಿಷ್ಣುವನ್ನು ಪ್ರಶ್ನಿಸಿದರು. ಸಾಯಂಕಾಲ ಕಮಲೆ ನದಿಯ ಕಡೆ ಹೊರಟುದಾಗಿಯೂ, ತನ್ನನ್ನು ಜತೆಯಲ್ಲಿ ಬರಬೇಡವೆಂದು ಹೇಳಿ ಒಂದು ರೂಪಾಯಿ ಕೊಟ್ಟು ದಾಗಿಯೂ ಹೇಳಿದನು. ಬಾಗಿಲಲ್ಲಿ ನಿಂತಿದ್ದಾಗ ಒಬ್ಬ ಮನುಷ್ಯ ಹೆಂಡ ಮಾರಲು ಬಂದಿದ್ದನು. ಆಮೇಲೆ ನಡೆದುದರ ಅರಿವು ಅವನಿಗಿರಲಿಲ್ಲ. ಅವನು ತೋರಿಸಿದ ಹಾದಿಯಲ್ಲಿ ರಮೇಶ ವಿಪಿನ ಉಮೇಶರು ಹೊರಟು ನದಿಯ ದಡದಲ್ಲಿ ನಿಂತರು. ಬಿಸಿಲಿನಲ್ಲಿ ಮರಳು ಮಿಂಚುತ್ತಿದ್ದಿತು.

ಉಮೇಶ, "ಅಮ್ಮಾ," ಎಂದು ಕೂಗಿದಾಗ ನದಿ ಮಾರ್ದನಿ ಗೊಟ್ಟಿತು. ಹುಡುಕುತ್ತಿದ್ದಾಗ ಉಮೇಶನಿಗೆ ಕಮಲೆಯ ಕೈ ವಸ್ತ್ರದಲ್ಲಿ ಕಟ್ಟಿದ್ದ ಬೀಗದ ಕೈಗೊಂಚಲು ಸಿಕ್ಕಿತು. ರಮೇಶ ನೋಡಿದಾಗ ಆ ವಸ್ತ್ರ ಬಿದ್ದಿದ್ದ ಕಡೆ ನದಿಗೆ ತಿರುಗಿದ್ದ ಎರಡು ಪಾದಗಳ ಗುರ್ತು ಕಾಣಿ

ಸಿತು. ನದಿಯಲ್ಲಿ ರಮೇಶ ಕಮಲೆಗೆ ಕೊಟ್ಟಿದ್ದ ಆಭರಣವೊಂದು ಮಿನುಗುತ್ತಿತ್ತು. ಕಮಲೆ ನದಿಯಲ್ಲಿ ಬಿದ್ದು ಹೋದಳೆಂದು ಉಮೇಶ ಅಳತೊಡಗಿದನು. ಹುಚ್ಚನಂತೆ ನೀರಿನಲ್ಲಿ ಬಿದ್ದು ಎದ್ದು ರೋದಿಸಿದನು. ರಮೇಶನೂ ಮಂಕಾಗಿದ್ದನು. ವಿಪಿನ, "ಹೊರಗೆ ಬಾ ಉಮೇಶ," ಎಂದು ಕೂಗಿದನು.

ಉಮೇಶ, "ನಾನು ಬರುವುದಿಲ್ಲ! ನನ್ನನ್ನು ಬಿಟ್ಟು ಎಲ್ಲಿಗೆ ಹೋದಿರಮ್ಮಾ" ಎಂದು ಅಳುತ್ತಿದ್ದನು. ಗಾಬರಿಗೇನೂ ಕಾರಣ ವಿರಲಿಲ್ಲ. ಮೀನಿನಂತೆ ಈಜುತ್ತಿದ್ದ ಉಮೇಶ ಇಷ್ಟಪಟ್ಟರೂ ನೀರಿನಲ್ಲಿ ಮುಳುಗಲಾಗುತ್ತಿರಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಅವನೇ ಅಳುತ್ತ ಮೇಲಕ್ಕೆ ಬಂದನು. ವಿಪಿನ ರಮೇಶನ ಭುಜದ ಮೇಲೆ ಕೈ ಹಾಕಿ "ಬನ್ನಿ! ಇಲ್ಲಿ ನಿಂತಿದ್ದು ಪ್ರಯೋಜನವಿಲ್ಲ. ಪೋಲೀಸಿಗೆ ಹೇಳೋಣ" ಎಂದನು.

ಆ ದಿನ ಶೈಲಜೆಯ ಮನೆಯಲ್ಲಿ ಎಲ್ಲರೂ ಗೋಳಾಡುವವರೇ. ನದಿಯಲ್ಲಿ ಬೆಸ್ತರು ಹುಡುಕಿದರು. ರೈಲ್ವೆ ನಿಲ್ದಾಣದಲ್ಲಿ ವಿಚಾರಿಸಿದಾಗ ಕಮಲೆಯಂತಹವರು ಯಾರೂ ಹೋದುದಾಗಿ ತಿಳಿಯಬರಲಿಲ್ಲ.

ಮಾವ ಆ ಮಧ್ಯಾಹ್ನ ಹಿಂದಿರುಗಿ ಕಮಲೆ ಆತ್ಮಹತ್ಯೆ ಮಾಡಿಕೊಂಡಳೆಂದೇ ನಿರ್ಧರಿಸಿದನು. ಲಕ್ಷ್ಮಿ, "ಅದಕ್ಕೇ ಹೆದರಿ ಉಮೆಗೆ ಜ್ವರ ಬಂದಿದ್ದು. ಮಂತ್ರ ಹಾಕಿಸಬೇಕು" ಎಂದಳು. ರಮೇಶನ ಮನಸ್ಸೇ ಮಂಕಾಗಿ ಕಣ್ಣಲ್ಲಿ ನೀರು ಕೂಡ ಬರಲಿಲ್ಲ, "ಗಂಗೆಯ ಪ್ರಸಾದವಾಗಿ ಬಂದ ಕಮಲೆ, ಭಕ್ತನಿಂದ ಎಸೆಯಲ್ಪಟ್ಟ ಪುಷ್ಪ ನೀರಿನಲ್ಲಿ ಸೇರುವಂತೆ ಗಂಗೆಯಲ್ಲೇ ಸೇರಿದಳಲ್ಲಾ!" ಎಂದು ಮರುಗಿದನು. ಸಂಜೆ ಪುನಃ ನದಿಯ ದಡದಲ್ಲಿ ಹೋಗಿ ನಿಂತನು. ಜೋಡುಗಳನ್ನು ತೆಗೆದು, ನೀರಿನಲ್ಲಿಳಿದು, ಕಮಲೆಗಾಗಿ ತಂದಿದ್ದ ಹಾರವನ್ನು ಗಂಗೆಯಲ್ಲೆಸೆದನು. ಅವನು ಘಾಸಿಪುರವನ್ನು ಬಿಟ್ಟು ಹೋದುದು ಮಾವನ ಮನೆಯಲ್ಲಿ ಯಾರಿಗೂ ತಿಳಿಯಲೇ ಇಲ್ಲ.

## ಅಧ್ಯಾಯ ೪೬

ಮುಂದೇನು ಮಾಡಬೇಕೆಂದು ರಮೇಶನಿಗೆ ತೋರಲಿಲ್ಲ. ಮನೆಯಿಲ್ಲ; ಕೆಲಸವಿಲ್ಲ; ಭವಿಷ್ಯತ್ತಿನಲ್ಲಿ ಆಸೆಯಿಲ್ಲ. ಅವನು ಹೇಮನಳಿನಿಯನ್ನು ಮರೆತಿರಲಿಲ್ಲ. ಮರೆಯಲು ಪ್ರಯತ್ನ ಮಾಡಿದ್ದನು. "ವಿಧಿ ಬಲವಾದ ಪೆಟ್ಟು ಕೊಟ್ಟು, ಪ್ರಪಂಚ ವ್ಯವಹಾರದಲ್ಲಿ ಸೇರುವ ಶಕ್ತಿಯನ್ನು ಕಿತ್ತುಕೊಂಡಿತು. ನಾನೊಂದು ಬರಡುಮರ!" ಎಂದುಕೊಂಡನು.

ಪ್ರಯಾಣದಿಂದ ಮನಶ್ಶಾಂತಿ ದೊರೆಯಬಹುದೆಂದು ಸ್ಥಳದಿಂದ ಸ್ಥಳಕ್ಕೆ ಪ್ರಯಾಣಮಾಡಿದನು. ಗಂಗೆಯಲ್ಲಿ ದೋಣಿಯಿಂದ ಕಾಶಿಯ ಘಟ್ಟಗಳನ್ನು ನೋಡಿದನು; ದೆಹಲಿಗೆ ಹೋಗಿ ಕುತ್ಬುಮಿನಾರ್ ಗೋಪುರವನ್ನು ಹತ್ತಿದನು. ಆಗ್ರಾದಲ್ಲಿ ತಾಜ್‌ಮಹಲಿನ ಬೆಳದಿಂಗಳ ಸೌಂದರ್ಯವನ್ನು ನೋಡಿದನು. ಅಮೃತಸರದ ಚಿನ್ನದ ದೇವಾಲಯವನ್ನೂ, ರಾಜಪುಟಾಣದ ಪ್ರದೇಶಗಳನ್ನೂ ನೋಡಿದನು. ಮನಸ್ಸಿಗೆ ಶಾಂತಿಯೇನೋ ಸಿಕ್ಕಲಿಲ್ಲ. ಕಡೆಗೆ, ತನ್ನ ಪ್ರೀತಿಯ, ಬಾಲ್ಯದ ಮನೆ ನೆನಪಿಗೆ ಬಂತು. ಪ್ರಯಾಣ ಮುಗಿಸಿ ಕಲ್ಕತ್ತೆಗೆ ಹೊರಟನು.

ಕಲ್ಕತ್ತೆಗೆ ಬಂದ ಕೆಲವು ದಿನಗಳ ಮೇಲೆ ಕಲುತೊಲದ ಕಡೆ ಹೊರಡುವ ಧೈರ್ಯಮಾಡಿದನು. ಆನಂದಬಾಬುವಿನ ಮನೆಯ ಬಾಗಿಲುಗಳೆಲ್ಲಾ ಮುಚ್ಚಲ್ಪಟ್ಟಿದ್ದುವು. ಮನೆಯ ಬಾಗಿಲು ತಟ್ಟಿದಾಗ ಸುಖನನು ಉತ್ತರಕೊಡಲಿಲ್ಲ. ಪಕ್ಕದ ಮನೆಯ ಬಾಗಿಲ ಮುಂದೆ ಹುಕ್ಕಾ ಸೇದುತ್ತಿದ್ದ ಚಂದ್ರಮೋಹನನು "ಯಾರು, ರಮೇಶಬಾಬುವೇ ? ಹೇಗಿದ್ದೀರಿ? ಆನಂದಬಾಬುವಿನ ಮನೆಯಲ್ಲಿ ಯಾರು ಇಲ್ಲ," ಎಂದನು.

ರಮೇಶ—ಎಲ್ಲಿಗೆ ಹೋಗಿದ್ದಾರೆ ?

ಚಂದ್ರ—ಗೊತ್ತಿಲ್ಲ. ಎಲ್ಲೋ ಉತ್ತರದ ಕಡೆಗೆ ಹೋದರು.

ರಮೇಶ—ಯಾರಾರು ಹೋದರು?

ಚಂದ್ರ—ಆನಂದಬಾಬು, ಅವರ ಮಗಳು.

ರಮೇಶ—ಬೇರೆ ಯಾರೂ ಹೋಗಲಿಲ್ಲವೆ ?

ಚಂದ್ರ—ಇಲ್ಲ. ಅವರು ಹೊರಟುದನ್ನು ನಾನೇ ನೋಡಿದೆ.

ರಮೇಶ—ಅವರ ಜತೆಯಲ್ಲಿ ನಳಿನಬಾಬು ಹೋದರೆಂದು ಯಾರೋ ಹೇಳಿದರಲ್ಲಾ.

ಚಂದ್ರ—ಸುಳ್ಳು. ನೀವಿದ್ದ ಮನೆಯಲ್ಲಿ ನಳಿನಬಾಬು ಇದ್ದರು. ಆದರೆ ಅವರು ಮೊದಲೇ ಕಾಶಿಗೆ ಹೋದರು.

ರಮೇಶ ಮೆಲ್ಲನೆ ನಳಿನಬಾಬುವಿನ ಸಮಾಚಾರವನ್ನು ತಿಳಿದನು. ನಳಿನಾಕ್ಷ ಚಟ್ಟೋಪಾಧ್ಯಾಯ ರಂಗಪುರದಲ್ಲಿದ್ದನೆಂದೂ, ಈಗ ತಾಯಿ ಯೊಡನೆ ಕಾಶಿಯಲ್ಲಿರುವನೆಂದೂ ತಿಳಿಯಿತು.

ರಮೇಶ ಸ್ವಲ್ಪ ಹೊತ್ತು ಸುಮ್ಮನಿದ್ದು "ಜೋಗೇಂದ್ರನೆಲ್ಲಿ?" ಎಂದನು. ಅವನು ಮೈಮನ್‌ಸಿಂಗ್‌ನ ವಿಷಯಪುರದಲ್ಲಿ ಒಂದು ಶಾಲೆಯ ಮುಖ್ಯೋಪಾಧ್ಯಾಯನಾಗಿದ್ದಾನೆಂದು ತಿಳಿಯಿತು.

ಚಂದ್ರ—ನಿಮ್ಮನ್ನು ನೋಡಿ ತುಂಬಾ ದಿನಗಳಾದುವು. ಎಲ್ಲಿ ಹೋಗಿದ್ದಿರಿ?

ರಮೇಶ—ಘಾಸಿಪುರದಲ್ಲಿ ವಕೀಲಿ ಮಾಡಲು ಹೋಗಿದ್ದೆ.

"ಅಲ್ಲೇ ಮನೆ ಮಾಡುತ್ತೀರೋ?"

"ಇಲ್ಲ. ಇನ್ನೂ ಗೊತ್ತುಮಾಡಿಲ್ಲ."

ರಮೇಶ ಹೋದ ಸ್ವಲ್ಪ ಹೊತ್ತಿಗೆ ಅಕ್ಷಯ ಬಂದನು. ತಾವಿಲ್ಲ ದಿರುವಾಗ ಮನೆಯ ಕಡೆ ಆಗಾಗ ಹೋಗಿ ನೋಡಬೇಕೆಂದು ಜೋಗೇಂದ್ರ ಹೇಳಿದ್ದುದರಿಂದ, ಕರ್ತವ್ಯದಲ್ಲಿ ಎಂದೂ ಬೇಸರವಿಲ್ಲದ ಅಕ್ಷಯ ಮನೆ ನೋಡಲು ಬಂದಿದ್ದನು. ಅವನೊಡನೆ ಚಂದ್ರಮೋಹನನು, "ರಮೇಶ ಬಾಬು ಬಂದಿದ್ದರು. ಈಗ ತಾನೇ ಹೋದರು," ಎಂದನು.

ಅಕ್ಷಯ—ನಿಜವಾಗಿ! ಇಲ್ಲೇನು ಕೆಲಸ?

ಚಂದ್ರ—ಗೊತ್ತಿಲ್ಲ. ಎಲ್ಲರನ್ನೂ ವಿಚಾರಿಸಿದರು. ಗುರುತೇ ಸಿಕ್ಕದಷ್ಟು ಇಳಿದು ಹೋಗಿದ್ದಾರೆ. ಧ್ವನಿ ಕೇಳಿ ತಿಳಿದುಕೊಂಡೆ.

ಅಕ್ಷಯ—ಈಗ ಎಲ್ಲಿದ್ದಾನಂತೆ?

ಚಂದ್ರ—ಇಷ್ಟು ದಿನವೂ ಘಾಸಿಪುರದಲ್ಲಿದ್ದರಂತೆ. ಈಗ ಎಲ್ಲಿರ ಬೇಕೋ ನಿರ್ಧರಿಸಿಲ್ಲವಂತೆ.

ಅಕ್ಷಯ ಸುಮ್ಮನಾದನು.

ರಮೇಶ ಮನೆಗೆ ಹಿಂದಿರುಗಿ "ವಿಧಿಯ ಆಟದ ಗೊಂಬೆಯಾಗಿದ್ದೇನೆ. ನನ್ನ, ಕಮಲೆ ಹೇಮನಳಿನಿ ನಳಿನಾಕ್ಷರ ವಿಚಾರವಾಗಿ ಒಂದು ಕಥೆಯನ್ನೇ ಬರೆಯುಬಹುದು. ಆ ಕಥೆಯನ್ನು ಯಾರೂ ನಂಬಲಾಗುವುದಿಲ್ಲ" ಎಂದುಕೊಂಡನು.

ಜೋಗೇಂದ್ರ ಒಂದು ಚಿಕ್ಕ ಮನೆಯಲ್ಲಿ ವಾಸಿಸುತ್ತಿದ್ದನು. ಭಾನುವಾರ ವೃತ್ತಪತ್ರಿಕೆಯನ್ನೋದುತ್ತಿದ್ದಾಗ ಯಾರೋ ಒಂದು ಚೀಟಿ ತಂದುಕೊಟ್ಟರು. ರಮೇಶನ ಅಕ್ಷರವನ್ನು ನೋಡಿ ಆಶ್ಚರ್ಯದಿಂದ ಬಿಚ್ಚಿನೋಡಲು, ತಾನು ವಿಷಯಪುರದ ಒಂದು ಅಂಗಡಿಯಲ್ಲಿ ಜೋಗೇಂದ್ರನಿಗಾಗಿ ಕಾದಿರುವುದಾಗಿ ಬರೆದಿದ್ದನು

ಜೋಗೇಂದ್ರ ತಕ್ಷಣ ಎದ್ದನು. ಜಗಳವಾಡಿದ್ದರೂ ಬಾಲ್ಯ ಸ್ನೇಹಿತ ಬಂದುದರಿಂದ ಅವನಿಗೆ ಸಂತೋಷವೇ ಆಯಿತು. ಅದೂ ಅಲ್ಲದೆ, ಹೇಮನಳಿನಿ ಇಲ್ಲದಿರುವಾಗ ಅವನನ್ನು ನೋಡಿದರೆ ತೊಂದರೆಯಿಲ್ಲ. ಚೀಟಿ ತಂದವನ ಜತೆಯಲ್ಲೇ ಜೋಗೇಂದ್ರನೂ ಹೋಗಲು ಗಂದಿಗನ ಅಂಗಡಿಯಲ್ಲಿ ಒಂದು ಸೀಮೆಯೆಣ್ಣೆ ಡಬ್ಬದಮೇಲೆ ರಮೇಶ ಕುಳಿತಿದ್ದನು. ಅಂಗಡಿಯವನು ಅವನಿಗೆ ಹುಕ್ಕಾಕೊಡಲು ಪ್ರಯತ್ನಿಸಿ, ಬೇಡವೆನ್ನಲು ವಿಚಿತ್ರಪ್ರಾಣಿಯೆಂದು ಸುಮ್ಮನಾದನು.

ಜೋಗೇಂದ್ರ ಬಂದೊಡನೆ ರಮೇಶನ ಕೈಹಿಡಿದೆಬ್ಬಿಸಿದನು. "ನಿನಗೆ ಬಹು ಸಂಕೋಚ. ಮನೆಗೆ ಬರದೆ ಇಲ್ಲೇಕೆ ಕುಳಿತಿದ್ದೀ? ಈ ಗಬ್ಬು ವಾಸನೆ ನಿನಗೆ ಇಷ್ಟವೋ ?"

ರಮೇಶನಿಗೆ ಜೋಗೇಂದ್ರನ ವಿಶ್ವಾಸ ಆಶ್ಚರ್ಯವನ್ನುಂಟುಮಾಡಿತು. ಮಾತನಾಡುತ್ತಾ ಜೋಗೇಂದ್ರ ಅವನನ್ನು ಕರೆದುಕೊಂಡು ಹೋದನು.

ಜೋಗೇಂದ್ರ—ದೇವರಿಗೆ ಕಣ್ಣೇ ಇಲ್ಲ. ಪಟ್ಟಣವಾಸಿಯಾದ ನನ್ನನ್ನು ಈ ಹಳ್ಳಿಗರ ನಡುವೆ ಕಾಡಿನಲ್ಲಿ ತಂದುಹಾಕಿದ್ದಾನೆ.

ರಮೇಶ, ಸುತ್ತಲೂ ನೋಡಿ,—ಸ್ಥಳವೇನೋ ಚನ್ನಾಗಿದೆ.

ಜೋಗೇಂ—ಅಂದರೆ?

ರಮೇಶ—ಜನರ ಗಲಾಟೆಯಿಲ್ಲ.

ಜೋಗೇಂ—ಇರುವ ಒಬ್ಬನನ್ನೂ ಓಡಿಸುವ ಪ್ರಯತ್ನದಲ್ಲಿದ್ದೇನೆ.

ರಮೇಶ—ಮನಸ್ಸಿಗೆ ಶಾಂತಿ ಸಿಕ್ಕಬೇಕಾದರೆ..... ..

ಜೋಗೇಂ—ಶಾಂತಿ ಹೆಚ್ಚಾಗಿ ಹೋಯಿತು. ಈಗ ಸ್ಕೂಲು ಕಮಿಟಿ ಕಾರ್ಯದರ್ಶಿಯೊಡನೆ ಜಗಳ ತೆಗೆದಿದ್ದೇನೆ. ಜಮೀನ್ದಾರನ ವಿಚಾರ ನಾನು ಪತ್ರಿಕೆಯಲ್ಲಿ ಬರೆಯುವುದಿಲ್ಲವೆಂದೆ. ಎಂದೋ ಓಡಿಸುತ್ತಾರೆ. ನನ್ನ ನಾಯಿಯೇ ನನ್ನ ಜತೆಗಾರ.

ಇಷ್ಟು ಹೊತ್ತಿಗೆ ಮನೆ ತಲಪಲು ರಮೇಶ ಕುರ್ಚಿಯ ಮೇಲೆ ಕುಳಿತನು.

ಜೋಗೇಂ—ಎದ್ದು ಸ್ನಾನಮಾಡು. ನಾನು ಚಹಾ ಮಾಡುತ್ತೇನೆ.

ದಿನವೆಲ್ಲಾ ಹರಟೆಯಲ್ಲಿ ಕಳೆಯಿತು. ರಾತ್ರಿ ಊಟಮಾಡಿ ಇಬ್ಬರೂ ಕುರ್ಚಿಗಳಮೇಲೆ ಕುಳಿತರು. ಹೊರಗಡೆ ತೋಳಗಳು ಊಳಿಡುತ್ತಿದ್ದುವು. ತಾನು ಬಂದ ಕಾರಣವನ್ನು ರಮೇಶ ಹೇಳತೊಡಗಿದನು.

"ನಾನಿಲ್ಲಿಗೇಕೆ ಬಂದೆನೆಂದು ನೀನು ಊಹಿಸಿರಬಹುದು. ನೀನು ಕೇಳಿದಾಗ ಒಂದು ಪ್ರಶ್ನೆಗೆ ಉತ್ತರ ಹೇಳಲಾರದೆ ಹೋದೆ. ಈಗ ಅದಕ್ಕೇನೂ ಅಡ್ಡಿಯಿಲ್ಲ" ಎಂದು ಸ್ವಲ್ಪ ಸುಮ್ಮನಿದ್ದು ಕಮಲೆಯ ವೃತ್ತಾಂತವನ್ನು ಮೊದಲಿನಿಂದ ಕೊನೆಯವರೆಗೂ ಹೇಳಿದನು. ಆಗಾಗ ಗಂಟಲು ಕಟ್ಟಿ ಬಂತು. ಜೋಗೇಂದ್ರನೂ ನಿಶ್ಶಬ್ದವಾಗಿ ಕೇಳಿ, ನಿಟ್ಟುಸಿರು ಬಿಟ್ಟು "ಹೀಗೆ ನೀನು ಆ ದಿನ ಹೇಳಿದ್ದರೆ ನಾನು ನಂಬುತ್ತಿರಲಿಲ್ಲ," ಎಂದನು.

"ಈಗಲೂ ನಂಬುವುದು ಕಷ್ಟ. ನನಗೆ ಮದುವೆಯಾದ ಹಳ್ಳಿಗೆ ಬಾ. ಅಲ್ಲಿಂದ ಕಮಲೆಯ ಚಿಕ್ಕಪ್ಪನ ಮನೆಗೂ ಕರೆದುಕೊಂಡು ಹೋಗುತ್ತೇನೆ."

"ಏನೂ ಆವಶ್ಯಕವಿಲ್ಲ. ಏನೋ ಒಂದು ಸಲ ಅನುಮಾನಿಸಿದರೂ, ನನಗೆ ನಿನ್ನ ಮಾತಿನಲ್ಲಿ ಪೂರ್ತಿ ನಂಬಿಕೆಯೇ."

ರಮೇಶ—ವಿಧಿ ನನ್ನನ್ನೊಂದು ಸುಳ್ಳಿನ ಬಲೆಯಲ್ಲಿ ಸುತ್ತಿತ್ತು. ಈಗ ಅದರಿಂದ ಬಿಡುಗಡೆಯಾಯಿತು. ಕಮಲೆ ಆತ್ಮಹತ್ಯೆಯೇಕೆ ಮಾಡಿಕೊಂಡಳೋ ತಿಳಿಯದು. ಆದರೆ ಇದ್ದುದು ಅದೊಂದೇ ದಾರಿ. ಬದುಕಿ

ದ್ದರೆ ಇನ್ನೂ ಏನೇನು ಅನಾಹುತವಾಗುತ್ತಿದ್ದಿತೋ! ಮೃತ್ಯುವಿನ ಬಾಯಿಂದ ಅನಿರೀಕ್ಷಿತವಾಗಿ ತಪ್ಪಿಸಿಕೊಂಡು ಬಂದು ಪುನಃ ಅಲ್ಲಿಯೇ ಸೇರಿಹೋದಳು.

ಜೋಗೇಂ—ಅವಳು ಆತ್ಮಹತ್ಯೆಮಾಡಿಕೊಂಡಳೆಂಬುದು ಖಂಡಿತ ವಿಲ್ಲ. ನಿನಗೇನೋ ಬಿಡುಗಡೆಯಾಯಿತು. ಈಗ ನಳಿನಾಕ್ಷನ ವಿಚಾರ ಆಲೋಚಿಸಬೇಕು. ನನಗೆ ಅವನು ಅರ್ಥವಾಗದಿದ್ದರೂ ಹೇಮನಳಿನಿಗೆ ಮೆಚ್ಚಿಕೆ. ಚಹಾ ಮಾಂಸಗಳನ್ನು ಅವಳು ಬಿಟ್ಟಾಗಲೇ ನನಗೆ ಅನುಮಾನವಾಯಿತು. ಬೈದರೂ ಅವಳು ಪ್ರತ್ಯುತ್ತರ ಕೊಡುವುದಿಲ್ಲ. ನಿನ್ನ ಸಹಾಯದಿಂದ ಅವಳು ದಾರಿಗೆ ಬರಬೇಕು. ಸಿದ್ಧನಾಗು.

ರಮೇಶ ನಕ್ಕು, "ನಾನೇನೋ ಸಿದ್ಧ," ಎಂದನು.

ಜೋಗೇಂ—ಕ್ರಿಸ್‌ಮಸ್ ರಜಾ ಬರಲಿ.

ರಮೇಶ—ಇನ್ನೂ ಬಹಳ ದಿನಗಳಿವೆ. ನಾನೇ ಹೋಗಿ ನೋಡು ತ್ತೇನೆ.

ಜೋಗೇಂ—ಬೇಡ. ನಿಮ್ಮ ಮದುವೆಗೆ ಅಡ್ಡಿ ಮಾಡಿದವನು ನಾನು. ನಾನೇ ಸರಿಪಡಿಸಬೇಕು.

ರಮೇಶ—ಅದುವರೆಗೂ ನಾನು....

ಜೋಗೇಂ-ಇನ್ನು ಹತ್ತುದಿನ ನೀನಿಲ್ಲಿರಬೇಕು. ಎಲ್ಲರೊಡನೆಯೂ ಜಗಳವಾಡಿದ್ದೇನೆ. ಒಬ್ಬ ಸ್ನೇಹಿತ ಬೇಕಾಗಿದೆ. ತೋಳಗಳ ಗೋಳು ಕೇಳಿ ಸಾಕಾಗಿ, ನಿನ್ನ ಧ್ವನಿ ಮಧುರ ಸಂಗೀತದಂತಿದೆ.

## ಅಧ್ಯಾಯ ೪೭

ಚಂದ್ರ ಮೋಹನನ ಸುದ್ದಿ ಅಕ್ಷಯನನ್ನು ಚಿಂತೆಗೀಡು ಮಾಡಿತು.

"ಏನಿರಬಹುದು. ಇದುವರೆಗೂ ಯಾರಿಗೂ ತಿಳಿಯದಂತೆ ಘಾಸಿ ಪುರದಲ್ಲಿದ್ದು ಇಲ್ಲಿಗೇಕೆ ಬಂದ? ಆನಂದಬಾಬು ಹೇಮನಳಿನಿ ಕಾಶಿಯಲ್ಲಿರು ವುದು ತಿಳಿದರೆ ಅಲ್ಲಿಗೇ ಹೋಗುತ್ತಾನೆ," ಎಂದು ಆಲೋಚಿಸಿ, ಘಾಸಿ ಪುರಕ್ಕೆ ಹೋಗಿ ವಿಚಾರವನ್ನು ತಿಳಿದು ಬರಬೇಕೆಂದು ನಿರ್ಧರಿಸಿದನು. ಅನಂತರ ಆನಂದಬಾಬುವಿಗೆ ಹೇಳಬಹುದು.

ಬಂದು ಮಧ್ಯಾಹ್ನ ಅಕ್ಷಯ ಘಾಸಿ ಪುರದಲ್ಲಿಳಿದನು. ಅಂಗಡಿಯವ ರಿಂದ ರಮೇಶನ ವಿಳಾಸ ತಿಳಿಯಲಿಲ್ಲ. ನ್ಯಾಯಸ್ಥಾನದಲ್ಲಿ ಕಂಡ ಒಬ್ಬ ವಕೀಲನಿಗೆ ವಂದಿಸಿ, "ಕ್ಷಮಿಸಿ. ಇಲ್ಲಿ ರಮೇಶಚಂದ್ರ ಚೌಧುರಿ ಎಂಬು ವರು ಬಂದಿದ್ದರೇ? ಅವರು ಎಲ್ಲಿದ್ದರೆಂದು ತಿಳಿದಿದೆಯೇ?" ಎಂದು ವಿಚಾರಿಸಿದನು. ಆತನು, ರಮೇಶ ಕೆಲವು ಕಾಲ ಮಾವನ ಮನೆಯಲ್ಲಿದ್ದು ದಾಗಿಯೂ, ಆತನ ಹೆಂಡತಿ ಸತ್ತಮೇಲೆ ಎಲ್ಲಿ ಹೋದನೋ ಪತ್ತೆಯಿಲ್ಲ ವೆಂದೂ ಹೇಳಿದನು. ಅಕ್ಷಯ ಮಾವನ ಮನೆಗೆ ಹೊರಟನು. "ರಮೇಶನ ಆಟ ತಿಳಿಯಿತು. ಅವನ ಹೆಂಡತಿ ಸತ್ತಿದ್ದಾಳೆ. ಹೇಮನಳಿನಿಗೆ ತನಗೆ ಹೆಂಡತಿಯೇ ಇರಲಿಲ್ಲವೆಂದು ಹೇಳಲು ಹೊರಟಿದ್ದಾನೆ. ಅವಳು ಏನು ಹೇಳಿದರೂ ನಂಬುತ್ತಾಳೆ," ಎಂದುಕೊಂಡನು.

ಮಾವನನ್ನು ಪ್ರಶ್ನಿಸಲು ಆತನು ದುಃಖ ತಡೆಯಲಾರದೆ ಹೋದನು. "ರಮೇಶ ಬಾಬುವಿನ ಸ್ನೇಹಿತರಾದ್ದರಿಂದ ನಿಮಗೆ ಕಮ ಲೆಯ ಗುರ್ತು ಚನ್ನಾಗಿರಬಹುದು. ಕೆಲವು ದಿನಗಳಲ್ಲೇ ಅವಳು ನನಗೆ ಮಗಳೆಂಬಂತೆ ತೋರಿತು. ಹೀಗಾಗಬಹುದೆಂದು ಯಾರಿಗೆ ತಿಳಿದಿತ್ತು?" ಎಂದನು.

ಅಕ್ಷಯನೂ ದುಃಖ ನಟಿಸುತ್ತಾ "ಅರ್ಥವೇ ಆಗುವುದಿಲ್ಲ. ರಮೇಶ ಆಕೆಯನ್ನು ಸರಿಯಾಗಿ ನೋಡಿಕೊಳ್ಳಲಿಲ್ಲವೆ?"

"ನೀವು ರಮೇಶನ ಸ್ನೇಹಿತರು; ಕೋಪಿಸಿಕೊಳ್ಳಬೇಡಿ. ನನಗೆ ಆತನನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ಮಾತು ಚನ್ನಾಗಿ ಆಡಿದರೂ ಆತನ ಮನಸ್ಸಿನಲ್ಲಿ ಏನಿದೆಯೆಂದು ತಿಳಿಯುವುದಿಲ್ಲ. ಅಂತಹ ಹೆಂಡತಿಯನ್ನು ಉದಾಸೀನ ಮಾಡುತ್ತಿದ್ದುದು ನನಗೆ ಸರಿದೋರಲಿಲ್ಲ. ಗಂಡನ ವಿಚಾರವಾಗಿ ಆಕೆ ಎಂದೂ ಕೆಟ್ಟ ಮಾತನ್ನಾಡಲಿಲ್ಲ. ಅವಳಿ ಗೇನೋ ದುಃಖವಿದ್ದಿತೆಂದು ನನ್ನ ಮಗಳು ಊಹಿಸಿದಳು. ಎಷ್ಟು ದುಃಖಪಟ್ಟು ಆತ್ಮಹತ್ಯೆ ಮಾಡಿಕೊಂಡಳೋ! ನಾನಾದರೂ ಊರಲ್ಲಿದ್ದಿ ದ್ದರೆ ಆಕೆ ನನ್ನನ್ನು ಬಿಟ್ಟು ಹೋಗುತ್ತಿರಲಿಲ್ಲ."

ಅಕ್ಷಯ ಮಾವನೊಡನೆ ರಮೇಶನ ಬಂಗಲೆಯನ್ನು ನೋಡಿ ಬಂದನು. ಅಲ್ಲಿಗೆ ಹೋಗಿ ಬಂದಮೇಲೆ ಅಕ್ಷಯ, "ಆಕೆ ಆತ್ಮಹತ್ಯೆ ಮಾಡಿಕೊಂಡ

ಳೆಂದು ತೋರುವುದಿಲ್ಲ," ಎಂದನು.

ಮಾವ—ಹಾಗಾದರೆ ನಿಮ್ಮ ಅಭಿಪ್ರಾಯವೇನು?

ಅಕ್ಷಯ—ಮನೆ ಬಿಟ್ಟು ಓಡಿಹೋಗಿದ್ದಾಳೆ. ಹುಡುಕಬೇಕು.

ಮಾವನಿಗೆ ಬಹಳ ಸಂತೋಷವಾಯಿತು. "ಇರಬಹುದು. ಅಸಾಧ್ಯವೇನಲ್ಲ."

ಅಕ್ಷಯ—ಕಾಶಿ ಇಲ್ಲಿಗೆ ದೂರವಿಲ್ಲ, ನಮಗೆ ಗುರುತಾದವರು ಅಲ್ಲಿದ್ದಾರೆ. ಕಮಲೆ ಅವರ ಬಳಿಗೆ ಹೋಗಿರಬಹುದು.

ಮಾವ—ರಮೇಶ ಆ ಮಾತನ್ನೇ ಹೇಳಲಿಲ್ಲ. ತಿಳಿದಿದ್ದರೆ ವಿಚಾರಿಸುತ್ತಿದ್ದೆ.

ಅಕ್ಷಯ—ಇಬ್ಬರೂ ಹೋಗೋಣ. ನಿಮಗೆ ಈ ಸ್ಥಳ ಚನ್ನಾಗಿ ತಿಳಿದಿದೆ. ಸರಿಯಾಗಿ ವಿಚಾರಿಸಬಹುದು.

ಮಾವ ಒಪ್ಪಿಕೊಂಡನು. ಮಾವನ ಮಾತನ್ನು ಹೇಮನಳಿನಿ ಒಪ್ಪುವಳೆಂದೂ, ರಮೇಶನ ಮೋಸ ಅವಳಿಗೆ ತಿಳಿಯುವುದೆಂದೂ ಅಕ್ಷಯನ ಹಂಚಿಕೆಯಾಗಿತ್ತು.

## ಅಧ್ಯಾಯ ೪೮

ಊರಿನಾಚೆ ಬಡಾವಣೆಯಲ್ಲಿ ಆನಂದಬಾಬು ಮನೆಯನ್ನು ಬಾಡಿಗೆಗೆ ಗೊತ್ತು ಮಾಡಿದ್ದನು. ಕಾಶಿಗೆ ಬಂದ ಮೇಲೆ ನಳಿನಾಕ್ಷನ ತಾಯಿ ಕ್ಷೇಮಂಕರಿಗೆ ನ್ಯೂಮೋನಿಯಾ ಖಾಯಿಲೆಯೆಂದು ತಿಳಿಯಿತು. ಚಳಿ ಹೆಚ್ಚಾಗಿದ್ದಾಗಲೂ ಆಕೆ ಗಂಗಾಸ್ನಾನ ಬಿಡದಿದ್ದುದರಿಂದ ಜ್ವರ ವಿಷಮಿಸಿಕೊಂಡಿತು. ಹೇಮನಳಿನಿಯ ಉಪಚಾರದಿಂದ ಜ್ವರ ಕಡಮೆಯಾಗಿದ್ದರೂ ಆಕೆ ಬಹಳ ಬಲಹೀನಳಾಗಿದ್ದಳು. ಹೇಮನಳಿನಿ ಮುಟ್ಟಿದ ಆಹಾರವನ್ನು ಆಕೆ ತೆಗೆದುಕೊಳ್ಳುತ್ತಿರಲಿಲ್ಲವಾದುದರಿಂದ ನಳಿನಾಕ್ಷನೇ ಅಡಿಗೆಮಾಡುತ್ತಿದ್ದನು. "ನಿನಗೆ ನಾನೊಂದು ಹೊರೆ. ಸಾಯಬಾರದೆ!" ಎಂದು ಗೋಳಾಡುತ್ತಿದ್ದಳು. ತನಗಾಗಿ ಒಂದೂ ಬೇಕಾಗಿಲ್ಲದಿದ್ದರೂ ಕ್ಷೇಮಂಕರಿಗೆ ಸುತ್ತಮುತ್ತಲಿನ ಸೌಂದರ್ಯದಲ್ಲಿ ಸಂತೋಷ

ವಿದ್ದಿತು. ಹೇಮನಳಿನಿ ಮನೆಯನ್ನು ಚೊಕ್ಕಟಮಾಡಿ ಆನಂದ ಬಾಬು ಕಳುಹಿಸಿದ ಹೂಗಳಿಂದ ರೋಗಿಯ ಕೊಠಡಿಯನ್ನು ಅಲಂಕರಿಸು ತ್ತಿದ್ದಳು.

ಆಕೆಯ ಸೇವೆಗೆ ಒಬ್ಬ ಹೆಂಗಸನ್ನು ಗೊತ್ತುಮಾಡಬೇಕೆಂದು ನಳಿನಾಕ್ಷ ಪ್ರಯತ್ನಿಸಿದರೂ ಆಕೆ ಒಪ್ಪಲಿಲ್ಲ. ಮನೆಗೆಲಸಕ್ಕೆ ಆಳುಗಳಿದ್ದರೂ ಆಕೆ ತನ್ನ ಸ್ವಂತ ಕೆಲಸಗಳನ್ನು ಅವರು ಮಾಡಿದರೆ ಒಪ್ಪುತ್ತಿರಲಿಲ್ಲ. ಖಾಯಿಲೆಯಾದಾಗಲೂ ಯಾರನ್ನೂ ಗಾಳಿ ಬೀಸಲು ಸಹ ಹತ್ತಿರಕ್ಕೆ ಸೇರಿಸುತ್ತಿರಲಿಲ್ಲ. ಮಕ್ಕಳೆಂದರೆ ಆಕೆಗೆ ತುಂಬಾ ಪ್ರೀತಿ. ಗಂಗಾಸ್ನಾನ ಮಾಡಿಕೊಂಡು ಸಿಕ್ಕಿದ ಎಲ್ಲಾ ಶಿವದೇವಸ್ಥಾನಗಳಲ್ಲೂ ಪೂಜೆ ಮಾಡಿಕೊಂಡು ಬರುತ್ತಾ ಬೀದಿಯಲ್ಲಾಡುತ್ತಿದ್ದ ಮಕ್ಕಳನ್ನು ಕರೆತಂದು ಆಟದ ಸಾಮಾನುಗಳನ್ನೂ ತಿಂಡಿಯನ್ನೂ ಕೊಡುವಳು. ಮನೆಯಲ್ಲಿ ಮಕ್ಕಳ ಗಲಾಟೆಯಿದ್ದರೆ ಆಕೆಗೆ ತೃಪ್ತಿ. ಕಂಡದ್ದನ್ನೆಲ್ಲಾ ಕೊಂಡು ಸ್ನೇಹಿತರಿಗೆ ಹಂಚುವುದರಲ್ಲಿ ಆನಂದ. ನಳಿನಾಕ್ಷನ ಹೆಂಡತಿಗಾಗಿ ಒಂದು ದೊಡ್ಡ ಪೆಟ್ಟಿಗೆಯ ತುಂಬ ಸೀರೆ, ಒಡವೆಗಳನ್ನು ಕೂಡಿಸಿಟ್ಟಿದ್ದಳು. ಸೊಸೆಯನ್ನು ಸಿಂಗರಿಸಿ ಆನಂದ ಪಡಬೇಕೆಂದು ಆಶಿಸುತ್ತಿದ್ದಳು.

ತಾನು ಒಂದೇ ಹೊತ್ತು ಊಟಮಾಡಿ ದಿನವೆಲ್ಲಾ ಪೂಜೆಯಲ್ಲಿ ಕಳೆದರೂ ನಳಿನಾಕ್ಷ ಹಾಗಿರುವುದು ಆಕೆಗೆ ಇಷ್ಟವಿರಲಿಲ್ಲ. ಗಂಡಸರು ಸುಮ್ಮನೆ ಬೆಳೆದ ಮಕ್ಕಳೆಂದೂ ಅವರು ಅಷ್ಟು ನಿಯಮವಾಗಿರುವುದು ಸರಿಯಲ್ಲವೆಂದೂ ಆಕೆಯ ಅಭಿಪ್ರಾಯ ತಾನು ಮಡಿಯಾಗಿದ್ದಾಗ ಮುಟ್ಟದಿದ್ದು ತನ್ನ ಪೂಜೆಗೆ ನಳಿನಾಕ್ಷ ಅಡ್ಡಿಮಾಡದಿದ್ದರೆ ಸಾಕಾಗಿತ್ತು. ಮುದುಕನಾದ ಆನಂದಬಾಬು, ಹೇಮನಳಿನಿ ನಳಿನಾಕ್ಷನನ್ನು ಗುರುವಿನಂತೆ ಕಾಣುತ್ತಿದ್ದುದು ಆಕೆಗೆ ಹಾಸ್ಯಾಸ್ಪದವಾಗಿ ತೋರಿತು. ಒಂದು ದಿನ ಹೇಮನಳಿನಿಯನ್ನು ಕುರಿತು "ನಳಿನಾಕ್ಷನ ಹುಚ್ಚಾಟಗಳಿಗೆ ಉತ್ತೇಜನ ಕೊಡುತ್ತಿದ್ದೀರಿ. ನಿಮ್ಮ ವಯಸ್ಸಿನಲ್ಲಿ ಸಂತೋಷವಾಗಿರಬೇಕು. ವ್ರತ ನಿಯಮಗಳು ನಿಮಗೇಕೆ? ನಮಗಂತೂ ಚಿಕ್ಕಂದಿನಿಂದ ಇದೇ ಅಭ್ಯಾಸವಾಗಿದೆ. ನಿಮಗೆ ಹಾಗಲ್ಲ. ಇಷ್ಟ ಬಂದ ಹಾಗಿರಬೇಕು. ಉಪವಾಸ

ಗಳು ನಿನಗೆ ಸರಿಹೋಗುವುದಿಲ್ಲ. ನಳಿನನಿಗೆ ಸ್ವಲ್ಪವೂ ಬುದ್ಧಿಯಿಲ್ಲ. ನನಗೋಸ್ಕರ ಇದೆಲ್ಲಾ ಪ್ರಾರಂಭಿಸಿದ್ದಾನೆ. ಸನ್ಯಾಸಿಯಾಗುತ್ತಾನೇನೋ ಎಂದು ಹೆದರಿಕೆಯಾಗಿದೆ. ಹೇಳಿದರೆ ನಕ್ಕುಬಿಡುತ್ತಾನೆ." ಹೇಮ ನಳಿನಿಯು ತಲೆ ಬಾಚುತ್ತಾ ಈ ಮಾತು ಹೇಳಿದಳು.

"ನಾನೇನೋ ಹಳೆಯ ಕಾಲದವಳು. ಆದರೆ ನಿನಗಿಂತ ಚನ್ನಾಗಿ ತುರುಬುಕಟ್ಟಲು ಬರುತ್ತೆ. ನನಗೆ ಗುರುತಾದ ಒಬ್ಬ ಆಂಗ್ಲೇಯ ಹೆಂಗಸು ಹೊಲಿಗೆ ಕಲಿಸಲು ಬರುತ್ತಿದ್ದಳು ಆಕೆ ಕೂದಲು ಕಟ್ಟುವುದನ್ನೂ ಕಲಿಸಿದಳು. ಆಕೆ ಮುಟ್ಟಿದಾಗಲೆಲ್ಲಾ ನಾನು ಸ್ನಾನಮಾಡಿ ಬೇರೆ ಬಟ್ಟೆ ಯುಡಬೇಕಾಗಿತ್ತು. ನನಗದೇ ಅಭ್ಯಾಸ. ನೀನು ಮುಟ್ಟಿದುದನ್ನು ತಿನ್ನುವುದಿಲ್ಲವೆಂದು ಬೇಸರ ಪಡಬೇಡ. ನನ್ನ ಗಂಡನ ಮನೆಯವರು ಜಾತಿಬಿಟ್ಟಾಗ ನಾನು ನೊಂದುಕೊಂಡರೂ ಅಡ್ಡಿ ಪಡಿಸಲಿಲ್ಲ. ಅವರವರ ಮನೋವೃತ್ತಿ ಅವರವರಿಗೆ" ಎಂದು ಕಣ್ಣೊರಸಿಕೊಂಡಳು.

ಮುದುಕಿಗೆ ಹೇಮನಳಿನಿಯ ನೀಳವಾದ ಕೂದಲನ್ನು ವಿಧವಿಧವಾಗಿ ಅಲಂಕರಿಸಲು ಆಸೆ. ಪೆಟ್ಟಿಗೆಯಿಂದ ಆಭರಣಗಳನ್ನು ತೆಗೆದು ಹುಡುಗಿ ಯನ್ನು ಅಲಂಕರಿಸುವಳು. ಹೇಮನಳಿನಿ ಪ್ರತಿಸಂಜೆಯೂ ಹೊಲಿಗೆ ಕಲಿಯಲು ಬರುತ್ತಿದ್ದಳು.

ಕ್ಷೇಮಂಕರಿಗೆ ಬಂಗಾಳಿ ಕಾದಂಬರಿಗಳು ಇಷ್ಟವಾಗಿದ್ದುದರಿಂದ ಹೇಮನಳಿನಿ ತನ್ನ ಪುಸ್ತಕಗಳನ್ನು ತಂದುಕೊಡುತ್ತಿದ್ದಳು. ಆಕೆಯ ರಸವತ್ತಾದ ಮಾತುಗಳಿಗೆ ಹೇಮನಳಿನಿ ಮನಸೋತಿದ್ದಳು.

## ಅಧ್ಯಾಯ ೪೯

ಕ್ಷೇಮಂಕರಿಗೆ ಪುನಃ ಜ್ವರ ಬಂತು. ಆದರೆ ಮೊದಲಿನಷ್ಟು ತೀವ್ರವಾಗಿರಲಿಲ್ಲ. ವಾಸಿಯಾದ ಮೇಲೆ ಒಂದು ಪ್ರಾತಃಕಾಲ ನಳಿನಾಕ್ಷ ಬಂದು ನಮಸ್ಕರಿಸಿ, ಸ್ವಲ್ಪಮಟ್ಟಿಗೆ ನಿಯಮವನ್ನು ಬಿಟ್ಟು ಸರಿಯಾಗಿ ಪಥ್ಯಮಾಡಿಕೊಳ್ಳಬೇಕೆಂದು ಹೇಳಿದನು.

"ನೀನು ಸನ್ಯಾಸಿಯಾಗು! ನಾನು ಆಚಾರವನ್ನೆಲ್ಲಾ ಬಿಡುತ್ತೇನೆ!

ಈ ಆಟ ನಿಲ್ಲಿಸಿ ಮದುವೆಯಾಗಿ ಸುಖವಾಗಿರು."

ನಳಿನಾಕ್ಷ ಸುಮ್ಮನಿರಲು ಕ್ಷೇಮಂಕರಿ ಮುಂದುವರಿಸುತ್ತಾ, "ನಾನು ಶಾಶ್ವತವಲ್ಲ. ನಿನಗೆ ಮದುವೆಯಾದರೆ ಸಂತೋಷದಿಂದ ಸಾಯುತ್ತೇನೆ. ಚಿಕ್ಕ ಹುಡುಗಿಯನ್ನು ನೀನು ಮದುವೆಯಾದರೆ ನಾನೇ ಮನೆಗೆಲಸದಲ್ಲಿ ತಯಾರುಮಾಡಬೇಕೆಂದು ಆಶಿಸಿದ್ದೆ. ಖಾಯಿಲೆಯಾದ ಮೇಲೆ ಜ್ಞಾನ ಬಂತು. ನಾನು ಬಹಳ ದಿನ ಬದುಕಿರುವೆನೆಂಬ ಆಸೆ ಯಿಲ್ಲ. ಚಿಕ್ಕ ಹುಡುಗಿಗಿಂತ ನಿನ್ನ ವಯಸ್ಸಿಗೆ ಸರಿಯಾದವಳನ್ನೇ ಮದುವೆಯಾಗುವುದೊಳ್ಳೆಯದು. ನಿನ್ನ ಮದುವೆಯಾಗುವವರೆಗೂ ನನ್ನ ಮನಸ್ಸಿಗೆ ನೆಮ್ಮದಿಯಿಲ್ಲ.

ನಳಿನಾಕ್ಷ—ನನ್ನನ್ನು ಮದುವೆಯಾಗಲು ಒಪ್ಪುವ ಹುಡುಗಿಯನ್ನು ಎಲ್ಲಿ ತರಲಿ?

ಕ್ಷೇಮ—ನೀನು ಚಿಂತಿಸಬೇಡ. ನಾನು ಗೊತ್ತುಮಾಡುತ್ತೇನೆ.

ಕ್ಷೇಮಂಕರಿ ಎಂದೂ ಆನಂದಬಾಬುವಿನೊಡನೆ ಪ್ರತ್ಯಕ್ಷವಾಗಿ ಮಾತನಾಡಿದವಳಲ್ಲ. ಆ ದಿನ ಒಳಗೆ ಬರಹೇಳಿ, "ನಿಮ್ಮ ಮಗಳನ್ನು ಕಂಡರೆ ನನಗೆ ಬಹಳ ಪ್ರೀತಿ. ನೀವಿಬ್ಬರೂ ನಳಿನನನ್ನು ನೋಡಿದ್ದೀರಿ. ಅವನಿಗಿಂತ ಒಳ್ಳೆಯ ವರ ನಿಮ್ಮ ಮಗಳಿಗೆ ಸಿಕ್ಕಲಾರನಲ್ಲವೆ?"

ಆನಂದ—ನಳಿನಾಕ್ಷ. ಅಳಿಯನಾಗುವುದು ಅದೃಷ್ಟವೇ. ಆತನೇ ನನ್ನುವನೋ .......

ಕ್ಷೇಮ—ನಾನು ಹೇಳಿದರೆ ಒಪ್ಪುತ್ತಾನೆ. ನಿಮ್ಮ ಮಗಳನ್ನು ಪ್ರೀತಿಸುವುದೇನೂ ಕಷ್ಟದ ಕೆಲಸವಲ್ಲ. ನಾನು ಬಹಳ ದಿನ ಬದುಕ ಲಾರೆ. ಬೇಗ ಗೊತ್ತುಮಾಡೋಣ. ಆನಂದಬಾಬು ಸಂತೋಷದಿಂದ ಮನೆಗೆ ಹಿಂದಿರುಗಿ ಹೇಮಳನ್ನು ಕರೆದನು. —

"ನಾನು ಮುದಿಯಾದೆ. ನಿನಗೊಂದು ಮದುವೆಯಾದರೆ ಧೈರ್ಯ. ತಾಯಿಯಿಲ್ಲದ ನಿನ್ನ ಸುಖಕ್ಕೆ ನಾನೇ ಹೊಣೆ."

ಹೇಮನಳಿನಿ ಕುತೂಹಲದಿಂದ ತಂದೆಯ ಮುಖವನ್ನೇ ನೋಡು ತ್ತಿದ್ದಳು.

"ನಳಿನಾಕ್ಷನ ತಾಯಿ ನಿನ್ನನ್ನು ಆತನಿಗೆ ಮದುವೆ ಮಾಡಿಕೊಡ

ಬೇಕೆಂದು ಕೇಳಿದರು. ನನಗೂ ಬಹಳ ಸಂತೋಷ."

ಹೇಮನಳಿನಿಯ ಮುಖ ಕೆಂಪಾಯಿತು. ತಲೆತಗ್ಗಿಸಿ, "ಅದು ಹೇಗಾಗುತ್ತಪ್ಪಾ?" ಎಂದಳು. ನಳಿನಾಕ್ಷ ಪತಿಯಾಗಬಹುದೆಂಬ ಕಲ್ಪನೆ ಕೂಡ ಅವಳಿಗೆ ಬಂದಿರಲಿಲ್ಲ.

ಆನಂದ—ಅಸಾಧ್ಯವೇ?

ಹೇಮ—ಹೇಗೆ ಸಾಧ್ಯ.—ಎಂದು ಹೊರಗೆ ಹೋದಳು.

ಆನಂದಬಾಬುವಿನ ಆಸೆ ಮುರಿಯಿತು. ಹೇಮನಳಿನಿ ಒಪ್ಪಲಾರ ಳೆಂದು ಆತನಿಗೆ ತೋರಿರಲಿಲ್ಲ. ಅವಳಿಗೆ ಈ ಮದುವೆ ಇಷ್ಟವೆಂದೇ ತಿಳಿ ದಿದ್ದನು. ಮುಂದೇನೂ ತೋರದೆ ಅವಳ ತಾಯಿಯನ್ನು ನೆನಸಿಕೊಳ್ಳು ತ್ತಾ ಕುಳಿತಿದ್ದನು.

ಹೇಮನಳಿನಿ ಪಡಸಾಲೆಯಲ್ಲಿ ಕುಳಿತಿದ್ದಳು. ತಿರುಗಿ ನೋಡಿದಾಗ ತಂದೆಯ ಮುಖ ದುಃಖದಿಂದ ತುಂಬಿರುವುದು ಕಾಣಿಸಿತು. ಆತನ ಕುರ್ಚಿಯ ಹಿಂದೆ ಹೋಗಿ ನಿಂತು, "ಬಾಪ್ಪ, ಊಟಮಾಡೋಣ. ಅಡಿಗೆ ತಣ್ಣಗಾಗುತ್ತೆ," ಎಂದಳು. ಆನಂದಬಾಬು ಎದ್ದು ಹೋದರೂ ಊಟ ರುಚಿಸಲಿಲ್ಲ. ಹೇಮನಳಿನಿ ದುಃಖವನ್ನು ಮರೆತು ಸುಖವಾಗಿ ರುವಳೆಂದಿದ್ದ ಆತನ ಆಸೆ ಅಳಿಯಿತು. "ಕೊನೆಗೂ ಹೇಮ ರಮೇಶ ನನ್ನು ಮರೆಯಲಿಲ್ಲವಲ್ಲಾ," ಎಂದುಕೊಂಡು ನಿಟ್ಟುಸಿರು ಬಿಟ್ಟನು.

ಊಟವಾಗುತ್ತಲೇ ಮಲಗುವುದು ಆತನ ಅಭ್ಯಾಸ. ಈ ದಿನ ಪಡಸಾಲೆಯಲ್ಲಿ ಕುಳಿತು ಆಲೋಚನೆಯಲ್ಲಿ ಮಗ್ನನಾಗಿದ್ದನು. ಹೇಮ ನಳಿನಿ ಹುಡುಗಾಟದಿಂದ, "ಮಲಗಪ್ಪಾ. ಇಲ್ಲಿ ತುಂಬ ಛಳಿ," ಎಂದಳು.

"ನೀನು ಮಲಗಮ್ಮಾ, ನಾನೂ ಬರುತ್ತೇನೆ."

ಸ್ವಲ್ಪ ಹೊತ್ತು ಬಿಟ್ಟು ಹೇಮನಳಿನಿ, "ಇಲ್ಲಿದ್ದರೆ ನೆಗಡಿಯಾಗುತ್ತೆ, ಒಳಕ್ಕಾದರೂ ಬಾಪ್ಪ," ಎಂದಳು.

ಆನಂದಬಾಬು ಎದ್ದು ಹೋಗಿ ಮಲಗಿದನು.

ಹೇಮನಳಿನಿ ರಮೇಶನನ್ನು ಮರೆಯಲು ಪ್ರಯತ್ನಿಸಿದ್ದಳು. ಈಗ ತಿರುಗಿ ಮೊದಲಿನ ನೋವು ಕಾಣಿಸಿಕೊಂಡಿತು. ನಳಿನಾಕ್ಷನನ್ನು ಗುರು ವೆಂದು ಭಾವಿಸಿದ್ದಾಗ ಮನಶ್ಶಾಂತಿ ಲಭಿಸಿತೆಂದೇ ಭಾವಿಸಿದಳು. ಮದು

ವೆಯ ಮಾತು ಬಂದಾಗ ರಮೇಶನ ನೆನಪು ಅಳಿಯುವುದು ಅಸಾಧ್ಯ ವೆಂದರಿತಳು.

## ಅಧ್ಯಾಯ ೫೦

ಕ್ಷೇಮಂಕರಿ ನಳಿನಾಕ್ಷನಿಗೆ ಮದುವೆಯ ಏರ್ಪಾಟನ್ನು ತಿಳಿಸಿದಳು. ನಳಿನಾಕ್ಷನಕ್ಕು, "ಇಷ್ಟು ಬೇಗ ಎಲ್ಲಾ ಗೊತ್ತಾಗಿ ಹೋಯಿತೆ?" ಎಂದನು.

ಕ್ಷೇಮ—ಹೌದು, ನಾನು ಶಾಶ್ವತವಲ್ಲ. ಹೇಮನಳಿನಿ ಒಳ್ಳೆ ಹುಡುಗಿ, ರೂಪಿನಲ್ಲಿ ಸಾಧಾರಣವಾಗಿದ್ದರೂ........

ನಳಿನ—ರೂಪದ ಮಾತಲ್ಲಮ್ಮಾ. ಹೇಮನಳಿನಿಯನ್ನು ಮದುವೆಯಾಗುವುದು ಸಾಧ್ಯವಿಲ್ಲ.

ಕ್ಷೇಮ—ಹುಚ್ಚನ ಹಾಗಾಡ ಬೇಡ. ಅಭ್ಯಂತರವೇನಿದೆ?

ಕಾರಣ ವಿವರಿಸುವುದು ಕಷ್ಟವಾಯಿತು. ಆದರೆ ತನ್ನಲ್ಲಿ ಗುರು ಭಾವವನ್ನಿಟ್ಟು ಕೊಂಡಿದ್ದ ಹೇಮನಳಿನಿಯನ್ನು ಮದುವೆಯಾಗೆನ್ನುವುದು ಸರಿಯಾಗಿ ತೋರಲಿಲ್ಲ. ನಳಿನಾಕ್ಷನ ಮೌನವೇ ಒಪ್ಪಿಗೆಯೆಂದರಿತು ಆತನ ತಾಯಿ, "ನೀನು ಬೇಡವೆನ್ನ ಕೂಡದು. ನನಗೋಸ್ಕರ ಸನ್ಯಾಸಿಯಾಗಿ ಬಿಟ್ಟಿದ್ದೀಯೆ. ನಿನ್ನ ವಯಸ್ಸಿಗೆ ಇದು ಸರಿಯಲ್ಲ. ಈ ಅವಕಾಶ ಕಳೆದು ಕೊಳ್ಳದೆ ಮೊದಲನೆಯ ಶುಭಲಗ್ನದಲ್ಲೇ ನಿನ್ನ ಮದುವೆಯಾಗಬೇಕು.

ಸ್ವಲ್ಪ ಹೊತ್ತಾದ ಮೇಲೆ ನಳಿನಾಕ್ಷ, "ಮನಸ್ಸಿಗೆ ಹಚ್ಚಿಕೊಳ್ಳದಿದ್ದರೆ ನಿನಗೆ ಒಂದು ವಿಚಾರ ತಿಳಿಸಬೇಕು. ಅದು ನಡೆದು ಆಗಲೇ ೯-೧೦ ತಿಂಗಳಾಯಿತು. ಸುಮ್ಮನೆ ವ್ಯಥೆ ಪಡುವೆಯೆಂದು ನಿನಗೆ ಇದು ವರೆಗೂ ಹೇಳದಿದ್ದೆ."

ಕ್ಷೇಮಂಕರಿಗೆ ಗಾಬರಿಯಾಯಿತು. "ಏನು ಹೇಳುವೆಯೋ! ಮುನ್ನುಡಿಯನ್ನು ಕೇಳಿಯೇ ಹೆದರಿಕೆಯಾಗುತ್ತೆ. ಯಾವ ಕಾಲಕ್ಕೆ ಏನು ದುಃಖ ಬರುತ್ತದೆಯೋ ತಿಳಿಯದು. ಏನು ಹೇಳುವೆಯೋ ಬೇಗ ಹೇಳು.

ನಳಿನಾಕ್ಷ—ಹೋದ ಫೆಬ್ರುವರಿ ತಿಂಗಳಲ್ಲಿ ರಂಗಪುರದಲ್ಲಿದ್ದ ನನ್ನ ಆಸ್ತಿಯನ್ನೆಲ್ಲಾ ಮಾರಿ ಕಲ್ಕತ್ತಿಗೆ ಹೊರಟೆ. ಶರಾ ನದಿಯನ್ನು ನೋಡಿ, ರೈಲಿಗೆ ಬದಲಾಗಿ ದೋಣಿಯಲ್ಲಿ ಹೋಗ ಬೇಕೆನ್ನಿಸಿತು. ಎರಡು ದಿನದ ಪ್ರಯಾಣವಾದ ಮೇಲೆ ಒಂದು ಕಡೆ ನಿಂತು ದಡದ ಮೇಲೆ ಹೋದೆ. ಬಂದೂಕು ಹಿಡಿದಿದ್ದ ಭೂಪೇಂದ್ರ ಸಿಕ್ಕಿದನು ಅಲ್ಲಿ ಅವನು ಡೆಪ್ಯುಟಿ ಮೇಜಿಸ್ಟ್ರೇಟನಂತೆ. ಅವನನ್ನು ನೋಡಿ ಬಹಳ ದಿನಗಳಾಗಿದ್ದುದರಿಂದ ಕೆಲವು ದಿನಗಳಿದ್ದು ಹೋಗಬೇಕೆಂದು ಬಲವಂತ ಮಾಡಿದನು ಒಂದು ದಿನ ಧೋಬಕಪುರವೆಂಬ ಹಳ್ಳಿಗೆ ಹೋದೆವು. ಒಂದು ಮನೆಗೆ ಭೂಪೇಂದ್ರ ಕರೆದುಕೊಂಡು ಹೋದನು. ಮನೆಯ ಯಜಮಾನ ಕುರ್ಚಿಗಳನ್ನು ಹಾಕಿದನು. ಆತನ ಪಡಸಾಲೆಯನ್ನೇ ಪಾಠಶಾಲೆಯಾಗಿ ಉಪಯೋಗಿಸುತ್ತಿದ್ದರು. ಮಕ್ಕಳು ಗಟ್ಟಿಯಾಗಿ ಪಾಠಗಳನ್ನು ಓದುತ್ತಿದ್ದರು. ಮನೆಯ ಯಜಮಾನನಾದ ತಾರಿಣಿ ಚಟರ್ಜಿ ಭೂಪೇಂದ್ರನಿಂದ ನನ್ನ ವಿಚಾರವನ್ನೆಲ್ಲಾ ಕೇಳಿ ತಿಳಿದುಕೊಂಡನು. ಹಿಂದಿರುಗುತ್ತಿದ್ದಾಗ ಭೂಪೇಂದ್ರ "ನಿನಗೆ ಒಬ್ಬ ವಧುವನ್ನು ತೋರಿಸುತ್ತಾರೆ," ಎಂದನು. "ಹಾಗೆಂದರೇನು?" ಎಂದು ಕೇಳಿದೆ. "ಆ ತಾರಿಣಿ ಚಟರ್ಜಿ ಒಬ್ಬ ಲೋಭಿ. ಮೇಜಿಸ್ಟ್ರೇಟು ಬಂದಾಗ ಮನೆಯಲ್ಲಿ ಶಾಲೆ ನಡಸಿ ತಾನೊಬ್ಬ ಲೋಕ ಸೇವಾದುರಂಧರನೆಂದು ತೋರಿಸಿಕೊಳ್ಳುತ್ತಾನೆ. ಆ ಉಪಾಧ್ಯಾಯನಿಗೆ ಊಟ ಹಾಕಿ ರಾತ್ರಿ ಹತ್ತು ಘಂಟೆಯ ವರೆಗೂ ತನ್ನ ಲೆಖ್ಖ ಬರೆಸಿಕೊಳ್ಳುತ್ತಾನೆ. ಉಪಾಧ್ಯಾಯನ ಸಂಬಳ ಸರ್ಕಾರದವರು ಕೊಡುತ್ತಾರೆ. ತಾರಿಣಿಯ ತಂಗಿ ಗಂಡ ಸತ್ತಾಗ ಆಕೆಯನ್ನು ಪೋಷಿಸಬೇಕಾಯಿತು. ಗರ್ಭಿಣಿಯಾಗಿದ್ದ ಆಕೆ ಒಬ್ಬ ಮಗಳನ್ನು ಹೆತ್ತು ಸತ್ತು ಹೋದಳು. ಆಕೆಗೆ ಸರಿಯಾಗಿ ಔಷಧ ಪಥ್ಯಗಳನ್ನು ಮಾಡಲಿಲ್ಲ. ವಿಧವೆಯಾದ ಇನ್ನೊಬ್ಬ ತಂಗಿ ಮನೆಗೆಲಸಕ್ಕೆ ಇದ್ದಳು. ಆಕೆ ದಿಕ್ಕಿಲ್ಲದ ಮಗುವನ್ನು ಸಾಕುತ್ತಿದ್ದಳು. ಕೆಲವು ಕಾಲದ ಮೇಲೆ ಆಕೆಯೂ ಸತ್ತಳು. ಈಗ ಆ ಹುಡುಗಿಯಿಂದ ಸದಾ ಕೆಲಸ ಮಾಡಿಸುತ್ತಿರುತ್ತಾರೆ. ಮದುವೆಯ ವಯಸ್ಸು ಮೀರಿದರೂ ಗತಿಯಿಲ್ಲದ ಆ ಹುಡುಗಿಯನ್ನು ಯಾರೂ ಮದುವೆಯಾಗಲಿಲ್ಲ. ತಂದೆ ಸತ್ತ ಮೇಲೆ ಹುಟ್ಟಿದವಳಾದುದ

ರಿಂದ ಅವಳ ತಾಯಿಯ ನಡತೆಯಲ್ಲೂ ಅನುಮಾನ ಪಡುತ್ತಾರೆ. ತಾರಿಣಿ ಹಣವಂತನಾದುದರಿಂದ ವರ ದಕ್ಷಿಣೆಗೂ ಆಸೆ ಪಡುತ್ತಾರೆ. ನಾಲ್ಕು ವರ್ಷದಿಂದ ಅವಳಿಗೆ ಹತ್ತೇವರ್ಷವೆಂದು ಹೇಳುತ್ತಿರುವುದರಿಂದ ಹದಿನಾಲ್ಕು ವರ್ಷವಾದರೂ ಆಗಿದೆ. ಹುಡುಗಿ ಬಹಳ ರೂಪವತಿ. ಹೆಸರು ಕಮಲ. ಲಕ್ಷ್ಮಿಯ ಹಾಗೆ ಕಾಣುತ್ತಾಳೆ. ಹೊಸಬರು ಯಾರಾದರೂ ಬ್ರಾಹ್ಮಣರು ಬಂದರೆ ತಾರಿಣಿ ತಂಗಿಯ ಮಗಳನ್ನು ಮದುವೆಯಾಗೆಂದು ಬೇಡುತ್ತಾನೆ. ಆದರೆ ಹುಡುಗ ಇಷ್ಟಪಟ್ಟರೂ ಹಳ್ಳಿಯವರು ಹೆದರಿಸಿ ಓಡಿಸುತ್ತಾರೆ. ಈಗ ನಿನ್ನ ಸರದಿ," ಎಂದನು.

ನಾನು ಆಲೋಚಿಸದೆ, "ಆಗಲಿ. ನಾನೇ ಆ ಹುಡುಗಿಯನ್ನು ಮದುವೆಯಾಗುತ್ತೇನೆ," ಎಂದೆ. ಬೆಳೆದ ಬ್ರಹ್ಮ ಸಮಾಜದ ಹುಡುಗಿಯನ್ನು ಮದುವೆಯಾದರೆ ನಿನಗೆ ಸುಖವಿಲ್ಲವೆಂದು ನನಗೆಗೊತ್ತು. ಹಿಂದೂ ಸೊಸೆಯನ್ನು ತಂದು ನಿನಗೆ ಆಶ್ಚರ್ಯವನ್ನುಂಟು ಮಾಡಬೇಕೆಂಬ ಆಸೆ ನನಗಿದ್ದೇ ಇತ್ತು. ಭೂಪೇಂದ್ರ ದಿಕ್ಕು ತೋರದೆ, "ಸುಳ್ಳಾಡುತ್ತೀ," ಎಂದನು

"ಇಲ್ಲ ಖಂಡಿತವಾಗಿ ನಿರ್ಧರಿಸಿದ್ದೇನೆ," ಎಂದೆ. ಆ ಸಾಯಂಕಾಲವೇ ತಾರಿಣಿ ಚಟರ್ಜಿ ಬಂದು ಕೈಮುಗಿದು ಬೇಡಿಕೊಂಡ. "ಹುಡುಗಿಯನ್ನು ನೋಡಿ. ಇಷ್ಟವಿಲ್ಲದಿದ್ದರೆ ಬೇಡ. ಹಳ್ಳಿಯಲ್ಲಿ ನನ್ನ ಶತ್ರುಗಳ ಮಾತನ್ನು ನಂಬಬೇಡಿ," ಎಂದು ಕೇಳಿಕೊಂಡ.

"ನಾನು ನೋಡಬೇಕಾಗಿಲ್ಲ. ಮದುವೆ ಗೊತ್ತುಮಾಡಿ," ಎಂದೆ. ತಾರಿಣಿ "ನಾಡಿದ್ದಾಗಬಹುದು" ಎಂದ. ಆತನ ಅವಸರಕ್ಕೆ ಕಾರಣ ಖರ್ಚು ಮಿಗಿಸುವುದು. ಮದುವೆಯೇನೋ ಆಯಿತು."

"ಆಯಿತೆ?" ಕ್ಷೇಮಂಕರಿ ಗಾಬರಿಯಿಂದ ಕೇಳಿದಳು. "ನಿಜವೇ, ನಳಿನಾ?"

ನಳಿನ—ಹೌದಮ್ಮಾ ನನ್ನ ಹೆಂಡತಿಯೊಡನೆ ದೋಣಿಯಲ್ಲಿ ಹೊರಟೆ. ಆ ಸಾಯಂಕಾಲವೇ ದೊಡ್ಡ ಬಿರುಗಾಳಿಯೆದ್ದು ದೋಣಿ ಮುಳುಗಿ ಹೋಯಿತು.

"ಅಯ್ಯೋ ದೇವರೇ?"

ನಳಿನ—ನನಗೆ ಜ್ಞಾನ ಬಂದಾಗ ನೀರಿನಲ್ಲಿ ಒದ್ದಾಡುತ್ತಿದ್ದೆ. ದೋಣಿಯಾಗಲಿ ಅದರಲ್ಲಿದ್ದವರಾಗಲಿ ಕಾಣಿಸಲಿಲ್ಲ. ಪೋಲೀಸಿನವರು ಹುಡುಕಿದರೂ ಪ್ರಯೋಜನವಾಗಲಿಲ್ಲ.

ಕ್ಷೇಮಂ—ಆದುದಾಯಿತು. ಪುನಃ ಈ ವಿಚಾರವನ್ನೆತ್ತಬೇಡ. ನೆನೆಸಿಕೊಂಡರೆ ನಡುಕವುಂಟಾಗುತ್ತೆ.

ನಳಿನ—ನನ್ನ ಮದುವೆ ಮಾತೆತ್ತದಿದ್ದರೆ ಈ ವಿಚಾರ ಹೇಳುತ್ತಲೇ ಇರಲಿಲ್ಲ.

ಕ್ಷೇಮಂ—ಇದರಿಂದ ನಿನ್ನ ಮದುವೆಗೆ ಏನಡ್ಡಿ ?

ನಳಿನ—ಆ ಹುಡುಗಿಯೇ ಬದುಕಿರಬಹುದು. ಆದುದರಿಂದಲೇ ಮದುವೆಯಾಗಲು ನನಗೆ ಇಷ್ಟವಿಲ್ಲ.

ಕ್ಷೇಮಂ—ನಿನಗೆ ಹುಚ್ಚು ! ಬದುಕಿದ್ದರೆ ತಿಳಿಯುತ್ತಿತ್ತು.

ನಳಿನ—ಅವಳಿಗೆ ನನ್ನ ವಿಚಾರವೇ ತಿಳಿಯದು. ನನ್ನ ಮುಖವನ್ನಾದರೂ ನೋಡಿದಳೋ ಇಲ್ಲವೋ ! ಕಾಶಿಗೆ ಬಂದಮೇಲೆ ತಾರಿಣಿಗೆ ವಿಳಾಸ ಬರೆದೆ. ಆ ಕಾಗದ ಆತನಿಗೆ ಸೇರದೆ ನನಗೇ ವಾಪಸು ಬಂತು."

ಕ್ಷೇಮ—ಆದರೆ....

ನಳಿನ—ಒಂದು ವರ್ಷವಾದರೂ ಕಾಯಬೇಕೆಂದಿದ್ದೇನೆ.

ಕ್ಷೇಮ—ನೀನು ಯಾವಾಗಲೂ ಹೀಗೇ ! ವರುಷವೇಕೆ ?

ನಳಿನ—ಈಗ ಡಿಸೆಂಬರ್. ಮುಂದಿನ ತಿಂಗಳು ಮದುವೆಗೆ ಲಗ್ನಗಳಿಲ್ಲ. ಫೆಬ್ರವರಿ ತಿಂಗಳನ್ನು ಬಿಟ್ಟರೆ ಮಾರ್ಚಿಗೆ ಒಂದು ವರ್ಷ ಮುಗಿದೇ ಹೋಗುತ್ತೆ.

ಕ್ಷೇಮ—ಆದರೂ ಈ ಮದುವೆ ಗೊತ್ತಾಗಬೇಕು. ನಾನು ಹೇಮನಳಿನಿಯ ತಂದೆಗೆ ಹೇಳಿದೆ.

ನಳಿನ—ಎಲ್ಲಾ ನಾವೆಣಿಸಿದಂತೆ ನಡೆಯುವುದಿಲ್ಲ.

ಕ್ಷೇಮ—ದೇವರಿದ್ದಾನೆ. ನಿನ್ನ ಕಥೆ ನೆನೆಸಿಕೊಂಡರೆ ನನ್ನ ಹೃದಯ ಇನ್ನೂ ನಡುಗುತ್ತದೆ.

ನಳಿನ—ನನಗೆ ಅದೇ ಹೆದರಿಕೆ. ಅದರಿಂದಲೇ ಇಷ್ಟುದಿನ ನಿನಗೆ ತಿಳಿಸಲಿಲ್ಲ.

ಕ್ಷೇಮ— ಈ ನಡುವೆ ಕೆಟ್ಟ ಸುದ್ದಿ ತಡೆಯುವ ಶಕ್ತಿಯೇ ನನಗಿಲ್ಲ. ವಯಸ್ಸಾಯಿತು.

## ಅಧ್ಯಾಯ ೫೧

ಕಮಲೆ ಗಂಗೆಯ ದಡ ಸೇರಿದಾಗ ಸೂರ್ಯ ಆಗಲೇ ಮುಳುಗುವುದರಲ್ಲಿದ್ದನು. ಪಶ್ಚಿಮಕ್ಕೆ ತಿರುಗಿ ನಮಸ್ಕರಿಸಿ, ಗಂಗೆಯ ಪವಿತ್ರ ಜಲವನ್ನು ತಲೆಯಮೇಲೆ ಪ್ರೋಕ್ಷಿಸಿಕೊಂಡು ಹೂಗಳಿಂದ ಪೂಜಿಸಿದಳು. ತನಗೆ ತಿಳಿದ ದೇವರಿಗೆಲ್ಲಾ ಕೈಮುಗಿದಳು. ತಾನು ಪೂಜಿಸಬೇಕಾದ ಇನ್ನೊಂದು ವ್ಯಕ್ತಿಯ ನೆನಪುಂಟಾಯಿತು. ಆತನ ಮುಖ ನೋಡುವ ಆಸೆ ಅವಳಿಗಿರಲಿಲ್ಲ. ಆತನೊಡನೆ ಕಳೆದಿದ್ದ ಆ ಒಂದು ರಾತ್ರಿ ಆತನ ಪಾದಗಳನ್ನು ಕೂಡ ಅವಳು ನೋಡಿರಲಿಲ್ಲ. ತನ್ನ ಜತೆಗಾತಿಯರೊಡನೆ ಆತನು ಮಾತನಾಡಿದ್ದನು ನಾಚಿಕೆಯಿಂದ ಅವಳು ಅದನ್ನು ಕೇಳಿಯೂ ಇರಲಿಲ್ಲ. ಈಗ ನದಿಯ ದಡದಲ್ಲಿ ನಿಂತು ಆತನ ಧ್ವನಿಯನ್ನು ಜ್ಞಾಪಕಮಾಡಿಕೊಳ್ಳಲು ಪ್ರಯತ್ನಿಸಿದಳು.

ಮದುವೆ ಮುಗಿಯುವ ವೇಳೆಗೆ ರಾತ್ರಿ ಬಹಳ ಹೊತ್ತಾಗಿತ್ತು. ಆಯಾಸದಿಂದ ನಿದ್ರೆ ಹೋಗಿದ್ದಳು. ಎಚ್ಚರವಾಗುವಾಗ ಒಬ್ಬ ಸಂಗಾತಿ ಅವಳನ್ನು ಎಬ್ಬಿಸುತ್ತಿದ್ದಳು. ಹಾಸಿಗೆಯಲ್ಲಿ ಒಬ್ಬಳೇ ಇದ್ದಳು. ಪತಿಯ ಗುರುತಾಗಿ ಅವಳಿಗೇನೂ ಜ್ಞಾಪಕ ಬರಲಿಲ್ಲ. ಮುಖ, ಧ್ವನಿ ಯಾವುದರ ನೆನಪೂ ಇರಲಿಲ್ಲ. ಆತನ ಉತ್ತರೀಯದ ದಾರ ಕೂಡ ಕಳೆದು ಹೋಗಿತ್ತು.

ರಮೇಶ ಹೇಮನಳಿನಿಗೆ ಬರೆದಿದ್ದ ಕಾಗದವನ್ನು ಸೀರೆಯ ಸೆರಗಿನಲ್ಲಿ ಕಟ್ಟಿಕೊಂಡಿದ್ದಳು. ಸಂಜೆಯ ಬೆಳಕಿನಲ್ಲಿ ಮರಳಿನ ಮೇಲೆ ಕುಳಿತು ಅದನ್ನು ಪುನಃ ಓದಿದಳು. ತನ್ನ ಪತಿಯ ಹೆಸರು ನಳಿನಾಕ್ಷ ಚಟ್ಟೋಪಾಧ್ಯಾಯನೆಂದೂ ರಂಗಪುರದಲ್ಲಿ ವೈದ್ಯನಾಗಿದ್ದನೆಂದೂ, ಅಲ್ಲಿ ಆತನ ವಿಚಾರ ರಮೇಶನಿಗೆ ತಿಳಿಯಲಿಲ್ಲವೆಂದೂ ಬರೆದಿದ್ದನು. ಕಾಗದದ ಮಿಕ್ಕ ಹಾಳೆಗಳು ಎಲ್ಲಿಯೋ ಬಿದ್ದು ಹೋಗಿದ್ದುವು.

ನಳಿನಾಕ್ಷ! ಆ ಹೆಸರು ನೋವಿಗೆ ಅಂಜನವಾಗಿ ಹೃದಯವನ್ನು ತುಂಬಿ ಉಕ್ಕುತ್ತಿತ್ತು. ಕಣ್ಣೀರು ಹರಿದು ಮನಸ್ಸಿಗೆ ಸ್ವಲ್ಪ ಶಾಂತಿ ಯುಂಟಾಯಿತು.

"ಅಂಧಕಾರ ಕಳೆಯಿತು. ಆತನ ಪಾದಗಳನ್ನು ಸೇರಬೇಕು. ಜೀವವಿರುವವರೆಗೂ ಆತನನ್ನು ಸೇರುವ ಆಸೆಯಿದೆ. ನಾನು ಬದುಕಿರುವುದೇ ಆತನ ಸೇವೆಗಾಗಿ." ಎಂದುಕೊಂಡಳು. ಕೈವಸ್ತ್ರಕ್ಕೆ ಕಟ್ಟಿದ್ದ ಬೀಗದ ಕೈಗೊಂಚಲನ್ನೂ ರಮೇಶ ಕೊಟ್ಟಿದ್ದ ಆಭರಣಗಳ್ನೂ ದೂರ ಎಸೆದಳು. ಎಲ್ಲಿಗೆ ಹೋಗಬೇಕೆಂಬ ಅರಿವಿಲ್ಲದೆ, ಅಲ್ಲಿ ಮಾತ್ರ ಕ್ಷಣಕಾಲ ಕೂಡ ನಿಲ್ಲಲಾರದೆ, ಪಶ್ಚಿಮದ ಕಡೆ ಹೊರಟಳು.

ಬೆಳಕೆಲ್ಲಾ ಮರೆಯಾಗಿ ನದಿ ಅಂಧಕಾರದಲ್ಲಿ ಮಿನುಗುತ್ತಿತ್ತು. ನಕ್ಷತ್ರಗಳಿಂದ ತುಂಬಿದ್ದ ಆಕಾಶ ನಿರ್ಜನವಾದ ನದೀತೀರವನ್ನಾವರಿಸಿ ನಿಂತಿತ್ತು. ಮುಂದೇನೆಂಬ ಅರಿವಿಲ್ಲದೆ ಕಮಲೆ ಮುಂದೆ ಮುಂದೆ ಸಾಗಿದಳು. ನದೀ ತೀರವನ್ನೇ ಅನುಸರಿಸಿ ನಡೆದುದರಿಂದ, ದಾರಿಕೇಳುವ ಆವಶ್ಯಕತೆ ತಪ್ಪಿದುದಲ್ಲದೆ, ತೊಂದರೆ ಸಿಕ್ಕಿದರೆಗೆ ಹಾರಿಕೊಳ್ಳಲು ಗಂಗಾ ಮಾತೆಯೂ ಹತ್ತಿರವಿದ್ದಂತಾಯಿತು.

ಕತ್ತಲಲ್ಲಿ ತೋಳಗಳು ಊಳಿಡಲಾರಂಭಿಸಿದುವು. ಮರಳು ಮುಗಿದು, ಗದ್ದೆಗಳು ಕಂಡು ಬಂದು ಒಂದು ಹಳ್ಳಿ ಸಿಕ್ಕಿತು. ಆದರೆ ಜನರೆಲ್ಲಾ ನಿದ್ರಿಸುತ್ತಿದ್ದರು. ಆ ವೇಳೆಗೆ ಬಹಳ ಆಯಾಸವಾಗಲು ಒಂದು ಆಲದ ಮರದ ಕೆಳಗೆ ಮೈಮರೆತು ನಿದ್ರೆಹೋದಳು.

ಬೆಳಗ್ಗೆ ಏಳುವ ಹೊತ್ತಿಗೆ ಒಬ್ಬ ವಯಸ್ಸಾದ ಹೆಂಗಸು ಅವಳನ್ನು ಪ್ರಶ್ನಿಸುತ್ತಿದ್ದಳು. "ನೀನು ಯಾರು? ಈ ಛಳಿಯಲ್ಲಿ ಇಲ್ಲೇಕೆ ಮಲಗಿರುವೆ?"

ಕಮಲೆ ಗಾಬರಿಯಿಂದ ಎದ್ದಳು. ನದಿಯ ದಡದಲ್ಲಿ ಎರಡು ದೋಣಿಗಳು ನಿಂತಿದ್ದುವು. ಪ್ರಯಾಣ ಮಾಡುತ್ತಿದ್ದ ಮುದುಕಿ ಸ್ನಾನಕ್ಕೆ ಇಳಿದಿದ್ದಳು.

"ನೀನು ಬಂಗಾಳಿಯಂತೆ ಕಾಣುತ್ತೀ."

ಕಮಲ—ಹೌದು. ನಾನು ಬಂಗಾಳಿ.

"ಇಲ್ಲೇಕೆ ಮಲಗಿದ್ದೀ?

"ಕಾಶಿಗಾಗಿ ಹೊರಟೆ. ರಾತ್ರಿ ನಿದ್ರೆ ಬಂದುದರಿಂದ ಇಲ್ಲಿ ಮಲಗಿದೆ."

"ಏನು ಮಾತು! ಕಾಶಿಗೆ ನಡೆಯಲಾದೀತೇ? ದೋಣಿ ಹತ್ತು. ನಾನೂ ಸ್ನಾನಮಾಡಿ ಬರುತ್ತೇನೆ."

ಮುದುಕಿ ಸ್ನಾನಮಾಡಿ ಕಮಲೆಯೊಡನೆ ಮಾತಿಗಾರಂಭಿಸಿದಳು. ಘಾಸಿಪುರದಲ್ಲಿ ಮದುವೆ ಮಾಡಿದ ಸಿಧುಬಾಬುವಿನ ಸಂಬಂಧಿಕರಲ್ಲಿ ಅವಳೊಬ್ಬಳು. ಅವಳ ಹೆಸರು ನವೀನ ಕಾಳಿ. ಆಕೆಯ ಗಂಡ ಮುಕುಂದ ಲಾಲದತ್ತ. ಅವರು ಕಾಯಸ್ಥ ಜಾತಿಯ ಬಂಗಾಳಿಗಳು. ಆದರೆ ಕಾಶಿಯಲ್ಲಿ ಕೆಲವು ಕಾಲದಿಂದ ವಾಸವಾಗಿದ್ದರು. ಮದುವೆಗಾಗಿ ಕರೆಯದಿದ್ದರೂ ಬಂದಿದ್ದರು. ಬಹಳದಿನ ನಿಲ್ಲಲು ಯಜಮಾನಿ ಸ್ಥಳಕೊಡಲಿಲ್ಲ. ಎಲ್ಲ ವನ್ನೂ ಹೇಳಿ, "ನಿನ್ನ ಹೆಸರೇನು?" ಎಂದಳು.

"ಕಮಲ."

ನವೀನಕಾಳಿ—ಕಬ್ಬಿಣದ ಬಳೆ ನೋಡಿದರೆ ನಿನ್ನ ಪತಿ ಜೀವಂತ ನಾಗಿದ್ದಾನೆಂದು ತೋರುತ್ತದೆ. ಅಲ್ಲವೆ?

ಕಮಲ—ಮದುವೆಯಾದ ಮಾರನೆಯ ದಿನ ಆತನು ಕಣ್ಮರೆ ಯಾದನು

ನವೀನ—ಅಯ್ಯೋ! ನೀನಿನ್ನೂ ಹುಡುಗಿ. ಹದಿನೈದು ವರ್ಷ ಗಳಿರಬಹುದಲ್ಲವೆ?

ಕಮಲ—ಇರಬಹುದು.

ನವೀನ—ನೀನು ಬ್ರಾಹ್ಮಣಿಯಲ್ಲವೆ?

"ಹೌದು."

"ನಿಮ್ಮವರೆಲ್ಲಾ ಇರುವುದೆಲ್ಲಿ?"

ಕಮಲ—ನನ್ನ ಗಂಡನ ಸ್ಥಳಕ್ಕೆ ನಾನು ಹೋಗಲೇ ಇಲ್ಲ. ನನ್ನ ತಂದೆ ಬಿಸುಕಾಳಿಯವರು.

ನವೀನ—ಆದರೆ ನಿನ್ನ ತಂದೆತಾಯಿಗಳು........

ಕಮಲ—ಇಬ್ಬರೂ ಸತ್ತುಹೋದರು.

ನವೀನ—ಅಯ್ಯೋ! ನೀನೇನು ಮಾಡುತ್ತೀ?

ಕಮಲ—ಎರಡು ಹೊತ್ತಿನ ಊಟ, ನಿಲ್ಲಲು ನೆರಳಾದರೆ ಸಾಕು. ಕಾಶಿಯಲ್ಲಿ ಯಾರ ಮನೆಯಲ್ಲಾದರೂ ಕೆಲಸಕ್ಕೆ ನಿಲ್ಲುತ್ತೇನೆ. ನನಗೆ ಅಡಿಗೆ ಮಾಡಲು ಬರುತ್ತೆ.

ನವೀನಕಾಳಿಗೆ ಇಂತಹ ಕೆಲಸದವಳು ಬಿಟ್ಟಿಯಾಗಿ ಸಿಕ್ಕುವುದು ಸಂತೋಷವನ್ನೇ ಉಂಟುಮಾಡಿತು. ಆದರೆ ಅದನ್ನು ತೋರಗೊಡಲಿಲ್ಲ.

"ನಮಗೆ ಕೆಲಸದವರೇನೂ ಬೇಕಾಗಿಲ್ಲ. ನೀರು ಯಾರೆಂಬುದೂ ತಿಳಿಯದು. ನನ್ನ ಗಂಡನಿಗೆ ಊಟ ಅಚ್ಚುಕಟ್ಟಾಗಿರಬೇಕು. ಹದಿನಾಲ್ಕು ರೂಪಾಯಿ ಕೊಟ್ಟರೂ ಒಳ್ಳೆ ಅಡುಗೆಯವನು ಸಿಕ್ಕುವುದಿಲ್ಲ. ಏನೋ, ನೀನೂ ಕಷ್ಟದಲ್ಲಿದ್ದೀಯೆ. ನಮ್ಮೊಡನೆ ಬಾ. ಅಷ್ಟು ಜನ ಉಣ್ಣುವ ಕಡೆ ನಿನ್ನ ಊಟ ಭಾರವೆನ್ನಿಸಲಾರದು. ಕೆಲಸವೂ ಕಷ್ಟವಿಲ್ಲ. ಮನೆಯಲ್ಲಿ ನಾನು, ನನ್ನ ಗಂಡ, ಹೆಣ್ಣು ಮಕ್ಕಳಿಗೆಲ್ಲಾ ಮದುವೆಯಾಗಿದೆ. ಒಬ್ಬನೇ ಮಗ. ಅವನು ಸಿರಾಜ್‌ಗಂಜಿನಲ್ಲಿ ಮೇಜಿಸ್ಟ್ರೇಟ್ ಆಗಿದ್ದಾನೆ. ಎರಡು ತಿಂಗಳ ಕೆಳಗೆ ಅವನಿಗೆ ಕೆಲಸವಾಯಿತು. ಮನೆ ಬಿಟ್ಟು ಅವನು ಅಷ್ಟುದೂರ ಹೋದುದು ನನಗೆ ಸಮಾಧಾನವಿಲ್ಲ. ಆದರೆ ಹುಡುಗರಿಗೆ ಯಾವುದಾದರೂ ಒಂದು ಕೆಲಸವಿರಬೇಕು. ಇಲ್ಲದಿದ್ದರೆ ಕೆಟ್ಟು ಹೋಗುತ್ತಾರೆ "

ದೋಣಿಗಳು ಜಾಗ್ರತೆ ಸಾಗಿ ಕಾಶಿಯನ್ನು ಕೆಲವು ಗಂಟೆಗಳಲ್ಲಿ ತಲಪಿದವು. ಊರಿನ ಹೊರಗೆ ಸಣ್ಣ ತೋಟದಲ್ಲಿದ್ದ ಎರಡಂತಸ್ತಿನ ಮನೆಯನ್ನು ಎಲ್ಲರೂ ತಲುಪಿದರು. ಅಲ್ಲಿ ಅಡುಗೆಯವನು ಕಾಣಿಸಲಿಲ್ಲ. ಇದ್ದ ಒಬ್ಬ ಬ್ರಾಹ್ಮಣ ಹುಡುಗನೊಡನೆ ನವೀನಕಾಳಿ ಏತಕ್ಕೋ ಜಗಳವಾಡಿ ಸಂಬಳವನ್ನೂ ಕೊಡದೆ ಓಡಿಸಿಬಿಟ್ಟಳು. ಕಮಲೆಯೇ ಅಡಿಗೆ ಮನೆಯ ಕೆಲಸವನ್ನೆಲ್ಲಾ ವಹಿಸಿಕೊಳ್ಳಬೇಕಾಯಿತು. ನವೀನಕಾಳಿ, "ಕಾಶಿ ಕೆಟ್ಟ ಸ್ಥಳ. ಮನೆ ಬಿಟ್ಟು ಹೊರಗೆ ಹೋಗಬೇಡ. ನಾನು ಸ್ನಾನಕ್ಕಾಗಲಿ ಗುಡಿಗಾಗಲಿ ಹೋದಾಗ ನಿನ್ನನ್ನೂ ಕರೆದುಕೊಂಡು ಹೋಗುತ್ತೇನೆ" ಎಂದು ಬುದ್ಧಿವಾದವನ್ನು ಹೇಳುತ್ತಿದ್ದಳು. ಕಮಲೆ ತಪ್ಪಿಸಿಕೊಂಡು ಹೋಗದ ಹಾಗೆ ಜಾಗ್ರತೆಯಾಗಿದ್ದಳು. ದಿನವೆಲ್ಲಾ ಕೆಲಸ ಮಾಡಿಸಿ ಸಾಯಂಕಾಲ ತನ್ನ ಐಶ್ವರ್ಯವನ್ನು ಅವಳಿಗೆ ವರ್ಣಿಸಿ ಹೇಳುತ್ತಿದ್ದಳು.

"ನಮ್ಮ ಯಜಮಾನರಿಗೆ ಹಿತ್ತಾಳೆ ಪಾತ್ರೆಗಳೇ ಅಭ್ಯಾಸವಿಲ್ಲ. ಬೆಳ್ಳಿಯವು ಕಳೆದು ಹೋದರೆ ಬೇರೆ ತರೋಣವೆನ್ನುತ್ತಾರೆ. ಆದರೆ ನನಗೆ ಹಾಗೆ ಹಾಳು ಮಾಡಲು ಇಷ್ಟವಿಲ್ಲ. ಅಲ್ಲಿ ದೊಡ್ಡ ಮನೆ, ಆಳುಗಳು, ಎಲ್ಲಾ ಇದ್ದಾರೆ. ಇಲ್ಲಿ ಅಷ್ಟು ಜನರನ್ನು ಕರೆತರುವುದು ಸಾಧ್ಯವಿಲ್ಲ". ಹೀಗೆ ಕಮಲೆಗೆ ಬೇಸರ ವಾಗುವವರೆಗೂ ಹೇಳುತ್ತಿದ್ದಳು.

## ಅಧ್ಯಾಯ ೫೨

ನವೀನಕಾಳಿಯ ಮನೆಯಲ್ಲಿ ಕಮಲೆ ಕೊಚ್ಚೆ ಮಡುವಿನಲ್ಲಿರುವ ಮೀನಿನಂತಿದ್ದಳು. ತಪ್ಪಿಸಿಕೊಳ್ಳುವುದೊಂದೇ ಉಪಾಯವಾಗಿತ್ತು. ಆದರೆ ತಪ್ಪಿಸಿಕೊಂಡು ಹೋಗುವುದೆಲ್ಲಿಗೆ ? ರಾತ್ರಿ ಎಷ್ಟು ಭಯಂಕರ ವಾದುದೆಂದು ಕಮಲೆ ಅನುಭವದಿಂದ ಅರಿತಿದ್ದಳು.

ಕಮಲೆಯನ್ನು ಕಂಡರೆ ನವೀನಕಾಳಿಗೂ ಒಂದು ವಿಧವಾದ ವಿಶ್ವಾಸವಿತ್ತು. ಆದರೆ ಕಮಲೆಯ ಕೃತಜ್ಞತೆಯನ್ನು ಅವಳು ಸಂಪಾದಿ ಸಲಿಲ್ಲ. ನವೀನಕಾಳಿಯೊಡನೆ ಮಾತನಾಡಬೇಕಾಗಿದ್ದ ಕಾಲಕ್ಕಿಂತ ಕೆಲಸ ಮಾಡುತ್ತಿದ್ದ ಕಾಲವೇ ಅವಳಿಗೆ ಸುಖವಾಗಿ ತೋರಿತು

ಒಂದು ದಿನ ಕಮಲೆಯನ್ನು ಕರೆದು ನವೀನಕಾಳಿ," ಈ ದಿನ ನನ್ನ ಗಂಡನಿಗೆ ಮೈ ಸ್ವಸ್ಥವಾಗಿಲ್ಲ. ಊಟಕ್ಕೆ ಪೂರಿ ಮಾಡು. ತುಂಬಾ ತುಪ್ಪ ಉಪಯೋಗಿಸುತ್ತೀ. ಮೊದಲಿದ್ದ ಬ್ರಾಹ್ಮಣ ಇಷ್ಟು ತುಪ್ಪ ಉಪಯೋಗಿಸುತ್ತಿರಲಿ" ಎಂದಳು ಕಮಲೆ ಎಂದೂ ಮರುಮಾತನಾಡು ತ್ತಿರಲಿಲ್ಲ. ಕೇಳಿಸದಂತೆ ಇದ್ದುಬಿಡುತ್ತಿದ್ದಳು. ಈ ದಿನ ಮಾತ್ರ ತುಂಬಾ ಅಸಮಾಧಾನವಾಗಿ ಪ್ರಪಂಚದಲ್ಲಿ ಸುಖವೇ ಇಲ್ಲವೆಂದು ಕೊಂಡಳು. ನವೀನಕಾಳಿ ಆಳನ್ನು ಕರೆದು, "ತುಳಸೀ, ಪೇಟೆಗೆ ಓಡಿ ಹೋಗಿ ಡಾಕ್ಟರ್ ನಳಿನಾಕ್ಷನನ್ನು ಕರೆದುಕೊಂಡು ಬಾ, ಯಜಮಾನ ರಿಗೆ ಸ್ವಸ್ಥವಿಲ್ಲವೆಂದು ಹೇಳು."

ಡಾಕ್ಟರ್ ನಳಿನಾಕ್ಷ! ಕಮಲೆಯ ಕಣ್ಣಿಗೆ ಸೂರ್ಯರಶ್ಮಿಗಳು ಅದೃಶ್ಯವಾದ ಬೆರಳುಗಳಿಂದ ಮೀಟಲ್ಪಡುತ್ತಿರುವ ವೀಣೆ ತಂತಿಗಳ ಹಾಗೆ

ನರ್ತಿಸುತ್ತಿರುವಂತೆ ತೋರಿತು. ತರಕಾರಿಯನ್ನು ಅಲ್ಲಿಯೇ ಹಾಕಿ ತುಳಸಿಯನ್ನು ಸಂಧಿಸಲು ಬಾಗಿಲ ಬಳಿ ನಿಂತಳು. ಅವನು ಬರುತ್ತಲೇ "ಎಲ್ಲಿಗೆ?" ಎಂದು ವಿಚಾರಿಸಿದಳು.

"ಡಾಕ್ಟರ್ ನಳಿನಾಕ್ಷರನ್ನು ಕರೆತರಲು ಹೋಗುತ್ತಿದ್ದೇನೆ."

"ಆತನು ಯಾರು ?"

"ಈ ಊರಿಗೆಲ್ಲಾ ಒಳ್ಳೆಯ ಡಾಕ್ಟರು."

"ಆತನು ಎಲ್ಲಿದ್ದಾರೆ?"

"ಒಂದು ಮೈಲಿ ದೂರ. ಪೇಟೆಯಲ್ಲಿ."

ಎಲ್ಲರ ಊಟವಾದ ಮೇಲೆ ಮಿಕ್ಕುದನ್ನು ಕಮಲೆ ಆಳುಗಳಿಗೆ ಕೊಡುತ್ತಿದ್ದಳು. ನವೀನಕಾಳಿ ಬಯ್ದರೂ ಈ ಪದ್ಧತಿ ಅವಳು ಬಿಟ್ಟಿರಲಿಲ್ಲ. ಇದರಿಂದ ಆಳುಗಳಿಗೆಲ್ಲಾ ಅವಳಲ್ಲಿ ಪ್ರೀತಿಯಿದ್ದಿತ್ತು.

"ಅಲ್ಲೇನು ಹರಟುತ್ತಿದ್ದೀ, ತುಳಸೀ ? ನಾನು ನೋಡುತ್ತಿಲ್ಲವೆಂದು ತಿಳಿದಿದ್ದೀಯೆ. ಅಡಿಗೆಯವಳೊಡನೆ ಮಾತನಾಡದಿದ್ದರೆ ಆಗುವುದಿಲ್ಲವೋ? ಮನೆಯ ಸಾಮಾನು ಮಾಯವಾಗುತ್ತಿರುವುದು ಇದರಿಂದಲೇ! ಬೀದಿಯಲ್ಲಿ ಬಿದ್ದಿದ್ದವಳಿಗೆ ಅನ್ನ ಬಟ್ಟೆಕೊಟ್ಟು ಸಲಹಿದುದಕ್ಕೆ ಒಳ್ಳೆಯ ಪ್ರತಿಫಲ." ಎಂದು ನವೀನಕಾಳಿ ಕೂಗಿಕೊಂಡಳು. ಎಲ್ಲರೂ ತನ್ನ ಒಡವೆ ಕದಿಯುವ ಪ್ರಯತ್ನದಲ್ಲಿದ್ದಾರೆಂದು ನವೀನಕಾಳಿಯ ಅನುಮಾನ. ತಾನು ಯಾವಾಗಲೂ ಎಚ್ಚರಿಕೆಯಾಗಿರುವೆನೆಂದು ಎಲ್ಲರಿಗೂ ತಿಳಿಯಪಡಿಸುತ್ತಿದ್ದಳು.

ಈ ದಿನ ಮಾತ್ರ ಆಕೆಯ ಮಾತು ಕಮಲೆಯ ಕಿವಿಗೆ ಬೀಳಲೇ ಇಲ್ಲ. ಅವಳ ಮನಸ್ಸು ಆಗಸದಲ್ಲಿ ನಲಿದಾಡುತ್ತಿತ್ತು. ತುಳಸಿ ಬರುವುದನ್ನೇ ಕಾಯುತ್ತಿದ್ದಳು. "ಡಾಕ್ಟರು ಬಂದರೇ, ತುಳಸೀ?"

ತುಳಸಿ—ಇಲ್ಲ.

ಕಮಲ—ಏಕೆ ?

ತುಳಸಿ—ಅವರ ತಾಯಿಗೆ ಕಾಯಿಲೆ.

ಕಮಲ—ಅವರ ತಾಯಿ! ಆಕೆಯನ್ನು ನೋಡಿಕೊಳ್ಳಲು ಬೇರೆ ಯಾರೂ ಇಲ್ಲವೆ?

ತುಳಸಿ—ಇಲ್ಲ. ಆತನಿಗೆ ಮದುವೆಯಾಗಿಲ್ಲ.

ಕಮಲ—ನಿನಗೆ ಹೇಗೆ ಗೊತ್ತು?

ತುಳಸಿ—ಆಳುಗಳು ಹೇಳಿದರು.

ಕಮಲ—ಆತನ ಹೆಂಡತಿ ಸತ್ತುಹೋಗಿರಬಹುದು.

ತುಳಸಿ—ಇರಬಹುದು. ಅವರ ಆಳು ರಂಗಪುರದಲ್ಲಿದ್ದಾಗಲೂ ಆತನಿಗೆ ಹೆಂಡತಿಯಿರಲಿಲ್ಲವೆಂದು ಹೇಳಿದ.

"ತುಳಸೀ" ಎಂದು ನವೀನಕಾಳಿ ಕೂಗಲು ಕಮಲೆ ಅಡುಗೆ ಮನೆಯೊಳಗೆ ಹೋದಳು.

ನಳಿನಾಕ್ಷ! ರಂಗಪುರದಲ್ಲಿದ್ದಾತ! ಕಮಲೆಗೆ ಅನುಮಾನ ಉಳಿಯಲಿಲ್ಲ. ತುಳಸಿಯನ್ನು ಪುನಃ ಕಂಡಾಗ "ತುಳಸೀ, ಡಾಕ್ಟರಿನ ಹೆಸರಿನ ಬಂಧು ನನಗೊಬ್ಬನಿದ್ದಾನೆ. ಆತನು ಬ್ರಾಹ್ಮಣ ತಾನೆ" ಎಂದಳು.

"ಹೌದು. ಆತನು ಬ್ರಾಹ್ಮಣ, ಚಟರ್ಜಿ."

ತುಳಸಿಗೆ ಯಜಮಾನಿಯ ಹೆದರಿಕೆ. ಹೊರಟು ಹೋದನು.

ಕಮಲೆ ನವೀನಕಾಳಿಯ ಬಳಿಗೆ ಹೋಗಿ, ತನ್ನ ಕೆಲಸವೆಲ್ಲಾ ಮುಗಿಯಿತೆಂದೂ ದಶಾಶ್ವಮೇಧಘಾಟಿನಲ್ಲಿ ಸ್ನಾನಮಾಡಿ ಬರಲು ಅನುಮತಿ ಕೊಡಬೇಕೆಂದೂ ಕೇಳಿದಳು.

ನವೀನ—ಅದಾಗುವುದಿಲ್ಲ. ಯಜಮಾನರಿಗೆ ಖಾಯಿಲೆ. ಏನು ಬೇಕಾಗುವುದೋ! ಈ ದಿನವೇ ಏಕೆ ಹೋಗಬೇಕು?

ಕಮಲ—ಕಾಶಿಯಲ್ಲಿ ನನ್ನ ಬಂಧುಗಳೊಬ್ಬರಿದ್ದಾರೆ. ಅವರನ್ನು ನೋಡಿ ಬರಬೇಕು.

ನವೀನ—ಯಾರು ಹೇಳಿದರು? ತುಳಸಿಯೋ! ಅವನನ್ನು ಓಡಿಸಬೇಕು. ನನ್ನ ಮನೆಯಲ್ಲಿರುವವರಿಗೂ ಹಾಗೆಲ್ಲಾ ಅಲೆಯಲು ಹೋಗಕೂಡದು."

ತುಳಸಿಯನ್ನು ಕೆಲಸದಿಂದ ಓಡಿಸಿ ಬೇರೆ ಆಳುಗಳು ಕಮಲೆಯೊಡನೆ ಮಾತನಾಡಕೂಡದೆಂದು ನವೀನಕಾಳಿ ಅಪ್ಪಣೆಮಾಡಿದಳು

ನಳಿನಾಕ್ಷನ ಸುದ್ದಿ ತಿಳಿಯುವವರೆಗೂ ಕಮಲೆ ತಾಳ್ಮೆಯಿಂದಿದ್ದಳು. ಆತನು ಆ ಊರಿನಲ್ಲಿರುವನೆಂದು ತಿಳಿದಾಗಿನಿಂದ ಆತನ ಬಳಿಗೆ ಹೋಗಲು

ಅವಳ ಹೃದಯ ಹಾತೊರೆಯತೊಡಗಿತು. ಕೆಲಸದಲ್ಲಿ ಲಕ್ಷ್ಯ ಕಡಮೆಯಾಯಿತು. ನವೀನ ಕಾಳಿ, "ನೀನು ಮಾಡುತ್ತಿರುವುದು ಸರಿಯಾಗಿಲ್ಲ. ಅಡಿಗೆ ಬಾಯಲ್ಲಿಡುವುದಕ್ಕಾಗುವುದಿಲ್ಲ" ಎಂದಳು.

ಕಮಲ—ನನ್ನ ಕೈಲಿ ಕೆಲಸವಾಗುವುದಿಲ್ಲ. ಬಿಟ್ಟು ಬಿಡಿ.

ನವೀನ—ಈ ಕಾಲದಲ್ಲಿ ಉಪಕಾರ ಮಾಡಬಾರದು. ನಿನಗೋಸ್ಕರ ನಮ್ಮ ಅಡಿಗೆಯವನನ್ನು ಓಡಿಸಿದ್ದಾಯಿತು. ನೀನು 'ಹೋಗುತ್ತೇನೆ' ಎಂದರೆ ಕಳುಹಿಸುವುದಕ್ಕಾಗುತ್ತದೆಯೇ? ಪೋಲೀಸಿನವರಿಗೆ ಹೇಳುತ್ತೇನೆ. ನಮ್ಮ ಮನೆಯಲ್ಲಿದ್ದ ಗಧಾನ ವಿಚಾರ ಕೇಳಿದ್ದೀಯೋ, ಇಲ್ಲವೋ? ನಮ್ಮ ಹತ್ತಿರ ಈ ಆಟ ನಡೆಯುವುದಿಲ್ಲ."

ಗಧಾನ ಕಥೆ ಸುಳ್ಳಾಗಿರಲಿಲ್ಲ. ಒಂದು ಗಡಿಯಾರ ಕದ್ದನೆಂಬ ತಪ್ಪು ಹೊರಿಸಿ ಸೆರೆಮನೆಗೆ ಹಾಕಿಸಿದ್ದರು.

ಏನು ಮಾಡಬೇಕೆಂದು ಕಮಲೆಗೆ ತೋರಲಿಲ್ಲ. ಜೀವನ ಸೌಖ್ಯ ಎಟಕುವಷ್ಟು ಹತ್ತಿರವಿರುವಾಗ ಕೈಗಳು ಬಂಧಿತವಾಗಿದ್ದುವು. ವಿಧಿಯ ಆಟ ಕ್ರೂರವಾಗಿತ್ತು. ಆ ನಾಲ್ಕು ಗೋಡೆಗಳ ಮಧ್ಯದ ಸೆರೆ ಸಹಿಸಲ ಸಾಧ್ಯವಾಗಿತ್ತು. ಸಾಯಂಕಾಲ ತೋಟದಲ್ಲಿ ತಿರುಗಾಡಲಾರಂಭಿಸಿದಳು. ಗೋಡೆಯ ಬಳಿ ನಿಂತು ಊರಿಗೆ ಹೋಗುವ ರಸ್ತೆಯನ್ನೇ ನೋಡುವಳು. ಕಾಣದ ಮನೆಯನ್ನು ಹೃದಯ ಹುಡುಕುವುದು. ಅಲುಗಾಡದೆ ಎಷ್ಟು ಹೊತ್ತಾದರೂ ನಿಂತಿರುವಳು.

ಆದರೆ ಈ ಸ್ವಾತಂತ್ರ್ಯವೂ ತಪ್ಪಿತು. ಒಂದು ಸಂಜೆ ನವೀನ ಕಾಳಿ ಹೇಳಿ ಕಳುಹಿಸಿದಾಗ ಅವಳಿಲ್ಲವೆಂದು ಆಳು ಬಂದು ಹೇಳಿದನು. "ಓಡಿ ಹೋದಳೆ?" ಎಂದು ತಾನೇ ಮನೆಯೆಲ್ಲಾ ಹುಡುಕಿದಳು. ಸಿಕ್ಕದಿರಲು ಹುಕ್ಕಾ ಸೇವಿಸುತ್ತಿದ್ದ ಮುಕುಂದ ಬಾಬುವಿನ ಬಳಿಗೆ ಹೋಗಿ ಕಮಲೆ ಓಡಿ ಹೋದಳೆಂದು ತಿಳಿಸಿದಳು.

ಮುಕುಂದ—ಏನಾದರೂ ಕದ್ದುಕೊಂಡು ಹೋದಳೆ?

ನವೀನ—ಏನೇನು ಹೋಗಿದೆಯೋ! ನಾನು ಕೊಟ್ಟಿದ್ದ ಹೊದಿಕೆಯೇನೋ ಇಲ್ಲ.

ಮುಕುಂದ—ಪೋಲೀಸಿಗೆ ತಿಳಿಸು.

ಒಬ್ಬ ಆಳು ಓಡಿದನು. ಕಮಲೆ ಆಗ ತನ್ನ ಕೋಣೆಗೆ ಹೋಗಲು ನವೀನ ಕಾಳಿ ಏನಾದರೂ ಕಳುವಾಗಿದೆಯೇನೊ ಎಂದು ಅಲ್ಲಿ ಶೋಧಿಸುತ್ತಿದ್ದಳು.

"ಎಲ್ಲಿ ಹೋಗಿದ್ದೆ?"

"ತೋಟದಲ್ಲಿ ತಿರುಗಾಡುತ್ತಿದ್ದೆ."

ನವೀನ ಕಾಳಿ ಬಯ್ಯಲಾರಂಭಿಸಿದಳು. ಕೇಳಲು ಆಳುಗಳೆಲ್ಲಾ ನೇರಿದರು. ಆಕೆ ಎಷ್ಟು ಬಯ್ದರೂ ಕಮಲೆ ಕಣ್ಣಲ್ಲಿ ನೀರು ತರದೆ ಸುಮ್ಮನೆ ನಿಂತಿದ್ದಳು. ಬಯ್ಗಳ ಸುರಿಮಳೆ ನಿಂತ ಮೇಲೆ, "ನಿಮಗೆ ನನ್ನ ಕೆಲಸ ತೃಪ್ತಿಯಾಗಿಲ್ಲ, ಕಳಿಸಿಬಿಡಿ," ಎಂದಳು.

"ಕಳಿಸುತ್ತೇನೆ. ಆದರೆ ಬುದ್ಧಿ ಬರುವಂತೆ ಮಾಡಿ ಕಳಿಸುತ್ತೇನೆ." ಆ ದಿನದಿಂದ ಕಮಲೆ ಕೋಣೆಯನ್ನು ಬಿಟ್ಟು ಹೋಗಲಿಲ್ಲ. ತನ್ನ ದುಃಖ ಮೇರೆ ಮೀರಿತೆಂದೂ ದೇವರಿಗೆ ಕರುಣೆ ಬರಬಹುದೆಂದೂ ನಂಬಿದಳು.

ಮಾರನೆಯ ಸಾಯಂಕಾಲ ಮುಕುಂದಬಾಬು ಇಬ್ಬರು ಆಳುಗಳೊಡನೆ ಗಾಡಿಯಲ್ಲಿ ಹೊರಟನು. ಕತ್ತಲಾಗುತ್ತಿದ್ದಾಗ ಹೊರಗೆ ಯಾರೋ "ಯಜಮಾನರಿದ್ದಾರೆಯೇ?" ಎಂದು ಕೂಗಿದರು.

ನವೀನಕಾಳಿ ತಟ್ಟನೆದ್ದು, "ಡಾಕ್ಟರ್ ನಳಿನಾಕ್ಷ ಬಂದರು; ಬುಡಿಯಾ, ಬುಡಿಯ" ಎಂದು ಕೂಗಿದಳು. ಅವನು ಬರದಿರಲು ಕಮಲೆಯನ್ನು ನೋಡಿ "ಹೋಗಿ ಬಾಗಿಲು ತೆಗೆ. ಯಜಮಾನರು ಹೊರಗೆ ಹೋಗಿರುವರೆಂದೂ, ಬೇಗನೆ ಬರುವರೆಂದೂ ಡಾಕ್ಟರಿಗೆ ಹೇಳು. ಸ್ವಲ್ಪ ಕುಳಿತಿರಬೇಕೆಂದು ಹೇಳು," ಎಂದಳು. ಕಮಲೆ ದೀಪವನ್ನು ತೆಗೆದುಕೊಂಡು ಹೋದಳು. ಕಾಲುಗಳು ನಡುಗುತ್ತಿದ್ದುವು; ಹೃದಯ ಬಡಿದುಕೊಳ್ಳುತ್ತಿತ್ತು; ಕೈಗಳು ತಣ್ಣಗಾಗಿ ಬೆವತಿದ್ದುವು. ಅಗಣಿಯನ್ನೆಳೆದು, ಬಾಗಿಲನ್ನು ತೆಗೆದು, ನಳಿನಾಕ್ಷನ ಎದುರಿನಲ್ಲಿ ನಿಂತಳು.

"ಮುಕುಂದಬಾಬು ಇದ್ದಾರೆಯೆ ?"

"ಇಲ್ಲ. ದಯವಿಟ್ಟು ಒಳಗೆ ಬನ್ನಿ."

ನಳಿನಾಕ್ಷ ಒಳಗೆ ಬಂದು, ಒಂದು ಕುರ್ಚಿಯ ಮೇಲೆ ಕುಳಿತನು. ಅಷ್ಟು ಹೊತ್ತಿಗೆ ಬುಡಿಯ ಬಂದು ಸ್ವಲ್ಪ ಕಾದಿರಬೇಕೆಂದು ತಿಳಿಸಿದನು.

ಕಮಲೆಗೆ ಉಸಿರಾಡುವುದೇ ಕಷ್ಟವಾಗಿತ್ತು. ಪಡಸಾಲೆಯಲ್ಲಿ ನಳಿನಾಕ್ಷ ಕಾಣುವ ಕಡೆ ಕುಳಿತಳು. ಕಾಲಿನಿಂದ ತಲೆಯವರೆಗೆ ನಡುಕ ಹುಟ್ಟಿತ್ತು. ನಳಿನಾಕ್ಷ ದೀಪದ ಬೆಳಕಿನಲ್ಲಿ ಕುಳಿತಿರಲು ಕಮಲೆ ಜೀವವನ್ನೆಲ್ಲಾ ದೃಷ್ಟಿಯಲ್ಲಿ ಹುದುಗಿಸಿ ಆತನನ್ನು ನೋಡುತ್ತಿದ್ದಳು. ಅದನ್ನು ಬಿಟ್ಟರೆ ಜಗತ್ತಿನಲ್ಲಿ ಬೇರೆ ಏನೂ ಇಲ್ಲವೆಂದು ತೋರಿ ಆತನ ಮುಖ ಚಹರೆಯನ್ನು ಹೃದಯದಲ್ಲಿ ಒತ್ತಿ ಹಿಡಿದಳು.

ನಳಿನಾಕ್ಷ ಎದ್ದು ಮುಕುಂದ ಬಾಬುವಿನೊಡನೆ ಮಾತನಾಡುತ್ತಿದ್ದನು. ಅವರು ಪಡಸಾಲೆಗೆ ಬರಬಹುದೆಂದು ಹೆದರಿ ಕಮಲೆ ಅಡಿಗೆ ಮನೆಯೊಳಕ್ಕೆ ಹೋದಳು. ಅಲ್ಲಿ ಬೀದಿ ಕಾಣುವ ಕಡೆ ನಿಂತಳು. ಅಂತಹ ಮನುಷ್ಯನನ್ನು ಪತಿಯಾಗಿ ಪಡೆಯಲು ತಾನು ಮಾಡಿದ್ದ ಪುಣ್ಯವೇನು? ತಾನು ಪಟ್ಟ ಕಷ್ಟ ವ್ಯರ್ಥವಲ್ಲವೆಂದು ದೇವರಿಗೆ ಮಣಿದಳು.

ಬುಡಿಯನು ದೀಪಹಿಡಿದು ನಳಿನಾಕ್ಷನಿಗೆ ದಾರಿತೋರಿಸುತ್ತಿದ್ದನು. ಕಮಲೆ, "ದೇವಾ, ನಿನ್ನ ದಾಸಿ ಇಲ್ಲಿರುವಳೆಂದು ಅರಿಯದೆ ಹೋಗುತ್ತಿರುವೆಯಾ?" ಎಂದು ಕೊಂಡಳು.

ಮುಕುಂದಬಾಬು ಊಟಕ್ಕೆ ಎದ್ದು ಹೋಗಲು, ಕಮಲೆ ನಳಿನಾಕ್ಷ ಕುಳಿತಿದ್ದ ಕುರ್ಚಿಗೆ ನಮಸ್ಕರಿಸಿ, "ಆತನ ಸೇವೆ ಮಾಡುವ ಭಾಗ್ಯವಿಲ್ಲವಲ್ಲಾ" ಎಂದು ಕೊಂಡಳು.

ಮಾರನೆಯದಿನ ಮುಕುಂದಬಾಬು ಡಾಕ್ಟರ ನಿರ್ದೇಶದಂತೆ ಕಾಶಿ ಬಿಟ್ಟು ಬೇರೆ ಸ್ಥಳದಲ್ಲಿ ಇರಬೇಕೆಂದು ಕಮಲೆಗೆ ತಿಳಿಯಿತು. ಪ್ರಯಾಣದ ಏರ್ಪಾಟುಗಳನ್ನು ನೋಡಿ ಯಜಮಾನಿಯೊಡನೆ, "ನಾನು ಕಾಶಿ ಬಿಟ್ಟು ಬರಲಾಗುವುದಿಲ್ಲ," ಎಂದಳು.

ನವೀನ—ಏನಷ್ಟು ಭಕ್ತಿ!

ಕಮಲೆ—ನಾನು ಬರುವುದಿಲ್ಲ.

ನವೀನ—ನೋಡೋಣ!

ಕಮಲ—ಬೇಡುತ್ತೇನೆ, ಬಿಟ್ಟುಬಿಡಿ.

ನವೀನ—ಎಲ್ಲಾ ಸಿದ್ಧವಾಗಿರುವಾಗ ಏನೋ ಗಲಾಟೆ ಮಾಡುತ್ತೀ.

ಈಗ ಬೇರೆ ಅಡಿಗೆಯವನನ್ನು ಎಲ್ಲಿ ತರಲಿ?

ಕಮಲೆಯ ಬೇಡಿಕೆ ವ್ಯರ್ಥವಾಯಿತು. ತನ್ನ ಕೋಣೆಯಲ್ಲಿ ಕುಳಿತು ಅಳುತ್ತಾ ದೇವಸಿಗೆ ಮೊರೆಯಿಟ್ಟಳು.

## ಅಧ್ಯಾಯ ೫೩

ಮಗಳೊಡನೆ ಮಾತನಾಡಿದ ಎರಡನೆಯ ರಾತ್ರಿ ಆನಂದಬಾಬುವಿಗೆ ಪುನಃ ಎದೆಯ ನೋವು ಕಾಣಿಸಿಕೊಂಡಿತು. ರಾತ್ರಿಯೆಲ್ಲಾ ನರಳಿ, ಬೆಳಗ್ಗೆ ನೋವು ಕಡಮೆಯಾಗಲು ತೋಟದಲ್ಲಿ ಕುರ್ಚಿಯ ಮೇಲೆ ಕುಳಿತನು. ನರಳುವಿಕೆಯಿಂದ ಮುಖ ಸೋತು ಒಂದೇ ರಾತ್ರಿಯಲ್ಲಿ ಅನೇಕ ವರ್ಷ ಮುದಿಯಾದಂತೆ ಕಾಣಿಸಿದನು. ತಂದೆಯನ್ನು ನೋಡಿ ದಾಗಲೆಲ್ಲಾ ಹೇಮನಳಿನಿಗೆ ಮನಸ್ಸು ನೋಯುತ್ತಿದ್ದಿತು. ತನ್ನ ಚಿಂತೆ ಯಿಂದ ತಂದೆಗೆ ನೋವು ಮರುಕಳಿಸಿತೆಂದು ಅವಳಿಗೆ ತೋರಿತು. ಆದರೆ ಆ ಚಿಂತೆಯನ್ನು ಶಮನ ಮಾಡುವ ದಾರಿ ಕಾಣಲಿಲ್ಲ.

ಅಕ್ಷಯ ಮಾವನೊಡನೆ ಬಂದುದನ್ನು ನೋಡಿ ಎದ್ದಳು. ಅಕ್ಷಯ, "ಹೋಗಬೇಡಿ, ಇವರು ಮುಖ್ಯವಾದ ವಿಚಾರ ತಿಳಿಸಲು ಬಂದಿದ್ದಾರೆ." ಎಂದನು.

ಇಬ್ಬರೂ ಆನಂದಬಾಬುವಿನ ಬಳಿ ಕುಳಿತರು. ಮಾವ, "ನೀವು ರಮೇಶಬಾಬುವಿನ ಸ್ನೇಹಿತರೆಂದು ತಿಳಿಯಿತು. ಆತನ ಹೆಂಡತಿಯ ಸಮಾಚಾರವೇನಾದರೂ ತಿಳಿಯಿತೇನೋ ಕೇಳಲು ಬಂದೆ."

ಆನಂದಬಾಬು, "ರಮೇಶನ ಹೆಂಡತಿ! " ಎಂದನು.

ಹೇಮನಳಿನಿ ತಲೆ ತಗ್ಗಿಸಿದಳು. ಚಕ್ರವರ್ತಿ, "ನನ್ನನ್ನು ತಲೆ ಹರಟೆಯವನೆಂದು ನೀವು ತಿಳಿದಿರಬಹುದು. ಹರಟಲು ಘಾಸಿಪುರದಿಂದ ನಾನು ಬರಲಿಲ್ಲ. ರಮೇಶಬಾಬುವನ್ನು ಪೂಜಾರಜೆಯಲ್ಲಿ ಕಂಡೆನು. ದೋಣಿಯಲ್ಲಿ ಗುರುತಾಯಿತು. ಕಮಲೆಯನ್ನು ನೋಡಿದರೆ ಆಕರ್ಷಿ ಸಲ್ಪಡದವನು ಇರಲಾರನೆಂದು ನಿಮಗೂ ತಿಳಿದಿರಬಹುದು. ನಾನು ಮುದುಕ, ಒರಟ. ಆದರೆ ಆ ಹುಡುಗಿಯನ್ನು ಮರೆಯಲಾರೆ. ರಮೇಶ

ಬಾಬು ಎಲ್ಲಿಗೆ ಹೋಗಬೇಕೆಂದು ನಿರ್ಧರಿಸಿರಲಿಲ್ಲ. ಕಮಲೆ ನನ್ನಲ್ಲಿರುವ ವಿಶ್ವಾಸದಿಂದ ಘಾಸಿಪುರದಲ್ಲಿ ಇಳಿಯುವಂತೆ ಒಪ್ಪಿಸಿದಳು. ನಮ್ಮ ಮನೆಯಲ್ಲಿದ್ದರು. ನನ್ನ ಎರಡನೆಯ ಮಗಳು ಅವಳನ್ನು ತಂಗಿಯಂತೆ ಪ್ರೀತಿಸುತ್ತಿದ್ದಳು. ಅನಂತರ ನಡೆದುದನ್ನು ಹೇಳುವುದೇ ಕಷ್ಟ. ನಮ್ಮನ್ನೆಲ್ಲಾ ಬಿಟ್ಟು ಅವಳೇಕೆ ಹೋದಳೋ ತಿಳಿಯದು. ಶೈಲೆಯನ್ನು ಸಮಾಧಾನಪಡಿಸಲು ಆಗಲೇ ಇಲ್ಲ.

ಆನಂದ—ಏನಾಯಿತು ? ಎಲ್ಲಿ ಹೋದಳು?

ಮಾವ—ಲಕ್ಷಯಬಾಬು, ನಿಮಗೆಲ್ಲಾ ತಿಳಿದಿದೆ; ನೀವೇ ಹೇಳಿ. ನನ್ನ ಕೈಲಾಗುವುದಿಲ್ಲ. ಅಕ್ಷಯ ಕಥೆಯನ್ನೆಲ್ಲಾ ಹೇಳಿದನು. ಬಾಯಿ ಬಿಟ್ಟು ಹೇಳದೆ, ರಮೇಶ ಬಹಳ ದುಷ್ಟನೆಂದು ವ್ಯಕ್ತವಾಗುವಂತೆ ಹೇಳಿದನು.

ಎಲ್ಲಾ ಮುಗಿದಮೇಲೆ ಆನಂದಬಾಬು—ಇದೊಂದೂ ನಮಗೆ ತಿಳಿಯದು. ರಮೇಶ ಕಲ್ಕತ್ತೆಯನ್ನು ಬಿಟ್ಟಮೇಲೆ ಆತನಿಂದ ಒಂದು ಕಾಗದ ಕೂಡ ಬರಲಿಲ್ಲ.

ಅಕ್ಷಯ—ಹೌದು. ಅವನು ಕಮಲೆಯನ್ನು ಮದುವೆಯಾದುದೂ ನಮಗೆ ಖಂಡಿತವಾಗಿ ತಿಳಿದಿರದಿಲ್ಲ. ಅದು ಖಂಡಿತ ತಾನೆ? ಆಕೆ ಬೇರೆ ಯಾರೂ ಅಲ್ಲವಷ್ಟೆ ?

ಮಾವ—ಹಾಗೆಂದರೇನು ? ಆಕೆ ಖಂಡಿತವಾಗಿ ಆತನ ಹೆಂಡತಿ.

ಅಕ್ಷಯ—ಹೆಂಡತಿ ಒಳ್ಳೆಯವಳಾದಷ್ಟಕ್ಕೂ ಅವಳಿಗೇ ತೊಂದರೆ, ಎಂದು ನಿಟ್ಟುಸಿರು ಬಿಟ್ಟನು.

ಆನಂದ—ಈಗೇನೂ ಮಾಡಲಾಗುವುದಿಲ್ಲ. ದುಃಖಪಟ್ಟೇನು ಪ್ರಯೋಜನ.

ಅಕ್ಷಯ—ಕಮಲೆ ಆತ್ಮಹತ್ಯೆ ಮಾಡಿಕೊಂಡಳೆಂದು ನನಗೆ ನಂಬಿಕೆಯಿಲ್ಲ. ಸುಮ್ಮನೆ ಮನೆ ಬಿಟ್ಟು ಹೋಗಿರಬಹುದು. ಇಲ್ಲಿ ಹುಡುಕ ಬಂದಿದ್ದೇವೆ.

ಆನಂದ—ರಮೇಶನೆಲ್ಲಿ ?

ಮಾವ—ನಮಗೆ ತಿಳಿಸದೆ ಹೊರಟುಹೋದ.

ಅಕ್ಷಯ—ನಾನೂ ಕಾಣೆ. ಕಲ್ಕತ್ತೆಗೆ ಹಿಂದಿರುಗಿರಬಹುದು. ಎಷ್ಟು ದಿನ ದುಃಖಪಡಲು ಸಾಧ್ಯ! ಬನ್ನಿ, ಮಾವ, ಸರಿಯಾಗಿ ವಿಚಾರಿಸೋಣ.

ಆನಂದ—ನಮ್ಮ ಮನೆಯಲ್ಲೇ ಇರುತ್ತೀಯಾ, ಅಕ್ಷಯ ?

ಅಕ್ಷಯ—ಹೇಳಲಾರೆ. ಪಾಪ, ಆ ಹುಡುಗಿಯನ್ನು ಹುಡುಕಬೇಕು. ಎಲ್ಲಿ ಕಷ್ಟಪಡುತ್ತಿದ್ದಾಳೋ! ರಮೇಶನಿದ್ದ ಹಾಗೆ ಸುಮ್ಮನಿರಲು ನನಗೆ ಸಾಧ್ಯವಿಲ್ಲ.

ಅಕ್ಷಯ ಮಾವನೊಡನೆ ಹೊರಟುಹೋದನು. ಆನಂದಬಾಬು ಮಗಳ ಮುಖವನ್ನು ನೋಡಿದನು. ಹೇಮನಳಿನಿ ಧೈರ್ಯವಾಗಿರಲು ಪ್ರಯತ್ನಿಸುತ್ತಿದ್ದಳು.

"ಅಪ್ಪಾ, ನೀನು ಯಾರಾದರೂ ವೈದ್ಯನನ್ನು ನೋಡಬೇಕು. ಸಣ್ಣ ವಿಚಾರಗಳನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಳ್ಳುತ್ತೀ."

ರಮೇಶನ ವಿಚಾರವನ್ನು ಬದಿಗೊತ್ತಿ ತನ್ನ ಆರೋಗ್ಯದ ಕಡೆ ಅವಳು ಗಮನ ಕೊಟ್ಟುದರಿಂದ ಆನಂದಬಾಬುವಿಗೆ ಸಮಾಧಾನವಾಯಿತು.

"ಅದೂ ಒಳ್ಳೇ ಆಲೋಚನೆಯೇ. ಡಾಕ್ಟರ್ ನಳಿನಾಕ್ಷನಿಗೆ ಹೇಳಿಕಳುಹಿಸೋಣವೇ ?"

ಹೇಮನಳಿನಿಗೆ ನಳಿನಾಕ್ಷನನ್ನು ನೋಡುವುದು ಕಷ್ಟವೆನ್ನಿಸಿದರೂ ಧೈರ್ಯವಾಗಿ "ಅದೇ ಸರಿ. ಯಾರನ್ನಾದರೂ ಕಳುಹಿಸಿ ಕರೆಸುತ್ತೇನೆ" ಎಂದಳು.

ಆನಂದ—ರಮೇಶನ ವಿಚಾರ........

ಹೇಮನಳಿನಿ ನಡುವೆ ಬಾಯಿ ಹಾಕಿ, "ಬಿಸಿಲು ಹೆಚ್ಚಾಯಿತು. ಒಳಗೆ ಹೋಗೋಣ" ಎಂದು ಕೈಹಿಡಿದು ಕರೆದುಕೊಂಡುಹೋದಳು. ಕುರ್ಚಿಯಮೇಲೆ ಕೂಡಿಸಿ, ಬೆಚ್ಚಗೆ ಹೊದಿಸಿ, ಕನ್ನಡಕವನ್ನು ಮೂಗಿನ ಮೇಲಿಟ್ಟು ಪತ್ರಿಕೆಯನ್ನು ಕೊಟ್ಟು "ನನಗೆ ಕೆಲಸವಿದೆ. ಓದುತ್ತಿರು" ಎಂದು ಹೇಳಿದಳು.

ಆನಂದಬಾಬು ಅವಳು ಹೇಳಿದಂತೆ ಕೇಳಲು ಪ್ರಯತ್ನಿಸಿದನು. ಸಾಧ್ಯವಾಗದಿರಲು ಅವಳನ್ನು ಹುಡುಕಿಕೊಂಡು ಹೊರಟನು. ಅವಳ

ಕೋಣೆಯ ಬಾಗಿಲು ಮುಚ್ಚಿದ್ದುದರಿಂದ ಪುನಃ ಹೋಗಿ ಕುರ್ಚಿಯಮೇಲೆ ಕುಳಿತನು.

ನಳಿನಾಕ್ಷ ಆನಂದಬಾಬುವಿನ ದೇಹಸ್ಥಿತಿಯನ್ನು ಪರೀಕ್ಷಿಸಿ ಔಷಧಿಯನ್ನು ಹೇಳಿ ಹೇಮಳನ್ನು ಕುರಿತು, "ನಿಮ್ಮ ತಂದೆ ಏನಾದರೂ ಮನಸ್ಸಿಗೆ ಹಚ್ಚಿಕೊಂಡು ವೇಚಾದುತ್ತಿರುವರೆ?" ಎಂದು ಕೇಳಿದನು.

ಹೇಮನಳಿನಿ ಹೌದೆಂದಳು.

ನಳಿನಾಕ್ಷ—ಚಿಂತೆಯಿಲ್ಲದಿದ್ದರೆ ಉತ್ತಮ. ನಮ್ಮ ತಾಯಿಯೂ ಹೀಗೇ, ಸಣ್ಣ ವಿಷಯಗಳಿಗೆಲ್ಲಾ ನೊಂದುಕೊಳ್ಳುತ್ತಾಳೆ. ರಾತ್ರಿಯೆಲ್ಲಾ ನಿದ್ದೆಗೆಡುತ್ತಾಳೆ.

ಹೇಮ—ನೀವೂ ಸ್ವಸ್ಥವಾಗಿರುವ ಹಾಗಿಲ್ಲ.

ನಳಿನ—ನನಗೇನೂ ಇಲ್ಲ. ರಾತ್ರಿ ಸ್ವಲ್ಪ ನಿದ್ದೆಗೆಟ್ಟೆ. ಅದರಿಂದ ಹಾಗೆ ಕಾಣಬಹುದು.

ಹೇಮ—ನಿಮ್ಮ ತಾಯಿಯನ್ನು ನೋಡಿಕೊಳ್ಳಲು ಯಾರಾದರೂ ಹೆಂಗಸಿದ್ದರೆ ಉತ್ತಮ. ಕೆಲಸವನ್ನೂ ಮಾಡಿ, ಆಕೆಯನ್ನೂ ನೋಡಿಕೊಳ್ಳುವುದು ಕಷ್ಟವಾಗಬಹುದು.

ಮಾತನಾಡಿದ ಮೇಲೆ ಅದರರ್ಥ ಹೊಳೆದು ಹೇಮನಳಿನಿಯ ಮುಖ ಕೆಂಪಾಯಿತು. ಆತನಿಗೂ ತನ್ನ ತಾಯಿಯ ಮಾತು ನೆನಪಿಗೆ ಬಂತು. ಹೇಮನಳಿನಿ ಅರ್ಥ ಬದಲಾಯಿಸಲು "ಒಬ್ಬ ಕೂಲಿ ಹೆಂಗಸಿದ್ದರೆ ಒಳ್ಳೆಯದು" ಎಂದಳು.

ನಳಿನ—ನಾನೂ ಹೇಳಿ ನೋಡಿದೆ. ಆಕೆ ಒಪ್ಪುವುದಿಲ್ಲ. ಆಕೆಗೆ ತೃಪ್ತಿಯಾಗಿ ಆಳುಗಳು ಮಡಿಮಾಡುವುದಿಲ್ಲ.

ಹೇಮನಳಿನಿ ಆ ಮಾತನ್ನು ಬಿಟ್ಟು, "ನಿಮ್ಮ ಉಪದೇಶದಂತೆ ನಡೆಯಲು ಎಷ್ಟೋ ವಿಘ್ನಗಳು ಒದಗುತ್ತವೆ. ನನ್ನ ಮನಸ್ಸು ನಿಶ್ಚಲವಾಗುವುದೆಂದು?" ಎಂದಳು.

ನಳಿನಾಕ್ಷ ಯೋಚಿಸಿ, "ಕಷ್ಟಗಳು ಒದಗುವುದೇ ಮನಸ್ಸನ್ನು ಗಟ್ಟಿಮಾಡುವುದಕ್ಕೆ. ಅದರಿಂದ ನಿರಾಸೆಪಡಕೂಡದು."

ಹೇಮ—ನಿಮ್ಮ ಸಹಾಯವಿದ್ದರೆ ಧೈರ್ಯ ಬರುತ್ತದೆ. ನಾಳೆ

ಬರುವಿರಾ? ನಳಿನಾಕ್ಷನ ಸ್ಥೈರ್ಯ ಹೇಮನಳಿನಿಗೆ ಧೈರ್ಯಕೊಟ್ಟಿತು. ಆತನು ಹೊರಟುಹೋದ ಮೇಲೂ ಅವಳ ಹೃದಯದಲ್ಲಿ ಶಾಂತಿಯಿತ್ತು. ಪಡಸಾಲೆಯಲ್ಲಿ ನಿಂತು ಹೊರಗೆ ನೋಡಿದಳು. ಸೃಷ್ಟಿ ಕರ್ತವ್ಯ ವಿಶ್ರಾಂತಿಗಳಿಂದ, ಶಕ್ತಿ ಶಾಂತಿಗಳಿಂದ ತುಂಬಿರುವುದನ್ನು ನೋಡಿದಳು. ಜಗತ್ತಿನ ತನಿಸ್ಪರ್ಶವು ಅವಳ ಹೃದಯಕ್ಕೆ ಶಾಂತಿಯನ್ನು ಕೊಟ್ಟಿತು.

ಹೇಮನಳಿನಿ ನಳಿನಾಕ್ಷನ ಚಿಂತೆಗೆ ಕಾರಣವನ್ನರಿತಳು. ಮದುವೆಯ ಮಾತಿನ ಮೊದಲ ಗಾಬರಿ ಮರೆಯಾಗಿತ್ತು. ನಳಿನಾಕ್ಷನಲ್ಲಿ ನಂಬಿಕೆ ಆದರಗಳಿದ್ದರೂ ಪ್ರೇಮದ ಬೇಗೆಯಿರಲಿಲ್ಲ. ಆತನ ಉಚ್ಚ ಜೀವನಕ್ಕೆ ಹೆಂಗಸಿನ ಪ್ರೇಮದ ಆವಶ್ಯಕತೆಯಿರಲಿಲ್ಲ. ಆದರೆ ಆತನ ತಾಯಿ ಮುದಿಯಾಗಿದ್ದಳು. ಸಹಾಯಕ್ಕೆ ಯಾರೂ ಇರಲಿಲ್ಲ. ಅಂತಹ ಮನುಷ್ಯನ ಸೇವೆಯೇ ಒಂದು ರೀತಿಯ ಪೂಜೆ.

ರಮೇಶನ ಕಥೆಯನ್ನು ಕೇಳಿ ಅವಳಿಗೆ ಬಹಳ ನೋವುಂಟಾಗಿದ್ದಿತು. ಆತನಿಗಾಗಿ ದುಃಖಿಸುವುದೇ ಅವಮಾನಕರವಾಗಿ ತೋರಿತು. ಆತನ ತಪ್ಪು ಒಪ್ಪುಗಳನ್ನು ಚರ್ಚಿಸಲು ಅವಳಿಗೆ ಇಷ್ಟವಿರಲಿಲ್ಲ. ಮರೆಯಲು ಪ್ರಯತ್ನಿಸಿದಳು. ಸಹಾಯಕ್ಕೆ ಶಾಂತಿಗಾಗಿ ದೇವನಲ್ಲಿ ಮೊರೆಯಿಟ್ಟಳು.

ರಮೇಶನ ವಿಚಾರವಾಗಿ ಹೇಮನಳಿನಿಯ ಅಭಿಪ್ರಾಯ ತಿಳಿಯಲು ಆನಂದಬಾಬುವಿಗೆ ಕುತೂಹಲವಿದ್ದರೂ, ಕೇಳಲು ಹಿಂದೆಗೆದನು. ಅವಳು ಹೊಲಿಗೆ ಕೆಲಸಮಾಡುತ್ತಿದ್ದಾಗ ಅಲ್ಲಿ ಹೋದನು. ಆದರೆ ಕೇಳುವ ಸಾಹಸ ಮಾಡಲಿಲ್ಲ. ಸಾಯಂಕಾಲ ಹಾಲು ಔಷಧಗಳನ್ನು ಕೊಡಲು ಅವಳು ಬಂದಾಗ, "ಬೆಳಗ್ಗೆ ಬಂದವನು ಒಳ್ಳೆಯವನಂತೆ ತೋರಿದ," ಎಂದನು. ಹೇಮನಳಿನಿ ಮಾತನ್ನು ಮುಂದುವರಿಸದಿರಲು, "ರಮೇಶನ ನಡತೆಯನ್ನುಕೇಳಿ ಆಶ್ಚರ್ಯವಾಯಿತು. ನಾನು ಇದುವರೆಗೂ ನಂಬಿಯೇ ಇರಲಿಲ್ಲ" ಎಂದನು.

"ಆ ಮಾತು ಬೇಡಪ್ಪಾ," ಹೇಮ ಬೇಡಿದಳು.

ಆನಂದ—ನನಗೂ ಇಷ್ಟವಿಲ್ಲ. ಆದರೆ ಸ್ನೇಹವಿಶ್ವಾಸಗಳಿದ್ದವರ ನಡತೆಯಲ್ಲಿ ಕುತೂಹಲವಿರುತ್ತದೆ.

ಹೇಮ—ನಮ್ಮ ಸುಖ ಬೇರೊಬ್ಬರನ್ನು ಅವಲಂಬಿಸಬಾರದು. ನೀವು ನನ್ನ ವಿಚಾರವಾಗಿ ಚಿಂತಿಸಬೇಡಿ.

ಆನಂದ—ಹೇಮಾ, ನಾನು ಮುದುಕ. ನಿನ್ನ ಮದುವೆಯಾದರೆ ಧೈರ್ಯವಾಗಿ ಪ್ರಾಣ ಬಿಡುತ್ತೇನೆ. ಒಮ್ಮೆ ನಿರಾಸೆಯಾದರೆ ಜೀವನ ಸೌಖ್ಯಕ್ಕೇ ತಿಲಾಂಜಲಿ ಕೊಡಬಾರದು. ನಿನ್ನ ಸುಖ ನನಗೆ ತಿಳಿದಿದೆ. ಹೇಳಿದಂತೆ ಕೇಳು.

ಹೇಮ—ನಿಮ್ಮ ಮಾತಿಗೆ ಎಂದು ಬದಲಾಡಿದ್ದೇನೆ? ನನ್ನ ಸಂಶಯ ಗಳು ಹೋಗಲು ಸ್ವಲ್ಪ ಅವಕಾಶ ಕೊಡಿ.

ಆನಂದಬಾಬು ಮಗಳ ಒದ್ದೆಯಾದ ಗಲ್ಲವನ್ನು ಸವರಿ, ತಲೆಯ ಮೇಲೆ ಕೈಯಿಟ್ಟನು. ಮಾತನಾಡಲಿಲ್ಲ.

ಮಾರನೆಯ ದಿನ ಚಹಾ ಕುಡಿಯುತ್ತಿದ್ದಾಗ ಅಕ್ಷಯ ಬಂದನು. "ಆ ಹುಡುಗಿ ಸಿಕ್ಕಲಿಲ್ಲ" ಎಂದು ಹೇಳಿ ಚಹಾ ಕುಡಿಯಲು ಕುಳಿತನು. ಚಕ್ರವರ್ತಿಯ ಮನೆಯಲ್ಲಿ ರಮೇಶನ ಸಾಮಾನುಗಳಿವೆ. ಎಲ್ಲಿಗೆ ಕಳು ಹಿಸಬೇಕೆಂದು ತಿಳಿಯಲಿಲ್ಲ. ನೀವಿಲ್ಲಿರುವುದು ರಮೇಶಬಾಬುವಿಗೆ ತಿಳಿ ದರೆ ಬರುತ್ತಾನೆ. ನೀವು........

ಆನಂದ—(ಕೋಪದಿಂದ) ನಿನಗೆ ಬುದ್ಧಿಯಿಲ್ಲ, ಅಕ್ಷಯ! ಇಲ್ಲೇಕೆ ಬರುತ್ತಾನೆ?

ಅಕ್ಷಯ—ತಪ್ಪನ್ನು ಸ್ನೇಹಿತರು ಕ್ಷಮಿಸಬೇಕು. ಓಡಿಸುವುದ ಕ್ಕಾಗುತ್ತದೆಯೇ?

ಆನಂದ—ನಮ್ಮನ್ನು ರೇಗಿಸುವುದಕ್ಕೆ ನೀನು ಪದೇ ಪದೇ ಅದೇ ಮಾತನ್ನಾಡುತ್ತಿರುವೆ. ತಿರುಗಿ ಮಾತನಾಡಬೇಡ.

ಹೇಮ—ಕೋಪಿಸಿಕೊಳ್ಳಬೇಡಪ್ಪಾ. ನಿನಗೇ ತೊಂದರೆಯಾ ಗುತ್ತೆ. ಅಕ್ಷಯ ಬಾಬು ಬೇಕಾದ್ದು ಹೇಳಲಿ. ತಪ್ಪೇನು?

ಅಕ್ಷಯ—ತಪ್ಪಾಯಿತು. ತಿಳಿಯಲಿಲ್ಲ. ಕ್ಷಮಿಸಿ. ಇನ್ನೆಂದಿಗೂ ಮಾತನಾಡುವುದಿಲ್ಲ.

## ಅಧ್ಯಾಯ ೫೪

ಮುಕುಂದಬಾಬು ಮಾರತ್ತಿಗೆ ಹೊರಡುವ ದಿನ. ಸಾಮಾನೆಲ್ಲಾ ಕಟ್ಟಿ ಸಿದ್ಧವಾಗಿದ್ದಿತು. ಕಮಲೆ ಪ್ರಯಾಣಕ್ಕೆ ವಿಘ್ನವಾಗಲೆಂದು ಕೋರಿದಳು. ಹೊರಡುವ ಮೊದಲು ಡಾಕ್ಟರ್ ನಳಿನಾಕ್ಷ ಒಂದಾವೃತ್ತಿ ಬರಲೆಂದು ಕೋರಿದಳು. ಎರಡು ಕೋರಿಕೆಗಳೂ ನೆರವೇರಲಿಲ್ಲ.

ಕಣ್ಮರೆಯಾದರೆ ಕಮಲೆ ತಪ್ಪಿಸಿಕೊಳ್ಳಬಹುದೆಂದು ಹೆದರಿ ನವೀನ ಕಾಳಿ ಅವಳನ್ನು ಸಾಮಾನು ಕಟ್ಟಲು ನಿಯಮಿಸಿ ಸದಾಕಾಲವೂ ಎದುರಿಗೇ ಇಟ್ಟುಕೊಂಡಿದ್ದಳು. ತನಗೇನಾದರೂ ಕೆಟ್ಟ ಖಾಯಿಲೆ ಬಂದು ನವೀನಕಾಳಿ ತನ್ನನ್ನು ಬಿಟ್ಟು ಹೋಗಲೆಂದು ಬಯಸಿದಳು. ಡಾಕ್ಟರ್ ತನ್ನನ್ನು ನೋಡಲು ಬರಲೆಂಬ ಆಸೆಯೂ ಇತ್ತು. ಆ ಖಾಯಿಲೆಯೇ ಹೆಚ್ಚಾಗಿ ತಾನು ನಳಿನಾಕ್ಷನಿಗೆ ನಮಸ್ಕರಿಸಿ ಪ್ರಾಣಬಿಡುವ ದೃಶ್ಯವನ್ನೂ ಕಲ್ಪಿಸಿಕೊಂಡಳು.

ರಾತ್ರಿ ಮಲಗುವಾಗಲೂ ತನ್ನ ಬಳಿಯಲ್ಲಿಯೇ ಸ್ಥಳಕೊಟ್ಟು ತಾನಿದ್ದ ಗಾಡಿಯಲ್ಲಿ ಕೂಡಿಸಿಕೊಂಡು ನವೀನಕಾಳಿ ಕಮಲೆಯನ್ನು ನಿಲ್ದಾಣಕ್ಕೆ ಕರೆದುಕೊಂಡು ಹೋದಳು. ಮುಕುಂದಬಾಬು ಎರಡನೆಯ ತರಗತಿಯ ಗಾಡಿಯಲ್ಲೂ ನವೀನಕಾಳಿ ಕಮಲೆಯರು ಹೆಂಗಸರ ಗಾಡಿಯಲ್ಲೂ ಕುಳಿತರು.

ರೈಲು ಕಾಶಿಯನ್ನು ಬಿಟ್ಟು ಹೊರಟಿತು. ಅದೊಂದು ಕಾಡಾನೆಯಾಗಿ ತನ್ನನ್ನು ಸೀಳುತ್ತಿರುವಂತೆ ಕಮಲೆಗೆ ತೋರಿತು. ಆಶಾಪೂರ್ಣವಾದ ಕಣ್ಣುಗಳಿಂದ ಕಿಟಕಿಯ ಹೊರಗೆ ನೋಡುತ್ತಿದ್ದಾಗ ನವೀನ ಕಾಳಿ "ವೀಳ್ಯದ ಪೆಟ್ಟಿಗೆಯೆಲ್ಲಿ?" ಎಂದಳು.

ಕಮಲೆ ಅದನ್ನು ಕೊಡಲು, ತೆಗೆದು ನೋಡಿ "ಸುಣ್ಣವೇ ಇಲ್ಲ! ಏನು ಮಾಡುವುದು? ಎಲ್ಲಾ ನಾನೇ ನೋಡಿಕೊಳ್ಳಬೇಕು. ಬೇಕೆಂದೇ ಹೀ ಮಾಡಿದ್ದೀ. ಒಂದು ದಿನ ಪಲ್ಯಕ್ಕೆ ಉಪ್ಪಿಲ್ಲ; ಒಂದು ದಿನ ಹಾಲು ಮಣ್ಣಿನ ವಾಸನೆ! ನನಗೆ ನಿನ್ನ ಆಟವೆಲ್ಲಾ ತಿಳಿಯುತ್ತೆ. ಆಗಲಿ, ಮಾರತ್ತಿಗೆ ಹೋದಮೇಲೆ ನಿನಗೆ ಬುದ್ಧಿ ಕಲಿಸುತ್ತೇನೆ" ಎಂದಳು.

ರೈಲು ಸೇತುವೆಯ ಮೇಲೆ ಹೋಗುತ್ತಿದ್ದಾಗ ಕಮಲೆ ಕಿಟಕಿಯಿಂದ ಬಗ್ಗಿ ಪವಿತ್ರ ಸ್ಥಳವಾದ ಕಾಶಿಯನ್ನು ಕಡೆಯ ಸಲ ನೋಡಿದಳು. ನಳಿನಾಕ್ಷನ ಮನೆಯೆಲ್ಲಿತ್ತೆಂದು ಅವಳರಿಯಳು. ಆದರೆ ರೈಲು ಘಟ್ಟ, ಮನೆ, ದೇವಾಲಯಗಳನ್ನು ಹಾದು ಹೋಗುತ್ತಿರಲು ಸರ್ವವೂ ಆತನಿಂದ ತುಂಬಿದ್ದಂತೆ ಕಮಲೆಗೆ ತೋರಿತು.

ನವೀನ—ಏನು, ಹಾಗೆ ಬಗ್ಗಿ ನೋಡುತ್ತೀ? ರೆಕ್ಕೆ ಬಿಚ್ಚಿ ಹಾರಿ ಹೋಗಲು ನೀನೇನೂ ಪಕ್ಷಿಯಲ್ಲವಲ್ಲಾ!

ಕಾಶಿ ಕಣ್ಮರೆಯಾಯಿತು. ಕಮಲೆ ಹಿಂದಕ್ಕೆ ಕುಳಿತು ಶೂನ್ಯ ದೃಷ್ಟಿಯಿಂದ ನೋಡತೊಡಗಿದಳು.

ಮೊಗಲ್ ಸಿರೆಯ ಗಲಾಟೆಯೆಲ್ಲಾ ಕಮಲೆಗೆ ಕನಸಿನಂತೆ ತೋರುತ್ತಿತ್ತು. ಮಾತಿಲ್ಲದೆ ಒಂದು ರೈಲು ಬಿಟ್ಟು ಇನ್ನೊಂದನ್ನು ಹತ್ತಿದಳು.

ಮಾರತ್ತಿನ ರೈಲು ಹೊರಡುವ ವೇಳೆಗೆ, "ಅಮ್ಮಾ," ಎಂದ ಪರಿಚಿತಧ್ವನಿಯೊಂದು ಕೇಳಿಸಿತು. ನೋಡಿದರೆ ಉಮೇಶ! ಕಮಲೆಯ ಸಂತೋಷಕ್ಕೆ ಪಾರವೇ ಇರಲಿಲ್ಲ.

"ಉಮೇಶಾ' ಎಂದಳು. ಅವನು ಬಾಗಿಲು ತೆಗೆಯಲು ಕಮಲೆ ತಟ್ಟನೆ ಇಳಿದಳು. ಉಮೇಶ ನಮಸ್ಕರಿಸಿ ಹಲ್ಲು ಕಿರಿದನು.

ರಕ್ಷಕನೊಬ್ಬನು ರೈಲಿನ ಬಾಗಿಲು ಹಾಕಿದನು. ನವೀನಕಾಳಿ, "ರೈಲು ಹೊರಡುತ್ತ ಬೇಗ ಹತ್ತು." ಎಂದು ಕಿರಚಿಕೊಂಡಳು. ಕಮಲೆ ಕೇಳಲಿಲ್ಲ. ರೈಲು ಹೊರಟೇಬಿಟ್ಟಿತು.

"ಎಲ್ಲಿಂದ ಬಂದೆ, ಉಮೇಶ?"

"ಘಾಸಿಪುರದಿಂದ."

"ಎಲ್ಲರೂ ಚೆನ್ನಾಗಿದ್ದಾರೆಯೆ? ಮಾವ ಹೇಗಿದ್ದಾರೆ?"

"ಚೆನ್ನಾಗಿದ್ದಾರೆ."

"ಶೈಲಜೆ?'

"ನಿಮಗೋಸ್ಕರ ತುಂಬಾ ಅಳುತ್ತಿರುವರಮ್ಮಾ."

ಕಮಲೆಯ ಕಣ್ಣಲ್ಲೂ ನೀರು ತುಂಬಿದು. "ಉಮಿಗೆ ನನ್ನ ಜ್ಞಾಪಕ

ವಿದೆಯೇ? ಹೇಗಿದ್ದಾಳೆ?"

ಉಮೇಶ—ನೀವು ಕೊಟ್ಟ ಬಳೆ ಹಾಕದಿದ್ದರೆ ಅವಳು ಹಾಲೇ ಕುಡಿಯುವುದಿಲ್ಲ. ಅತ್ತೇ ಎಂದು ಅಳುತ್ತಿರುತ್ತಾಳೆ.

ಕಮಲ—ಇಲ್ಲಿಗೇಕೆ ಬಂದೆ?

ಉಮೇಶ—ಘಾಸಿಪುರ ಬೇಜಾರಾಯಿತು. ಬಂದುಬಿಟ್ಟೆ.

ಕಮಲ—ಎಲ್ಲಿಗೆ ಹೋಗುತ್ತೀ?

ಉಮೇಶ—ನಿಮ್ಮ ಜೊತೆಯಲ್ಲಿ.

ಕಮಲೆ—ನನ್ನ ಹತ್ತಿರ ದುಡ್ಡೇ ಇಲ್ಲವಲ್ಲಾ!

ಉಮೇಶ—ನನ್ನಲ್ಲಿದೆ.

ಕಮಲ—ಎಲ್ಲಿಯದು?

ಉಮೇಶ—ನೀವು ಕೊಟ್ಟ ಐದುರೂಪಾಯಿ ನಾನು ಖರ್ಚುಮಾಡಲೇ ಇಲ್ಲ—ಎಂದು ರೂಪಾಯಿಗಳನ್ನು ತೋರಿಸಿದನು.

ಕಮಲ—ಹಾಗಾದರೆ, ಬಾ, ಉಮೇಶ. ಕಾಶಿಗೆ ಟಿಕೆಟ್ಟು ತರುವೆಯಾ?

ಉಮೇಶ ಟಿಕೆಟ್ಟು ತಂದನು ನಿಂತಿದ್ದ ರೈಲಿನಲ್ಲಿ ಕಮಲೆಯನ್ನು ಕೂಡಿಸಿ ಉಮೇಶ ಪಕ್ಕದ ಗಾಡಿಯಲ್ಲಿ ಕುಳಿತನು.

ಕಾಶಿಯಲ್ಲಿಳಿದು ಕಮಲೆ, "ಎಲ್ಲಿಗೆ ಹೋಗೋಣ?" ಎಂದು ಕೇಳಿದಳು.

"ಯೋಚಿಸಬೇಡಿ. ನಾನು ಕರೆದುಕೊಂಡು ಹೋಗುತ್ತೇನೆ."

ಕಮಲ—ಕಾಶಿಯಲ್ಲಿ ನಿನಗೆ ಯಾರು ಗೊತ್ತು.

ಉಮೇಶ—ನೋಡುತ್ತಿರಿ.

ಕಮಲೆಯನ್ನು ಗಾಡಿಯಲ್ಲಿ ಕೂಡಿಸಿಕೊಂಡು ಒಂದು ಮನೆಗೆ ಕರೆದು ಕೊಂಡು ಹೋದನು. "ಇಲ್ಲಿ ಇಳಿಯಿರಿ, ಅಮ್ಮಾ."

ಕಮಲೆ ಇಳಿದು ಒಳಗೆ ಹೋದಳು. ಉಮೇಶ, "ತಾತಾ, ಇದ್ದೀರಾ?" ಎಂದು ಕೂಗಿದನು.

"ಯಾರು ಉಮೇಶನೇ? ಎಲ್ಲಿಂದ ಬಂದೆ?"

ಚಕ್ರವರ್ತಿ ಹೊರಗೆ ಬರಲು ಆಶ್ಚರ್ಯದಿಂದ ಕಮಲೆ ಆತನಿಗೆ

ನಮಸ್ಕರಿಸಿದಳು. ಮಾವನಿಗೆ ಮೈಮೇಲೆ ಅರಿವೇ ಇರಲಿಲ್ಲ. ಅವಳನ್ನು ಹಿಡಿದೆಬ್ಬಿಸಿ, "ನನ್ನ ಹುಡುಗಿ ಹಿಂದಕ್ಕೆ ಬಂದಳು. ಮೇಲೆ ಬಾಮ್ಮಾ," "ಶೈಲಾ, ಶೈಲಾ, ಯಾರೋ ಬಂದಿದ್ದಾರೆ, ನೋಡು" ಎಂದು ಕೂಗಿದನು.

ಶೈಲಜೆ ಓಡಿ ಬಂದಳು. ಕಮಲೆ ನಮಸ್ಕರಿಸಲು ಅಪ್ಪಿಕೊಂಡು ಹಣೆಯ ಮೇಲೆ ಮುತ್ತಿಟ್ಟಳು.

ಕಣ್ಣೀರು ಸುರಿಸುತ್ತಾ ಶೈಲಜೆ, "ನಮ್ಮನ್ನು ಬಿಟ್ಟು ಹಾಗೆ ಹೋಗಬಹುದೇ? ನಮಗೆಷ್ಟು ದುಃಖವಾಗಬಹುದೆಂದು ನಿನಗೆ ತಿಳಿಯಲಿಲ್ಲವೆ?" ಎಂದಳು.

ಮಾವ—ಅದೆಲ್ಲಾ ಇರಲಿ, ಶೈಲಾ! ಊಟಮಾಡಿಸು.

ಉಮೆ "ಅತ್ತೇ" ಎಂದು ಕೂಗುತ್ತಾ ಓಡಿಬಂದಳು. ಕಮಲೆ ಎತ್ತಿ ತಬ್ಬಿಕೊಂಡು ಮುದ್ದಾಡಿದಳು. ಕಮಲೆಯ ಕೆದರಿದ ಕೂದಲನ್ನೂ ಹರಕು ಬಟ್ಟೆಗಳನ್ನೂ ನೋಡಿ ಶೈಲಜೆಗೆ ದುಃಖ ಉಕ್ಕಿಬಂತು. ಸ್ನಾನಕ್ಕೆ ನೀರು ಕೊಟ್ಟು ಉಡಲು ತನ್ನ ಸೀರೆಯನ್ನೇ ಕೊಟ್ಟಳು. "ರಾತ್ರಿ ನಿದ್ರೆ ಹೋಗಲಿಲ್ಲವೆ? ಕಣ್ಣು ಗುಳಿಬಿದ್ದಿದೆ. ಅಡಿಗೆಯಾಗುವವರೆಗೂ ಸ್ವಲ್ಪ ಮಲಗುವೆಯಾ?"

"ಬೇಡಕ್ಕಾ, ನಾನೂ ಅಡುಗೆ ಮನೆಗೆ ಬರುತ್ತೇನೆ."

ಮಾವ ಕಮಲೆಯನ್ನು ಹುಡಕಲು ಅಕ್ಷಯನೊಡನೆ ಕಾಶಿಗೆ ಬಂದಾಗ ಶೈಲಜೆಯೂ ಬಂದಿದ್ದಳು. ವಿಪಿನನಿಗೆ ರಜಾ ಇಲ್ಲವೆಂದು ಮಾವ ಅಡ್ಡಿಮಾಡಿದನು.

"ಪರವಾಇಲ್ಲ, ಅಮ್ಮ ನೋಡಿಕೊಳ್ಳುತ್ತಾರೆ." ಶೈಲಜೆ ಗಂಡನನ್ನು ಬಿಟ್ಟು ಹೊರಟದ್ದು ಅದೇ ಮೊದಲು.

ಮಾವ ಅವಳನ್ನೂ ಕರೆತರಬೇಕಾಯಿತು. ಕಾಶಿಯಲ್ಲಿಳಿದಾಗ ಉಮೇಶನನ್ನು ನೋಡಿದರು. ಅವನೂ ಕಮಲೆಯನ್ನೇ ಹುಡುಕಿಕೊಂಡು ಬಂದಿದ್ದನು. ಅವನನ್ನೂ ಮಾವ ಕರೆದುಕೊಂಡು ಹೋದನು. ಆಮೇಲೆ ನಡೆದುದು ತಿಳಿದಿದೆ. ಉಮೇಶನಿಗೆ ಬೇಸರವಾಯಿತು. ಅಂಗಡಿಗೆ ಹೋಗೆಂದು ದುಡ್ಡುಕೊಟ್ಟು ಕಳುಹಿಸಿದಾಗ ರೈಲಿನಲ್ಲಿ

ಹೊರಟು ಹೋದನು. ಮಾವ ರೇಗಾಡಿದನು. ಆದರೆ ಕಮಲೆಯೊಡನೆ ಹಿಂದಿರುಗಿದುದರಿಂದ ಅವನಿಗೆ ಶಿಕ್ಷೆಯಾಗಲಿಲ್ಲ.

## ಅಧ್ಯಾಯ ೫೫

ಅಕ್ಷಯ ಬಂದರೂ ಚಕ್ರವರ್ತಿ ಕಮಲೆ ಹಿಂದಿರುಗಿದ ವೃತ್ತಾಂತ ತಿಳಿಸಲಿಲ್ಲ. ಈ ವೇಳೆಗೆ ಅವನು ರಮೇಶನ ಹಿತೈಷಿಯಲ್ಲವೆಂದು ಆತ ನಿಗೆ ತಿಳಿದುಹೋಗಿತ್ತು. ಕಮಲೆ ಏತಕ್ಕೆ ಓಡಿಹೋದಳೆಂದು ಯಾರೂ ವಿಚಾರಿಸಲಿಲ್ಲ. ಉಮೆಯ ದಾದಿ ಲಚಮನಿ ಪ್ರಶ್ನಿಸಲು ಪ್ರಯತ್ನಿಸಿದಾಗ ಮಾವ ಬೇಡವೆಂದು ನಿಷೇಧಿಸಿದನು!

ಕಮಲೆ ಶೈಲಜೆಯ ಬಳಿ ಮಲಗಿದಳು. ಅವಳು ಕಮಲೆಯನ್ನಪ್ಪಿ ಕೊಂಡಳು.

ಕಮಲ—ನನ್ನ ಮೇಲೆ ಕೋಪ ಬಂತೆ ಅಕ್ಕಾ?

ಶೈಲ—ಅಂಥಾ ಹುಚ್ಚರಲ್ಲ. ನಿನ್ನ ಕಷ್ಟಕ್ಕೆ ಕೊರಗಿದೆವು.

ಕಮಲ—ಆ ಕಥೆಯನ್ನೆಲ್ಲಾ ಹೇಳಲೆ ಅಕ್ಕಾ ?

ಶೈಲ—ಹೇಳುವೆಯಾ?

ಕಮಲ—ಮೊದಲೇ ಹೇಳಬೇಕಾಗಿತ್ತು. ಗಾಬರಿಯಲ್ಲಿ ಏನು ಮಾಡಿದೆನೆಂಬುದರ ಅರಿವೇ ಇಲ್ಲ. ನನಗೆ ತಾಯಿ, ಅಕ್ಕ, ಎಲ್ಲಾ ನೀನೇ! ಎಲ್ಲಾ ಹೇಳುತ್ತೇನೆ. ಕಮಲೆ ಎದ್ದು ಕುಳಿತಳು. ಶೈಲಜೆಯೂ ಎದ್ದಳು. ಕಮಲೆ ಕಥೆಯನ್ನೆಲ್ಲಾ ಹೇಳಿದಳು.

ತಾನು ಮದುವೆಯಲ್ಲಿ ಗಂಡನ ಮುಖವನ್ನೇ ನೋಡಲಿಲ್ಲವೆಂದು ಕಮಲೆ ಹೇಳಿದಾಗ ಶೈಲೆ "ನೀನೆಂತಹ ಹುಚ್ಚಿ, ಮದುವೆಯಾದಾಗ ನಾನು ನಿನಗಿಂತ ಚಿಕ್ಕವಳಾಗಿದ್ದೆ. ಆದರೆ ಗಂಡನನ್ನು ನೋಡಲು ನಾಚಿಕೊಳ್ಳ ಲಿಲ್ಲ."

ಕಮಲ—ನಾಚಿಕೆಯಲ್ಲ! ನನಗೆ ಮದುವೆಯ ವಯಸ್ಸಾಗಿ ಹೋಗಿ ದ್ದಿತು. ತಟ್ಟನೆ ಮದುವೆ ಗೊತ್ತಾಗಲು ಸ್ನೇಹಿತರೆಲ್ಲಾ ಹಾಸ್ಯಮಾಡಿ ದರು. ಅದೇನಂತಹ ದೊಡ್ಡ ವಿಷಯವಲ್ಲವೆಂದು ತೋರಿಸಲು ನಾನು

ಆತನ ಕಡೆ ನೋಡಲೇ ಇಲ್ಲ. ಆ ತಪ್ಪಿಗೆ ಈಗ ಶಿಕ್ಷೆ ಅನುಭವಿಸುತ್ತಿದ್ದೇನೆ. ದೋಣಿ ಮುಳುಗಿದಾಗ ನನ್ನನ್ನು ರಕ್ಷಿಸಿದವನು ನನ್ನ ಗಂಡನಲ್ಲವೆಂದು ತಿಳಿಯಲಿಲ್ಲ. ಶೈಲಜೆ ಅವಳ ಕತ್ತಿನ ಮೇಲೆ ಕೈಹಾಕಿ "ಎಂತಹ ಪ್ರಮಾದನಾಯಿತಮ್ಮಾ" ಎಂದಳು.

ಕಮಲ—ಹೌದಕ್ಕಾ! ನೀರಿನಲ್ಲಿ ಮುಳುಗಿ ಹೋಗಿದ್ದರೆ ಈ ಕಷ್ಟವೆಲ್ಲಾ ತಪ್ಪುತ್ತಿತ್ತು.

ಶೈಲಜೆ—ರಮೇಶಬಾಬುವಿಗೂ ತಿಳಿಯಲಿಲ್ಲವೆ?

ಕಮಲ–ಮದುವೆಯಾದ ಮೇಲೆ ಒಂದು ದಿನ ನನ್ನನ್ನು, "ಸುಶೀಲಾ" ಎಂದು ಕೂಗಿದರು ನಾನು, "ನನ್ನ ಹೆಸರು ಕಮಲ" ಎಂದು ಹೇಳಿದೆ. ಆಗ ಆತನಿಗೆ ತಿಳಿದಿರಬೇಕು. ಅವನ್ನೆಲ್ಲಾ ನೆನೆಸಿಕೊಂಡರೆ ಬಹಳ ನಾಚಿಕೆಯಾಗುತ್ತಕ್ಕಾ!—ಎಂದು ಕಮಲೆ ಸುಮ್ಮನಾದಳು.

ಸ್ವಲ್ಪಸ್ವಲ್ಪವಾಗಿ ಶೈಲಜೆ ಕಥೆಯನ್ನೆಲ್ಲಾ ಹೊರಡಿಸಿದಳು. ಎಲ್ಲಾ ಕೇಳಿ, ಹೋಗಲಿ! ರಮೇಶಬಾಬುವಿನ ಕೈಗೆ ಸಿಕ್ಕಿದೆಯಲ್ಲಾ! ಪಾಪ, ಅವನನ್ನು ಕಂಡರೂ ಮರುಕವಾಗುತ್ತೆ! ಹೊತ್ತಾಯಿತು, ಮಲಗು. ನಾಳೆ, ಏನು ಮಾಡಬೇಕೆಂದು ಯೋಚಿಸೋಣ" ಎಂದಳು.

ಕಮಲೆಯ ಬಳಿ, ರಮೇಶ ಹೇಮನಳಿನಿಗೆ ಬರೆದ ಕಾಗದವಿತ್ತು. ಶೈಲಜೆ ಅದನ್ನು ತಂದೆಗೆ ಕೊಟ್ಟಳು. ಮಾವ ಕನ್ನಡಕವನ್ನೇರಿಸಿ ಎಲ್ಲವನ್ನೂ ಓದಿ "ಏನು ಮಾಡೋಣ" ಎಂದು ಮಗಳನ್ನು ಕೇಳಿದನು.

"ಉಮೆಗೆ ನೆಗಡಿಯಾಗಿದೆ. ಡಾಕ್ಟರ್ ನಳಿನಾಕ್ಷರಿಗೆ ಹೇಳಿಕಳುಹಿಸಿ."

ಡಾಕ್ಟರು ಬಂದರು. ಶೈಲಜೆ, "ಬಾ, ಕಮಲಾ" ಎಂದು ಕೂಗಿದಳು. ನವೀನ ಕಾಳಿಯ ಮನೆಯಲ್ಲಿದ್ದಾಗ ನಳಿನಾಕ್ಷನನ್ನು ನೋಡಲು ಅಷ್ಟು ಕಾತರಳಾಗಿದ್ದ ಕಮಲೆ ಈಗ ಮೇಲಕ್ಕೇಳಲು ಕೂಡ ಅಶಕ್ತಳಾಗಿದ್ದಳು.

ಶೈಲಜೆ, "ಹೊತ್ತಿಲ್ಲ, ಬಾ ಕಮಲಾ! ಉಮೆಗೇನೂ ಖಾಯಿಲೆಯಿಲ್ಲ. ಡಾಕ್ಟರು ಹೊರಟು ಹೋಗುತ್ತಾರೆ," ಎಂದು ಕಮಲೆಯನ್ನೆಳೆದುಕೊಂಡು ಹೋದಳು. ನಳಿನಾಕ್ಷ ಉಮೆಯನ್ನು ಪರೀಕ್ಷಿಸಿ ಔಷಧಿ

ಬರೆದುಕೊಟ್ಟು ಹೊರಟು ಹೋದನು.

ಶೈಲ—ನಿನ್ನ ಅದೃಷ್ಟ ತಿರುಗಿತು. ಏರ್ಪಾಡು ಮಾಡುತ್ತಿದ್ದೇವೆ. ಆ ಮಧ್ಯೆ ಉಮೆಯನ್ನು ನೋಡಲು ಡಾಕ್ಟರು ಬರುತ್ತಿರುವುದರಿಂದ ನೀನು ನೋಡುತ್ತಿರಬಹುದು "

ಒಂದು ದಿಸ ನಳಿನಾಕ್ಷನಿಲ್ಲದಾಗ ಮಾವ ಅವರ ಮನೆಗೆ ಹೋದನು. ಯಜಮಾನನಿಲ್ಲವೆಂದು ಆಳು ಹೇಳಲು, "ಅಮ್ಮಾವರಿಗೆ ಹೇಳು. ಒಬ್ಬ ಮುದಿಬ್ರಾಹ್ಮಣ ಆಕೆಯನ್ನು ನೋಡಲು ಬಂದಿದ್ದಾನೆಂದು ಹೇಳು." ಕ್ಷೇಮಂಕರಿಯ ಬಳಿಗೆ ಹೋಗಿ "ನಿಮ್ಮನ್ನು ನೋಡೋಣವೆಂದು ಬಂದೆ. ನಿಮ್ಮ ಮಗ ನನ್ನ ಮೊಮ್ಮಗಳನ್ನು ನೋಡಬೇಕಾಗಿತ್ತು. ಅವಳಿಗೆ ಖಾಯಿಲೆ. ಆತ ಮನೆಯಲ್ಲಿಲ್ಲ. ನಿಮಗೆ ನಮಸ್ಕಾರ ಮಾಡಿ ಹೋಗೋಣ ವೆಂದುಕೊಂಡೆ."

ಕ್ಷೇಮ—ನಳಿನ ಬರುತ್ತಾನೆ ಸ್ವಲ್ಪ ಕೂತಿರಿ. ಏನಾದರೂ ಸ್ವಲ್ಪ ಉಪಹಾರ ತೆಗೆದುಕೊಳ್ಳಿ.

ಮಾವ—ನೀವು ನನ್ನನ್ನು ಸುಮ್ಮನೆ ಕಳುಹಿಸುವುದಿಲ್ಲವೆಂದು ನನಗೆ ಗೊತ್ತು. ನೋಡುತ್ತಲೇ ಎಲ್ಲರಿಗೂ ನಾನು ತಿಂಡಿಪೋತನೆಂದು ತಿಳಿದು ಹೋಗುತ್ತೆ.

ಕ್ಷೇಮಂಕರಿ ಸಂತೋಷದಿಂದ ತಿಂಡಿಯನ್ನು ತಂದಿಟ್ಟು, "ನಾಳೆ ಇಲ್ಲಿಗೇ ಊಟಕ್ಕೆ ಬನ್ನಿ. ಈವತ್ತು ಏನೂ ಸಿದ್ಧವಾಗಿಲ್ಲ" ಎಂದಳು.

ಮಾವ—ಮುದುಕನನ್ನು ಮರೆಯಬೇಡಿ. ನಮ್ಮ ಮನೆ ಹತ್ತಿರ ಇದೆ. ಆಳನ್ನು ಕಳುಹಿಸಿದರೆ ತೋರಿಸುತ್ತೇನೆ.

ಆಗಾಗ ಹೋಗಿ ಬಂದು ಮಾವ ಕ್ಷೇಮಂಕರಿಯನ್ನು ಚನ್ನಾಗಿ ಗುರುತುಮಾಡಿಕೊಂಡನು.

ಕ್ಷೇಮಂಕರಿ ಮಗನಿಗೆ "ಔಷಧಿಗೆ ಚಕ್ರವರ್ತಿಯಿಂದ ದುಡ್ಡು ತೆಗೆದುಕೊಳ್ಳಬೇಡ" ಎಂದು ಹೇಳಿದಳು.

ಮಾವ ನಕ್ಕು, "ನೀವು ಹೇಳುವ ಮೊದಲೇ ಆತನು ನಿಮ್ಮ ಅಪ್ಪಣೆ ಯನ್ನು ಪಾಲಿಸುತ್ತಾನೆ. ನೋಡುತ್ತಲೇ ನಾನು ಬಡವನೆಂದು ಆತನಿಗೆ ತಿಳಿದುಹೋಯಿತು" ಎಂದನು.

ಒಂದು ದಿನ ಮಾವ, "ಕಮಲಾ, ಸ್ನಾನ ಮಾಡಿ ಬರೋಣ. ಈ ದಿನ ದಶಾಶ್ವಮೇಧ ಉತ್ಸವ," ಎಂದನು.

ಕಮಲೆ ಶೈಲೆಯನ್ನು "ನೀನೂ ಬಾಕ್ಕಾ" ಎಂದಳು.

ಶೈಲ—ಉಮೆಗೆ ಸ್ವಸ್ಥವಾಗಿಲ್ಲವಲ್ಲಾ.

ಹಿಂದಿರುಗುವಾಗ ಮಾವ ಕಮಲೆಯೊಡನೆ ಬೇರೆ ದಾರಿಯಲ್ಲಿ ಹಿಂದಿರುಗಿದನು. ರೇಷ್ಮೆ ಸೀರೆಯನ್ನುಟ್ಟು ಬಿಂದಿಗೆಯಲ್ಲಿ ಗಂಗಾಜಲ ವನ್ನು ತರುತ್ತಿದ್ದ ಹೆಂಗಸೊಬ್ಬಳು ದಾರಿಯಲ್ಲಿ ಸಿಕ್ಕಿದಳು. ಮಾವ ಕಮಲೆಗೆ ಆಕೆಯನ್ನು ತೋರಿಸಿ, "ಈಕೆ ಡಾಕ್ಟರ ತಾಯಿ. ನಮಸ್ಕರಿಸು" ಎಂದನು. ಕಮಲೆ ಗಾಬರಿಯಿಂದ ಬಗ್ಗಿ ನಮಸ್ಕರಿಸಿದಳು.

ಕ್ಷೇಮ—ಈ ಹುಡುಗಿ ಯಾರು; ಲಕ್ಷ್ಮಿಯ ಹಾಗಿದ್ದಾಳೆ. ನಿನ್ನ ಹೆಸರೇನಮ್ಮಾ?

ಕಮಲೆಗಿಂತ ಮೊದಲು ಮಾವ, "ಅವಳ ಹೆಸರು ಹರಿದಾಸಿ. ನನಗೆ ದೂರದ ಸಂಬಂಧ. ತಂದೆತಾಯಿಗಳಿಲ್ಲದುದರಿಂದ ನಾನೇ ಸಾಕಿಕೊಂಡಿ ದ್ದೇನೆ."

ಕ್ಷೇಮ—ಬನ್ನಿ. ಇಬ್ಬರೂ ನಮ್ಮ ಮನೆಗೆ ಬನ್ನಿ.

ಕ್ಷೇಮಂಕರಿ ಮನೆಗೆ ಹೋಗಿ ನಳಿನಾಕ್ಷನನ್ನು ಕೂಗಿದಳು. ಆತನು ಇರಲಿಲ್ಲ. ಮಾವ ಕುರ್ಚಿಯಮೇಲೆ ಕುಳಿತು, "ಈ ಹುಡುಗಿಗೆ ಮದುವೆಯಾಗುತ್ತಲೇ ಗಂಡ ಸನ್ಯಾಸಿಯಾಗಿ ಹೊರಟುಹೋದ. ತಿರುಗಿ ಬರಲೇ ಇಲ್ಲ. ಇವಳು ಎಲ್ಲಾದರೂ ದೇವರಧ್ಯಾನ ಮಾಡಿಕೊಂಡು ಕಾಲ ಕಳೆಯಬೇಕೆಂದಿರುವಳು. ನಾನು ಘಾಸಿಪುರಕ್ಕೆ ಹೋಗಬೇಕು. ನಿಮ್ಮ ಮನೆಯಲ್ಲಿ ಮಗಳಂತೆ ಇಟ್ಟುಕೊಳ್ಳುವಿರಾ? ಬೇಸರವಾದರೆ ಘಾಸಿ ಪುರಕ್ಕೆ ಕಳುಹಿಸಿಬಿಡಿ. ಆದರೆ ಎರಡು ದಿನ ಅವಳಿದ್ದರೆ ಕಳುಹಿಸುವು ದಕ್ಕೆ ನಿಮಗೇ ಮನಸ್ಸು ಬರುವುದಿಲ್ಲ."

ಕ್ಷೇಮ—ಅದು ಒಳ್ಳೆ ಆಲೋಚನೆಯೇ. ಅಂಥಾ ಹುಡುಗಿಯಿದ್ದರೆ ನನಗೂ ವಾಸಿ. ನಮ್ಮ ಮನೆಯಲ್ಲಿರುವವರು ನಾನು, ನಳಿನಾಕ್ಷ ಇಬ್ಬರೇ. ನಿಮಗೇನೂ ಚಿಂತೆ ಬೇಡ. ಚನ್ನಾಗಿ ನೋಡಿಕೊಳ್ಳುತ್ತೇವೆ.

ಮಾವ—ನಳಿನಾಕ್ಷ ಒಳ್ಳೆಯವನೆಂದು ಎಲ್ಲರಿಗೂ ಗೊತ್ತು. ಆತನ

ಹೆಂಡತಿ ನೀರಿನಲ್ಲಿ ಮುಳುಗಿಹೋದಳೆಂದೂ ಆತನು ಸನ್ಯಾಸಿಯಂತಿರುವ ನೆಂದೂ ಹೇಳುತ್ತಾರೆ.

ಕ್ಷೇಮ—ದೈವೇಚ್ಛೆ! ಆದರೆ ಆ ಮಾತನ್ನೆತ್ತಬೇಡಿ. ನನಗೆ ನಡುಕವುಂಟಾಗುತ್ತೆ.

ಮಾವ—ಹಾಗಾದರೆ ಹರಿದಾಸಿ ಇಲ್ಲಿರಲಿ. ನಾನು ಆಗಾಗ ನೋಡಿ ಕೊಂಡು ಹೋಗುತ್ತೇನೆ. ಅವಳಕ್ಕನೂ ಬರುತ್ತಾಳೆ.

ಮಾವ ಹೊರಟುಹೋದ ಮೇಲೆ ಕ್ಷೇಮಂಕರಿ ಕಮಲೆಯನ್ನು ಹತ್ತಿರ ಕೂಡಿಸಿಕೊಂಡು "ನಿನ್ನನ್ನು ನೋಡೋಣ ಬಾ. ಇನ್ನೂ ಎಳೆಯ ಹುಡುಗಿ! ನಿನ್ನನ್ನು ಬಿಟ್ಟು ಹೋದ ಗಂಡ ಎಂಥಾ ಮುಟ್ಠಾಳ! ಇಷ್ಟು ಸೌಂದರ್ಯ ಕಾದುಪಾಲಾಗಲಾರದು. ನಿನ್ನ ಗಂಡ ಬರುತ್ತಾನೆ. ಇಲ್ಲಿ ನಿನ್ನ ಜತೆಯವರಿಲ್ಲ. ನಿನಗೆ ಬೇಸರವಾಗುವುದಿಲ್ಲವೇ?

ಕಮಲ—ಇಲ್ಲಮ್ಮಾ.

ಕ್ಷೇಮ—ದಿನವೆಲ್ಲಾ ಏನುಮಾಡುತ್ತೀ?

ಕಮಲ—ನಿಮ್ಮ ಕೆಲಸ ಮಾಡುತ್ತೇನೆ.

ಕ್ಷೇಮ—ಕಳ್ಳಿ, ನೀನೂ ಹೀಗೇ ಹೇಳುತ್ತೀಯಾ? ನನ್ನ ಮಗ ಒಂದು ವಿಧದ ಸನ್ಯಾಸಿ! ಅವನೇನಾದರೂ ಬೇಕೆಂದು ಕೇಳಿದರೆ ನನ ಗೆಷ್ಟೋ ಸಂತೋಷವಾಗುತ್ತೆ. ಅವನು ಕೇಳುವುದೇ ಇಲ್ಲ. ಸಂಪಾದಿಸು ತ್ತಾನೆ. ತನಗಾಗಿ ಏನನ್ನೂ ಖರ್ಚುಮಾಡುವುದಿಲ್ಲ. ನನ್ನ ಹತ್ತಿರ ಇದ್ದರೆ ಸುಮ್ಮನೆ ನನ್ನ ಮಗನ ಗುಣಗಾನ ಕೇಳಬೇಕಾಗುತ್ತೆ.

ಕಮಲೆಯ ಹೃದಯ ಆನಂದದಿಂದ ನರ್ತಿಸುತ್ತಿತ್ತು.

ಕ್ಷೇಮ—ನಿನಗೇನು ಕೆಲಸ ಹೇಳಲಿ? ಹೊಲಿಗೆ ಬರುತ್ತದೆಯೇ?

ಕಮಲ—ಚೆನ್ನಾಗಿ ಬರುವುದಿಲ್ಲ.

ಕ್ಷೇಮಂ—ನಾನು ಹೇಳಿಕೊಡುತ್ತೇನೆ. ಓದಲು ಬರುವುದೋ?

ಕಮಲ—ಬರುತ್ತೆ.

ಕ್ಷೇಮ—ಒಳ್ಳೆಯದಾಯಿತು. ನನಗೀಗ ಕನ್ನಡಕವಿಲ್ಲದೆ ಕಾಣಿಸು ವುದಿಲ್ಲ. ನೀನು ಓದಬಹುದು.

ಕಮಲ—ನನಗೆ ಅಡುಗೆ, ಮನೆಗೆಲಸ ಬರುತ್ತೆ.

ಕ್ಷೇಮ—ನಿನ್ನನ್ನು ನೋಡುತ್ತಲೇ ತಿಳಿಯಿತು. ಇದುವರೆಗೂ ನಾನೇ ನಳಿನನಿಗೆ ಅಡಿಗೆಮಾಡುತ್ತಿದ್ದೆ. ಖಾಯಿಲೆಯಾದಾಗ ತಾನೇ ಮಾಡಿಕೊಳ್ಳುತ್ತಾನೆ. ಇನ್ನುಮೇಲೆ ನೀನೇ ಮಾಡಬಹುದು. ಅಡುಗೆ ಮನೆ, ಉಗ್ರಾಣ ತೋರಿಸುತ್ತೇನೆ, ಬಾ—ಎಂದು ಕಮಲೆಯನ್ನು ಕರೆದು ಕೊಂಡು ಹೋದಳು.

ಕಮಲೆ ತಗ್ಗಿದ ಧ್ವನಿಯಲ್ಲಿ "ಈದಿನ ಅಡುಗೆ ನಾನು ಮಾಡು ತ್ತೇನಮ್ಮಾ," ಎಂದಳು ಕ್ಷೇಮಂಕರಿ ನಕ್ಕು, "ಇದುವರೆಗೂ ನಾನು ಯಾರಿಗೂ ಅಡಿಗೆಯನ್ನು ಬಿಟ್ಟುಕೊಡಲಿಲ್ಲ. ಆಗಲಿ, ನೀನು ಒಂದೆರಡು ದಿನ ಮಾಡು ಕ್ರಮೇಣ ಎಲ್ಲಾ ಕೆಲಸವೂ ನಿನ್ನ ತಲೆಯ ಮೇಲೇ ಬೀಳುತ್ತೆ ನನಗೂ ಪೂಜೆಗೆ ಹೊತ್ತಿರುತ್ತೆ," ಎಂದಳು. ಕ್ಷೇಮಂಕರಿ ಕಮಲೆಗೆ ಅಡುಗೆ ಮನೆಯನ್ನುತೋರಿಸಿ ಪೂಜೆಗೆ ಹೋದಳು ಕಮಲೆ ಸೀರೆಯನ್ನು ಮೇಲಕ್ಕ ಕಟ್ಟಿಕೊಂಡು ಅಡುಗೆ ಪ್ರಾರಂಭಿಸಿ ದಳು. ನಳಿನಾಕ್ಷ ಮನೆಗೆ ಬರುತ್ತಲೇ ತಾಯಿಯ ಆರೋಗ್ಯಸ್ಥಿತಿಯನ್ನು ವಿಚಾರಿಸುವುದು ಪದ್ಧತಿಯಾಗಿತ್ತು ಬರುತ್ತಲೇ ಅಡುಗೆಯ ವಾಸನೆ ಬಂದುದರಿಂದ ತಾಯಿ ಅಡುಗೆ ಮನೆಯಲ್ಲಿರುವಳೆಂದು ಬಾಗಿಲಿಗೆ ಹೋದನು.

ಕಮಲೆ ಗಾಬರಿಯಿಂದ ತಿರುಗಲು ಎದುರಿಗೆ ನಳಿನಾಕ್ಷ! ಸೌಟು ಕೆಳಕ್ಕೆ ಬಿತ್ತು. ಪರಸೆಯನ್ನೆತ್ತಿ ಮುಖ ಮರೆಸಿಕೊಳ್ಳುವುದರೊಳಗಾಗಿ ನಳಿನಾಕ್ಷನೂ ಗಾಬರಿಯಿಂದ ಹೊರಟು ಹೋಗಿದ್ದನು. ಸೌಟನ್ನೆತ್ತಿದ ಕಮಲೆಯ ಕೈ ನಡುಗುತ್ತಿತ್ತು. ಕ್ಷೇಮಂಕರಿ ಪೂಜೆಯನ್ನು ಮುಗಿಸಿ ಕೊಂಡು ಅಡುಗೆ ಮನೆಗೆ ಬರುವ ವೇಳೆಗೆ ಅಡುಗೆ ಸಿದ್ಧವಾಗಿತ್ತು. ಕಮಲೆ ಮನೆಯನ್ನು ಚೊಕ್ಕಟ ಮಾಡಿದ್ದಳು. ಕ್ಷೇಮಂಕರಿ ಸಂತೋಷ ದಿಂದ, "ನೀನು ನಿಸ್ಸಂದೇಹವಾಗಿ ಬ್ರಾಹ್ಮಣ ಹುಡುಗಿಯೇ," ಎಂದಳು.

ನಳಿನಾಕ್ಷ ಊಟಕ್ಕೆ ಕುಳಿತನು. ಆತನ ತಾಯಿ ಎದುರಿಗೇ ಕುಳಿತಿದ್ದಳು. ಕಮಲೆ ಬಾಗಿಲ ಹಿಂದೆ, ಇಣಿಕಿ ನೋಡುವುದಕ್ಕೂ ಧೈರ್ಯವಿಲ್ಲದೆ, ಅಡುಗೆ ಚನ್ನಾಗಿದೆಯೋ ಇಲ್ಲವೋ ಎಂದು ಹೆದರುತ್ತಾ ನಿಂತಿದ್ದಳು.

"ಅಡುಗೆ ಹೇಗಿದೆ ನಳಿನ?" ಕ್ಷೇಮಂಕರಿ ಕೇಳಿದಳು.

ನಳಿನಾಕ್ಷ ಎಂದೂ ಅಡುಗೆಯ ವಿಚಾರವಾಗಿ ಆಕ್ಷೇಪಿಸಿದವನಲ್ಲ. ಬೇರೆಯವರು ಅಡಿಗೆ ಮಾಡಿದುದು ಅವನಿಗೆ ತಿಳಿಯದೆಂದು ಕ್ಷೇಮಂಕರಿ ಭಾವಿಸಿದಳು. ತಾಯಿಗೆ ತೊಂದರೆ ತಪ್ಪಿ ಯಾರಾದರೂ ಅಡಿಗೆಗೆ ಬಂದರೆ ಸಾಕೆಂದಿದ್ದ ನಳಿನಾಕ್ಷ "ಬಹಳ ಚನ್ನಾಗಿದೆ," ಎಂದನು.

ಕಮಲೆ ಆನಂದವನ್ನು ತಡೆಯಲಾರದೆ ಬೇರೆ ಕೊರಡಿಗೆ ಹೊರಟು ಹೋದಳು. ಊಟವಾದ ಮೇಲೆ ನಳಿನಾಕ್ಷ ಓದಲು ತನ್ನ ಕೋಣೆಗೆ ಹೋದನು. ಕ್ಷೇಮಂಕರಿ ಕಮಲೆಯ ತಲೆ ಬಾಚಿ ಕುಂಕುಮವನ್ನಿಟ್ಟಳು. ಕಮಲೆ ತಲೆಯೆತ್ತದೆ ಕುಳಿತಿದ್ದಳು. ಕ್ಷೇಮಂಕರಿ ನಿಟ್ಟುಸಿರಿಟ್ಟು ತನ್ನಲ್ಲಿಯೇ "ನನಗಿಂತಹ ಸೊಸೆಯಿದ್ದಿದ್ದರೆ," ಎಂದುಕೊಂಡಳು.

ಆ ರಾತ್ರಿ ಮುದುಕಿಗೆ ಪುನಃ ಜ್ವರ ಬಂತು.

"ಕಾಶಿಯ ಹವಾ ನಿನಗೆ ಸರಿ ಹೋಗಲಿಲ್ಲ," ನಳಿನಾಕ್ಷನೆಂದನು.

"ಕಾಶಿಯಲ್ಲಿಯೇ ಸಾಯಬೇಕೆಂದು ನನ್ನಾಸೆ. ಇನ್ನೆರಡು ದಿನ ಬದುಕುವುದಕ್ಕೋಸ್ಕರ ಬೇರೆ ಕಡೆ ಹೋಗುವುದೇಕೆ?" ಎಂದು ಕ್ಷೇಮಂಕರಿ ಕಮಲೆಯನ್ನು ನೋಡಿ, "ಮಲಗು ಹೋಗಮ್ಮಾ. ನಿದ್ದೆಗೆಡಬಾರದು. ಮನೆಗೆಲಸವನ್ನೆಲ್ಲಾ ನೀನೇ ಮಾಡಬೇಕಾಗುತ್ತೆ. ನೀನೂ ಹೋಗು, ನಳಿನ," ಎಂದಳು. ನಳಿನಾಕ್ಷ ಎದ್ದುಹೋಗಲು ಕಮಲೆ ಕ್ಷೇಮಂಕರಿಯ ಕಾಲುಗಳನ್ನು ಒತ್ತತೊಡಗಿದಳು.

ಕ್ಷೇಮ—ನೀನು ನನಗೆ ಪೂರ್ವ ಜನ್ಮದ ತಾಯಿಯಾಗಿರಬೇಕು. ಇಲ್ಲದಿದ್ದರೆ ನೀನೆಲ್ಲಿ ಸಿಕ್ಕುತ್ತಿದ್ದೆ? ನನಗೆ ಹೊಸಬರನ್ನು ಕಂಡರೆ ಆಗುವುದಿಲ್ಲ. ನೀನು ಮುಟ್ಟಿದರೆ ಮಾತ್ರ ಹಾಯಾಗಿದೆ. ಎಷ್ಟೋ ವರ್ಷಗಳ ಪರಿಚಿತಳಂತಿದ್ದೀ. ಹೇಳಿದ ಮಾತು ಕೇಳಿ, ಹೋಗಿ ಮಲಗು. ನಳಿನ ಇಲ್ಲೇ ಪಕ್ಕದ ಕೋಣೆಯಲ್ಲಿದ್ದಾನೆ. ಎಷ್ಟು ಹೇಳಿದರೂ ಕೇಳುವುದಿಲ್ಲ. ರಾತ್ರಿಯೆಲ್ಲಾ ಎದ್ದಿದ್ದರೂ ಆಯಾಸವನ್ನೇ ತೋರಿಸುವುದಿಲ್ಲ. ನಾನು ಅವನನ್ನು ಹೊಗಳಿದರೆ ನಗುವೆಯೋ ಏನೋ! ಅವನೊಬ್ಬನೇ ಮಗ. ಅಂತಹ ಮಕ್ಕಳಿರುವುದು ಅಪರೂಪ. ಈಸಲ ನೀನು ಮಲಗದಿದ್ದರೆ ನಾನು ಸುಮ್ಮನಿರುವುದಿಲ್ಲ. ನೀನಿಲ್ಲಿದ್ದರೆ ನಾನು ನಿದ್ದೆ ಹೋಗುವುದಿಲ್ಲ.

ಕೇಳುವವರಿದ್ದರೆ ಮುದುಕರು ಮಾತು ನಿಲ್ಲಿಸುವುದೇ ಇಲ್ಲ."

ಮಾರನೆಯ ದಿನದಿಂದ ಕಮಲೆಯೇ ಮನೆಗೆಲಸವನ್ನೆಲ್ಲಾ ಮಾಡ ಲಾರಂಭಿಸಿದಳು. ನಳಿನಾಕ್ಷ ಮಧ್ಯಾಹ್ನವೆಲ್ಲಾ ಪಡಸಾಲೆಯಲ್ಲಿ ಕುಳಿತು ಓದುತ್ತಿದ್ದನು. ಅವನು ಬರುವ ವೇಳೆಗೆ ಕಮಲೆ ಗುಡಿಸಿ, ಆತನು ಧೂಪ ಹಾಕುತ್ತಿದ್ದ ಪಾತ್ರೆಯನ್ನು ಬೆಳಗಿ ಹೊಳೆಯುವಂತೆ ಮಾಡಿದ್ದಳು. ಪುಸ್ತಕಗಳನ್ನೆಲ್ಲಾ ಒರಸಿ ಸರಿಯಾಗಿಟ್ಟಿದ್ದಳು; ನೋಡಿ, ನಳಿನಾಕ್ಷನಿಗೆ ಬಹಳ ಸಂತೋಷವಾಯಿತು.

ಕಮಲೆ ಕ್ಷೇಮಂಕರಿಗೆ ಗಂಗಾಜಲವನ್ನು ತಂದಳು

ಕ್ಷೇಮ—ಒಬ್ಬಳೇ ನದಿಗೆ ಹೋಗಿದ್ದೆಯಾ? ನೀನಿನ್ನೂ ಚಿಕ್ಕವಳು.

ಕಮಲ—ನಮ್ಮ ಮಾವನ ಮನೆಯ ಆಳು ಬಂದಿದ್ದ.

ಕ್ಷೇಮ—ನಿನ್ನನ್ನು ವಿಚಾರಿಸಲು ನಿಮ್ಮತ್ತೆ ಕಳುಹಿಸಿರಬಹುದು. ಅವನಿಲ್ಲಿಯೇ ಇದ್ದರೆ ನಿನಗೂ ಸಹಾಯವಾಗುತ್ತೆ. ಕರೆ, ನೋಡೋಣ.

ಉಮೇಶ ಹಲ್ಲು ಕಿರಿಯುತ್ತಾ ಬಂದನು.

ಕ್ಷೇಮ—ಇಷ್ಟು ಸೊಗಸಾದ ಪಂಚೆ ನಿನಗೆಲ್ಲಿ ಸಿಕ್ಕಿತೋ?

ಉಮೇಶ—ಅಮ್ಮ ಕೊಟ್ಟರು.

ಕ್ಷೇಮಂಕರಿ ನಗುತ್ತಾ, "ನಿಮ್ಮತ್ತೆ ಕೊಟ್ಟಿರಬೇಕು."

ಉಮೇಶನೂ ಅಲ್ಲಿಯೇ ನಿಂತನು. ಅವನ ಸಹಾಯದಿಂದ ಕಮಲೆಯ ಕೆಲಸ ಬೇಗ ಮುಗಿಯಿತು. ನಳಿನಾಕ್ಷ ಮಲಗುವ ಕೋಣೆಯನ್ನು ಗುಡಿಸಿ ಹಾಸಿಗೆಯನ್ನು ಸರಿಪಡಿಸಿದಳು. ಮಾಸಿದ ಬಟ್ಟೆಗಳನ್ನು ಒಗೆದು ಮಡಿಸಿಟ್ಟಳು. ಒಂದು ಬೀರುವಿನ ಬಾಗಿಲನ್ನು ತೆಗೆದು ನೋಡಿದಳು. ಅಲ್ಲಿ ಎರಡು ಮರದ ಪಾದುಕೆಗಳು ಮಾತ್ರ ಇದ್ದುವು. ಕಮಲೆ ಅವುಗಳನ್ನು ಕಣ್ಣಿಗೊತ್ತಿಕೊಂಡು ಸೀರೆಯಿಂದ ಒರೆಸಿದಳು.

ಮಧ್ಯಾಹ್ನ ಕಮಲೆ ಕ್ಷೇಮಂಕರಿಯ ಕಾಲುಗಳನ್ನೊತ್ತುತ್ತಿರಲು ಹೇಮನಳಿನಿ ಬಂದು ಮುದುಕಿಗೆ ನಮಸ್ಕರಿಸಿದಳು.

ಕ್ಷೇಮಂಕರಿ ಎದ್ದು, "ಬಾಮ್ಮ ಹೇಮ. ಆನಂದಬಾಬು ಸ್ವಸ್ಥವಾಗಿದ್ದಾರೆ ತಾನೆ," ಎಂದಳು.

ಹೇಮ—ನಿನ್ನೆ ಚನ್ನಾಗಿರಲಿಲ್ಲ. ಅದರಿಂದಲೇ ನಾನು ಬರಲಾಗ

ಲಿಲ್ಲ. ಈವತ್ತು ವಾಸಿ.

ಕ್ಷೇಮಂಕರಿ ಕಮಲೆಯನ್ನು ಗುರುತು ಮಾಡಿಸುತ್ತಾ "ನಾನು ಚಿಕ್ಕವಳಾಗಿದ್ದಾಗ ನಮ್ಮ ತಾಯಿ ಸತ್ತು ಹೋದಳು. ತಟ್ಟನೆ ತಿರುಗಿ ಬದುಕಿ ನಿನ್ನೆ ರಸ್ತೆಯಲ್ಲಿ ಸಿಕ್ಕಿದಳು. ನಮ್ಮ ತಾಯಿಯ ಹೆಸರು ಹರಿಭಗಿನಿ; ಈಗ ಹರಿದಾಸಿಯಾಗಿದ್ದಾಳೆ. ಇಷ್ಟು ಮುದ್ದಾದ ಹುಡುಗಿಯನ್ನು ಎಲ್ಲಾದರೂ ನೋಡಿದ್ದೀಯಾ ಹೇಮಾ? ಎಂದಳು.

ಕಮಲೆ ನಾಚಿಕೆಯಿಂದ ತಲೆ ತಗ್ಗಿಸಿದಳು.

ಹೇಮ—ನೀವು ಹೇಗಿದ್ದೀರಿ?

ಕ್ಷೇಮ—ಮುದುಕಿಯರನ್ನು ಹಾಗೆ ವಿಚಾರಿಸಬಾರದು. ಬದುಕಿದ್ದರೆ ಆಸೇ ಹೆಚ್ಚು! ಆದರೆ ನಿನಗೊಂದು ಮಾತು ಹೇಳಬೇಕಾಗಿದೆ. ನಾನು ಚಿಕ್ಕವಳಾಗಿದ್ದಾಗ ಮದುವೆಯ ಮಾತೆತ್ತಿದರೆ ನಾಚಿಕೆಯಿಂದ ಸಾಯುತ್ತಿದ್ದೆ. ನೀವು ಹಾಗೆ ಬೆಳೆದಿಲ್ಲ. ನಿಮ್ಮ ತಂದೆ ನಾನು ಹೇಳಿದ ವಿಚಾರ ತಿಳಿಸಿದರೇ?

ಹೇಮ (ತಲೆತಗ್ಗಿಸಿ)—ಹೇಳಿದರು.

ಕ್ಷೇಮ—ನೀನು ಒಪ್ಪಲಿಲ್ಲವೇನೋ? ಒಪ್ಪಿದ್ದರೆ ನಿಮ್ಮ ತಂದೆ ನನಗೆ ತಿಳಿಸುತ್ತಿದ್ದರು. ನಳಿನ ಸನ್ಯಾಸಿಯಂತಿರುವುದನ್ನು ನೋಡಿ ನಿನಗೆ ಬೇಸರವಿರಬಹುದು. ಆದರೆ ಪ್ರೀತಿಸುವ ಶಕ್ತಿ ಅವನಲ್ಲಿದೆ. ನನ್ನ ಮಾತು ನಂಬು. ಹೊರಗೆ ತೋರಿಸದಿದ್ದರೂ ಅವನ ಹೃದಯ ಬಹಳ ಮೃದು. ಹೇಮಾ, ನೀನು ಹುಡುಗಿಯಲ್ಲ. ಓದಿದ್ದೀ. ನೀನು ಈ ಮನೆ ಸೇರಿದರೆ ನನಗೆ ತೃಪ್ತಿ. ನಾನು ಬದುಕಿರುವಾಗ ಅವನ ಮದುವೆಯಾಗಲಿ. ನಳಿನನನ್ನು ಏಕೆ ಬೇಡವೆನ್ನುತ್ತೀ?

ಹೇಮ—ನಾನು ಆತನಿಗೆ ತಕ್ಕ ಹೆಂಡತಿಯೆ?

ಕ್ಷೇಮಂಕರಿ ಹೇಮನಳಿನಿಯನ್ನಪ್ಪಿಕೊಂಡು ಸುಮ್ಮನಾದಳು.

"ಹರಿದಾಸಿ" ಎಂದು ಸುತ್ತಲೂ ನೋಡಲು ಕಮಲೆ ಸದ್ದಿಲ್ಲದೆ ಹೊರಟು ಹೋಗಿದ್ದಳು. ಹೇಮನಳಿನಿ ಎದ್ದು, "ನಮ್ಮ ತಂದೆಗೆ ಸ್ವಸ್ಥವಿಲ್ಲ. ನಾನು ಬರುತ್ತೇನೆ" ಎಂದಳು.

ಕ್ಷೇಮ—ಹೋಗಿ ಬಾಮ್ಮಾ.

ಅವಳು ಹೋದ ಮೇಲೆ ಕ್ಷೇಮಂಕರಿ ನಳಿನಾಕ್ಷನನ್ನು ಕೂಗಿ, "ನಳಿನ ಇನ್ನು ನಿಧಾನ ಮಾಡಕೂಡದು" ಎಂದಳು

ನಳಿನ—ಏನನ್ನು?

ಕ್ಷೇಮ—ಹೇಮ ಒಪ್ಪಿದಾಳೆ. ನೀನು ಬದಲಾಡಕೂಡದು ನಿನಗೆ ಮದುವೆ ಗೊತ್ತಾಗುವವರೆಗೂ ನನಗೆ ಸಮಾಧಾನವಿಲ್ಲ. ಈ ಆಲೋಚನೆಯಲ್ಲಿ ನನಗೆ ರಾತ್ರಿಯೆಲ್ಲ ನಿದ್ರೆಯಿಲ್ಲ

ನಳಿನ—ನೀನು ಹೇಳಿದಂತೆ ಆಗಲಮ್ಮಾ ಚಿಂತಿಸಬೇಡ

ಕ್ಷೇಮಂಕರಿ ಪರಿದಾಸಿಯನ್ನು ಕರೆದಳು. ಕೋಣೆಯಲ್ಲಿ ಸ್ವಲ್ಪ ಸ್ವಲ್ಪ ಕತ್ತಲಾಗುತ್ತಿತ್ತು. "ಈ ಹೂಗಳನ್ನು ನೀರಿನಲ್ಲಿಡು"

ಕಮಲೆ ಕೆಲವನ್ನು ನಳಿನಾಕ್ಷನ ಮೇಜಿನ ಮೇಲೂ, ಕೆಲವನ್ನು ಮಲಗುವ ಮನೆಯಲ್ಲೂ ಇಟ್ಟು, ಮಿಕ್ಕುವುಗಳನ್ನು ಬೀರುವಿನಲ್ಲಿದ್ದ ಪಾದುಕೆಗಳ ಮೇಲಿಟ್ಟು ನಮಸ್ಕರಿಸಿದಳು ಅವೇ ತನಗೆ ದಿಕ್ಕೆಂದೂ, ಕೆಲವು ದಿನಗಳ ಮೇಲೆ ಅವುಗಳ ಪೂಜೆಯ ಹಕ್ಕನ್ನೂ ಕಳೆದುಕೊಳ್ಳುವೆನೆಂದೂ ನೆನೆದು ಅತ್ತಳು.

ಇದ್ದಕ್ಕಿದ್ದಂತೆ ಹೆಜ್ಜೆಗಳ ಸದ್ದಾಯಿತು. ಬೀರುವಿನ ಬಾಗಿಲನ್ನು ಬೇಗ ಮುಚ್ಚಿ ತಿರುಗಿ ನೋಡಿದರೆ ನಳಿನಾಕ್ಷ! ಓಡಿಹೋಗಲು ಅವಕಾಶ ವಿರಲಿಲ್ಲ. ಅಂಧಕಾರದಲ್ಲಿ ಕರಗಿಹೋಗಬಹುದೇ ಎನ್ನಿಸಿತು. ನಳಿನಾಕ್ಷ ಕಮಲೆಯನ್ನು ನೋಡಿ ಹೊರಟುಹೋದನು. ಕೂಡಲೇ ಅವಳೂ ಹೊರಟು ಹೋಗಲು, ನಳಿನಾಕ್ಷ ಹಿಂದಿರುಗಿ ಅವಳೇನು ಮಾಡುತ್ತಿದ್ದಳೋ ಎಂಬ ಕುತೂಹಲದಿಂದ ಬೀರುವಿನ ಬಾಗಿಲನ್ನು ತೆಗೆದನು. ತನ್ನ ಪಾದುಕೆಗಳು ಹೂಗಳಿಂದ ಮುಚ್ಚಲ್ಪಟ್ಟಿರುವುದನ್ನು ನೋಡಿ ಬಾಗಿಲನ್ನು ಹಾಗೆಯೇ ಮುಚ್ಚಿ ಕಿಟಕಿಯ ಬಳಿ ಹೋಗಿ ನಿಂತನು. ನೋಡುತ್ತಿರುವಾಗಲೇ ಅಂಧಕಾರ ಸೂರ್ಯಕಿರಣಗಳನ್ನು ನುಂಗಿಬಿಟ್ಟಿತು.

## ಅಧ್ಯಾಯ ೫೬

ಮದುವೆ ಗೊತ್ತಾದಮೇಲೆ ತಾನು ಅದೃಷ್ಟಶಾಲಿನಿಯೆಂದು ತಿಳಿಯಲು ಹೇಮನಳಿನಿ ಪ್ರಯತ್ನಿಸಿದಳು. ತಿರುತಿರುಗಿ, "ನನ್ನ ಜೀವನವನ್ನು ಮುಸುಕಿದ್ದ ಮೋಡಗಳು ಚದುರಿದುವು. ನನಗೂ ರಮೇಶನಿಗೂ ಸಂಬಂಧವಿಲ್ಲ" ಎಂದು ಹೇಳಿಕೊಂಡಳು ಜೀವನದ ಒಂದು ಪ್ರಕರಣ ಮುಗಿಯಿತೆಂದು ಶಾಂತಳಾದಳು.

ಸಂಜೆ ಮನೆಗೆ ಹೋಗಿ, "ಅಮ್ಮನಿದ್ದಿದ್ದರೆ ಎಷ್ಟು ಆನಂದಿಸುತ್ತಿದ್ದಳೋ! ತಂದೆಗೆ ಹೇಗೆ ಹೇಳುವುದು?" ಎಂದುಕೊಂಡಳು.

ಆ ರಾತ್ರಿ ಆನಂದಬಾಬು ಆಯಾಸವೆಂದು ಬೇಗ ಮಲಗಿದನು. ಹೇಮನಳಿನಿಯೂ ಕೋಣೆಗೆ ಹೋಗಿ ತನ್ನ ಅನುಭವಗಳನ್ನು ಬರೆಯಲು ಆರಂಭಿಸಿದಳು. "ಪಾಶಗಳನ್ನೆಲ್ಲಾ ಹರಿದು ಲೋಕವ್ಯವಹಾರವನ್ನು ಬಿಟ್ಟಿದ್ದೆ. ದೇವನು ಪುನರ್ಜನ್ಮವನ್ನು ಕೊಡುವನೆಂದು ತಿಳಿದಿರಲಿಲ್ಲ. ಯೋಗ್ಯತೆಗೆ ಮೀರಿದ ವರವನ್ನು ಕೊಟ್ಟಿದ್ದಾನೆ. ಅದನ್ನು ಸದಾಕಾಲವೂ ಇಟ್ಟುಕೊಳ್ಳುವ ಶಕ್ತಿಯನ್ನು ಕೊಡಲಿ."

ಪುಸ್ತಕವನ್ನು ಮುಚ್ಚಿ ರಾತ್ರಿ ಬಹಳ ಹೊತ್ತಿನವರೆಗೂ ತೋಟದಲ್ಲಿ ತಿರುಗುತ್ತಿದ್ದಳು. ನಕ್ಷತ್ರಾವೃತವಾದ ಅನಂತಾಕಾಶ ಅವಳ ನೊಂದ ಜೀವಕ್ಕೆ ಶಾಂತಿಸಂದೇಶವನ್ನು ಸುರಿತು.

ಮಾರನೆಯ ಮಧ್ಯಾಹ್ನ ಆನಂದಬಾಬು ಹೇಮನಳಿನಿಯೊಡನೆ ನಳಿನಾಕ್ಷನ ಮನೆಗೆ ಹೊರಡುತ್ತಿರಲು ಕ್ಷೇಮಂಕರಿಯೇ ಬಂದಳು. ಆನಂದಬಾಬು ಎದುರುಗೊಂಡು ಕರೆತಂದನು.

"ನಿಮ್ಮ ಮಗಳನ್ನು ಆಶೀರ್ವದಿಸಲು ಬಂದೆ."

ಆನಂದಬಾಬು ಹೇಮನಳಿನಿಯನ್ನು ಕರೆತರಲು ಹೋದನು. ಅವಳೂ ಜಾಗ್ರತೆಯಾಗಿ ಬಂದಳು.

"ದೀರ್ಘಾಯುಷಿಯಾಗು. ಕೈಹಿಡಿ," ಎಂದು, ಭಾರವಾದ ಚಿನ್ನದ ಬಳೆಗಳನ್ನು ಹುಡುಗಿಯ ಕೈಗಳಿಗೆ ಹಾಕಿದಳು. ಹೇಮನಳಿನಿ ಪುನಃ ನಮಸ್ಕರಿಸಲು ಅವಳನ್ನೆತ್ತಿ ಮುದ್ದಿಸಿದಳು. ಮುದುಕಿಯ ವಿಶ್ವಾಸ

ಹೇಮನಳಿನಿಗೆ ಬಹಳ ಸಂತೋಷವನ್ನುಂಟುಮಾಡಿತು.

ಕ್ಷೇಮ—ನೀವಿಬ್ಬರೂ ನಾಳೆ ನಮ್ಮ ಮನೆಗೆ ಊಟಕ್ಕೆ ಬರಬೇಕು.

ಮಾರನೆಯ ದಿನ ತಂದೆಮಗಳಿಬ್ಬರೂ ತೋಟದಲ್ಲಿ ಕುಳಿತು ಚಹಾ ಕುಡಿಯುತ್ತಿದ್ದರು. ಹೇಮನಳಿನಿ ಮದುವೆಯಾಗುವ ಸಂತೋಷ ಮುದುಕನ ಮುಖದಲ್ಲಿ ಕಾಣುತ್ತಿತ್ತು. ಆಗಾಗ ಅವಳ ಮುಖವನ್ನು ದೃಷ್ಟಿಸಿ ನೋಡಿ ಸತ್ತ ತನ್ನ ಹೆಂಡತಿಯ ಪವಿತ್ರಾತ್ಮ ಅವಳ ಆನಂದಕ್ಕೆ ಸ್ವಲ್ಪ ದುಃಖವನ್ನೂ ಬೆರಸಿತ್ತೆಂದು ಭಾವಿಸಿದನು. ಕ್ಷೇಮಂಕರಿಯ ಮನೆಗೆ ಹೋಗಲು ಹೊತ್ತಾಯಿತೆಂದು ಆನಂದಬಾಬು ಅವಸರಪಡಿಸಲಾರಂಭಿಸಿದನು. ಹೇಮನಳಿನಿ ಹೊತ್ತಿದೆಯೆಂದು ಹೇಳಿದರೂ ಸಮಾಧಾನವಾಗಲಿಲ್ಲ.

ಅಷ್ಟರಲ್ಲಿ ಸಾಮಾನು ತುಂಬಿದ ಗಾಡಿಯೊಂದು ಬಾಗಿಲಲ್ಲಿ ಬಂದು ನಿಂತಿತು.

"ಜೋಗೇಂದ್ರ ಬಂದ," ಎಂದು ಹೇಮನಳಿನಿ ಬಾಗಿಲಿಗೆ ಓಡಿದಳು. ಜೋಗೇಂದ್ರನ ಮುಖ ಆನಂದದಿಂದ ತುಂಬಿತ್ತು.

ಹೇಮ—ಬೇರೆ ಯಾರಾದರೂ ಬಂದಿದ್ದಾರೆಯೆ?

ಜೋಗೇಂ—ತಂದೆಗೆ ಇಷ್ಟವಾದವರನ್ನು ಕರೆತಂದಿದ್ದೇನೆ.

ರಮೇಶ ಗಾಡಿಯಿಂದಿಳಿದನು ಅವನನ್ನು ನೋಡುತ್ತಲೇ ಹೇಮನಳಿನಿ ಒಳಕ್ಕೆ ಹೊರಟು ಹೋದಳು.

"ಜೋಗೇಂ—ಹೋಗಬೇಡ ಹೇಮಾ! ನಿನಗೆ ಹೇಳಬೇಕಾದ್ದ ಸುದ್ದಿಯಿದೆ.

ಅವಳು ಕೇಳಿಯೂ ಕೇಳದಂತೆ ಹೋಗಲು, ರಮೇಶ ಗಾಬರಿಯಿಂದ ನಿಂತನು

ಜೋಗೇಂದ್ರ—"ಬಾ ರಮೇಶ, ತಂದೆಯವರಿದ್ದಾರೆ" ಎಂದು ಅವನ ಕೈಹಿಡಿದು ಆನಂದಬಾಬುವಿನ ಬಳಿಗೆ ಕರೆದುಕೊಂಡು ಹೋದನು

ಆನಂದಬಾಬು ತನ್ನ ಕಣ್ಣನ್ನೇ ನಂಬಲಾರದಾದನು. ತಲೆಯನ್ನು ಜ್ಜುತ್ತಾ "ಮದುವೆಗೆ ಇದೊಂದು ವಿಘ್ನ," ಎಂದುಕೊಂಡನು.

ರಮೇಶ ನಮಸ್ಕರಿಸಿದನು. ಕುರ್ಚಿಯ ಮೇಲೆ ಕುಳ್ಳಿರುವಂತೆ ಹೇಳಿ ಆನಂದಬಾಬು ಜೋಗೇಂದ್ರನನ್ನು ನೋಡಿ, "ಒಳ್ಳೆಯ ಸಮಯಕ್ಕೇ ಬಂದೆ ನಾನೇ ತಂತಿಕೊಟ್ಟು ಕರೆಸಬೇಕೆಂದಿದ್ದೆ," ಎಂದನು.

ಜೋಗೇಂ—ಏಕೆ ?

ಆನಂದ—ಹೇಮನಳಿನಿಗೂ ನಳಿನಾಕ್ಷನಿಗೂ ಮದುವೆ ಗೊತ್ತಾಗಿದೆ. ಅವರ ತಾಯಿ ನಿನ್ನೆ ಬಂದು ಆಶೀರ್ವದಿಸಿದರು.

ಜೋಗೇಂ—ನನಗೆ ಮೊದಲೇ ಏಕೆ ಹೇಳಲಿಲ್ಲ ? ಖಂಡಿತವಾಗಿ ಗೊತ್ತಾಯಿತೆ ?

ಆನಂದ—ನಿನ್ನ ಅಭಿಪ್ರಾಯವೇ ತಿಳಿಯುವುದಿಲ್ಲ ನನಗೆ ನಳಿನಾಕ್ಷ ಗುರುತಾಗುವ ಮೊದಲೇ ನೀನು ಈ ಮದುವೆ ನಿಷ್ಕರ್ಷಿಸಿದ್ದೆಯಲ್ಲವೆ ?

ಜೋಗೇಂ—ಅದು ಹಾಗಿರಲಿ. ಇನ್ನೂ ಕಾರ್ಯ ಮಿಂಚಿಹೋಗಿಲ್ಲ. ನನ್ನ ಮಾತು ಕೇಳಿ ಅನಂತರ ನಿಮ್ಮಿಷ್ಟದಂತೆ ನಡೆಯಬಹುದು.

ಆನಂದ—ಈಗ ಹೊತ್ತಿಲ್ಲ, ನಾನು ಹೋಗಬೇಕು.

ಜೋಗೇಂ—ಎಲ್ಲಿಗೆ ?

ಆನಂದ—ನಳಿನಾಕ್ಷನ ತಾಯಿ ಊಟಕ್ಕೆ ಕರೆದಿದ್ದಾರೆ. ನೀವಿಬ್ಬರೂ ಇಲ್ಲೇ ಊಟಮಾಡಿ.

ಜೋಗೇಂ—ನನಗಾಗಿ ತೊಂದರೆ ಪಡಬೇಡಿ. ಎಲ್ಲಾದರೂ ಹೊಟಲಿನಲ್ಲಿ ತಿನ್ನುತ್ತೇವೆ ಸಾಯಂಕಾಲ ನೀವು ಬರುವ ವೇಳೆಗೆ ಬರುತ್ತೇವೆ.

ಆನಂದಬಾಬು ರಮೇಶನನ್ನು ಮಾತನಾಡಿಸಲಾರದೆ ಹೋದನು. ರಮೇಶನೂ ಮಾತಿಲ್ಲದೆ ಎದ್ದು ನಮಸ್ಕರಿಸಿ ಹೊರಟು ಹೋದನು.

## ಅಧ್ಯಾಯ ೫೭

ಹಿಂದಿನ ದಿನ ಕ್ಷೇಮಂಕರಿ ಕಮಲೆಯೊಡನೆ "ನಾಳೆ ಹೇಮನಳಿನಿ, ಅವಳ ತಂದೆ, ಊಟಕ್ಕೆ ಬರುತ್ತಾರೆ. ಏನು ಅಡಿಗೆ ಮಾಡೋಣ? ಮಗಳಿಗೆ ಊಟಕ್ಕೆ ತೊಂದರೆಯಿಲ್ಲವೆಂಬ ಧೈರ್ಯ ಆನಂದಬಾಬುವಿಗೆ ಬರಬೇಕು, ಅಲ್ಲವೆ ? ಆದರೆ ನಿನ್ನ ಅಡಿಗೆಯಾದುದರಿಂದ ಏನೂ ಭಯ

ವಿಲ್ಲ. ಎಂದೂ ಮಾತನಾಡದ ನನ್ನ ಮಗನೂ ನಿನ್ನ ಅಡುಗೆಯನ್ನು ಮೆಚ್ಚುತ್ತಾನೆ. ಏನೋ ಸಪ್ಪೆಯಾಗಿರುವೆಯಲ್ಲ? ಸ್ವಸ್ಥವಾಗಿರುವೆ ತಾನೆ?" ಎಂದಳು.

ಕಮಲೆ ಕಷ್ಟದಿಂದ ನಕ್ಕು "ನನಗೇನೂ ಇಲ್ಲಮ್ಮಾ," ಎಂದಳು.

ಕ್ಷೇಮಂಕರಿ ನಂಬದೆ, "ಏನೋ ಯೋಚನೆಯಲ್ಲಿದ್ದೀ. ಭಯ ಪಡದೆ ಹೇಳು. ನಾನೇನು ಹೊಸಬಳೆ? ನೀನು ನನ್ನ ಮಗಳ ಹಾಗೆ. ಇಲ್ಲಿ ನಿನಗೇನಾದರೂ ಸರಿಬೀಳದಿದ್ದರೆ ಹೇಳು. ಅಥವಾ ನಿಮ್ಮ ಮನೆಗೆ ಹೋಗ ಬೇಕೆನ್ನಿಸಿದೆಯೋ?"

ಕಮಲ—ನನಗೇನೂ ಬೇಡಮ್ಮಾ. ನಿಮ್ಮ ಸೇವೆಯೊಂದಿದ್ದರೆ ಸಾಕು

ಕ್ಷೇಮಂಕರಿ ಕೇಳಿಸದಂತೆ, "ಸ್ವಲ್ಪ ದಿನ ಬೇಕಾದರೆ ನಿಮ್ಮ ಮಾವನ ಮನೆಗೆ ಹೋಗಿ ಬಾ" ಎಂದಳು.

ಕಮಲ—ನಿಮ್ಮೊಡನಿದ್ದರೆ ನನಗೆಲ್ಲಿಯೂ ಹೋಗಬೇಕೆನ್ನಿಸು ವುದಿಲ್ಲ. ತಪ್ಪುಮಾಡಿದರೆ ಶಿಕ್ಷಿಸಿ, ನನ್ನನ್ನೆಲ್ಲಿಗೂ ಕಳುಹಿಸಬೇಡಿ.

ಕ್ಷೇಮಂಕರಿ ಅವಳ ಕೆನ್ನೆಯನ್ನು ಸವರುತ್ತಾ, "ಆದರಿಂದಲೇ ನೀನು ಪೂರ್ವ ಜನ್ಮದಲ್ಲಿ ನಮ್ಮ ತಾಯಿಯಾಗಿದ್ದಿರಬಹುದು ಎನ್ನು ವುದು. ಇಲ್ಲದಿದ್ದರೆ ಈ ವಿಶ್ವಾಸವೆಲ್ಲಿಂದ ಬರಬೇಕು? ಬೇಗ ಹೋಗಿ ಮಲಗು. ದಿನವೆಲ್ಲಾ ನಿನಗೆ ವಿಶ್ರಾಂತಿಯಿಲ್ಲ."

ಕಮಲೆ ತನ್ನ ಕೊಠಡಿಯ ಬಾಗಿಲನ್ನು ಹಾಕಿ ದೀಪವನ್ನಾರಿಸಿ ಚಿಂತಿಸತೊಡಗಿದಳು. "ಆತನ ಸೇವಾಭಾಗ್ಯವನ್ನು ವಿಧಿ ನನಗೆ ಕೊಡಲಿಲ್ಲ. ಆತನು ನನ್ನವನಲ್ಲ. ಆಗಾಗ ಅಲ್ಪ ಸ್ವಲ್ಪ ಸೇವೆ ದೊರಕಿದರ ಅದೇ ಪುಣ್ಯ. ಸಂತೋಷದಿಂದ ಅದನ್ನು ಮಾಡುವ ಶಕ್ತಿಯನ್ನು ದೇವರು ಕೊಡಲಿ. ನಾಳೆಯಿಂದ ದುಃಖವನ್ನು ದೂರಮಾಡುತ್ತೇನೆ. ನಿಲುಕದು ದಕ್ಕೆ ಆಸೆಪಟ್ಟು ಪ್ರಯೋಜನವಿಲ್ಲ. ಸೇವೆಯಲ್ಲಿ ತೃಪ್ತಿಪಡುತ್ತೇನೆ" ಎಂದು ನಿರ್ಧರಿಸಿದಳು. ಸ್ವಲ್ಪ ಹೊರಳಾಡಿ ನಿದ್ರೆ ಹೋದಳು. ರಾತ್ರಿ ಎಚ್ಚರವಾದಾಗಲೆಲ್ಲಾ "ಹೆಚ್ಚಾಗಿ ಏನನ್ನೂ ಕೇಳುವುದಿಲ್ಲ," ಎಂದು ಕೊಂಡಳು. ಬೆಳಗ್ಗೆ ಎದ್ದಾಗ ಕೈಜೋಡಿಸಿಕೊಂಡು "ಸಾಯುವವರೆಗೂ

ನಿನ್ನ ಸೇವೆಯಲ್ಲಿ ತೃಪ್ತಿಹೊಂದುತ್ತೇನೆ," ಎಂದುಕೊಂಡಳು. ಬೇಗ ಮುಖ ತೊಳೆದು, ನಳಿನಾಕ್ಷನ ಕೋಣೆಯನ್ನು ಗುಡಿಸಿ ಚೊಕ್ಕಟವಮಾಡಿ ಗಂಗೆಯ ಸ್ನಾನಕ್ಕಾಗಿ ಹೊರಟಳು.

ನಳಿನಾಕ್ಷ ಬಹಳ ಹೇಳಿದಮೇಲೆ ಕ್ಷೇಮಂಕರಿ ಸೂರ್ಯೋದಯದ ಮೊದಲೇ ಸ್ನಾನಮಾಡುವುದನ್ನು ಬಿಟ್ಟಿದ್ದಳು. ಆದುದರಿಂದ ಕಮಲೆ ಯೊಡನೆ ಉಮೇಶ ಹೋದನು. ಹಿಂದಿರುಗಿ ಬಂದವಳು ಕ್ಷೇಮಂಕರಿಗೆ ನಮಸ್ಕರಿಸಿದಳು. ಆಕೆ ಸ್ನಾನಕ್ಕೆ ಹೊರಡಲು ಸಿದ್ಧವಾಗಿದ್ದಳು. "ಅಷ್ಟು ಬೇಗ ಏಕೆ ಹೋದೆ? ನನ್ನೊಡನೆ ಬರಬಹುದಾಗಿತ್ತು" ಎಂದಳು.

ಕಮಲ—ಕಾದಿರಲು ಹೊತ್ತಿರಲಿಲ್ಲ. ಬಹಳ ಕೆಲಸವಿದೆ. ತರಕಾರಿ ಬಿಡಿಸಬೇಕು. ಇನ್ನೂ ಉಮೇಶನನ್ನು ಪೇಟೆಗೆ ಕಳುಹಿಸಬೇಕು.

ಕ್ಷೇಮ—ನಿನಗೆ ಎಲ್ಲಾ ಜ್ಞಾಪಕವಿರುತ್ತೆ. ಊಟಕ್ಕೆ ಬರುವ ವೇಳೆಗೆ ಅಡಿಗೆ ಸಿದ್ಧಮಾಡಿರುತ್ತೀ.

ನಳಿನಾಕ್ಷ ಹೊರಗೆ ಬರಲು ಕಮಲೆ ಸೆರಗನ್ನೆಳೆದುಕೊಂಡು ಒಳಗೆ ಹೋದಳು.

ನಳಿನ—ಸ್ನಾನಕ್ಕೆ ಹೊರಟುಬಿಟ್ಟೆಯಾ? ಸ್ವಲ್ಪ ಶಕ್ತಿ ಬರುವ ವರೆಗೂ ತಡೆಯಬಾರದೆ?

ಕ್ಷೇಮ—ನೀನು ವೈದ್ಯನೆಂಬುದನ್ನು ಮರೆಯಬಾರದೆ? ಗಂಗೆಯಲ್ಲಿ ಸ್ನಾನಮಾಡಿದರೆ ಮೋಕ್ಷ ಸಿಕ್ಕುತ್ತೆ. ಈದಿನ ಹೊರಗೆ ಹೋದರೆ ಮನೆಗೆ ಬೇಗ ಬಾ.

"ಏಕಮ್ಮಾ ?"

ಕ್ಷೇಮ—ನಿನ್ನೆ ಹೇಳಲು ಮರೆತೆ. ಆನಂದಬಾಬು ನಿನ್ನನ್ನು ಆಶೀರ್ವದಿಸಲು ಬರುತ್ತಾರೆ.

ನಳಿನ—ತಟಕ್ಕನ ಅಷ್ಟೇನು ವಿಶ್ವಾಸ? ದಿನವೂ ನೋಡುತ್ತಿರು ತ್ತೇನಲ್ಲಾ!

ಕ್ಷೇಮ—"ನಿನ್ನೆ ನಾನು ಹೇಮನಳಿನಿಗೆ ಬಳೆಕೊಟ್ಟು ಆಶೀರ್ವದಿಸಿ ಬಂದೆ. ಈದಿನ ಆನಂದಬಾಬುವಿನ ಸರದಿ. ಹೊತ್ತುಮಾಡಬೇಡ. ಅವರು ಊಟಕ್ಕೆ ಬರುತ್ತಾರೆ." ಎಂದು ಹೇಳಿ ಸ್ನಾನಕ್ಕೆ ಹೊರಟು ಹೋದಳು.

ನಳಿನಾಕ್ಷ ತಲೆ ತಗ್ಗಿಸಿ ಚಿಂತಿಸುತ್ತಾ ಹೊರಗೆ ಹೋದನು.

## ಅಧ್ಯಾಯ ೫೮

ರಮೇಶನನ್ನು ನೋಡಿ ಓಡಿದ ಹೇಮನಳಿನಿ ಕೊಠಡಿಯ ಬಾಗಿಲನ್ನು ಮುಚ್ಚಿಕೊಂಡು ಕುಳಿತಳು. ಗಾಬರಿ ಕಡಮೆಯಾದಮೇಲೆ ತನ್ನ ನಡತೆಯನ್ನು ನೆನೆದು ನಾಚಿಕೊಂಡಳು "ನಾನೇಕೆ ಹೀಗಾಡಿದೆ? ನನ್ನ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವ ಶಕ್ತಿ ನನಗಿಲ್ಲವೆ?" ಎಂದುಕೊಂಡು ಪುನಃ ರಮೇಶನನ್ನು ನೋಡಲು ಎದ್ದಳು. ಕ್ಷೇಮಂಕರಿ ಕೊಟ್ಟಿದ್ದ ಬಳೆಗಳನ್ನು ತೊಟ್ಟುಕೊಂಡು ಧೈರ್ಯವಾಗಿ ತೋಟಕ್ಕೆ ಹೋದಳು.

ಅವಳ ತಂದೆ "ಎಲ್ಲಿಗೆ ಹೊರಟೆ ಹೇಮಾ ?" ಎಂದರು.

"ರಮೇಶಬಾಬು ಇಲ್ಲವೆ ? ಜೋಗೇಂದ್ರನೆಲ್ಲಿ ?"

"ಹೊರಟು ಹೋದರು."

ಹೇಮನಳಿನಿಗೆ ಸಂತೋಷವೇ ಆಯಿತು.

ಆನಂದ—ಈಗ . .

ಹೇಮ—ಹೋಗೋಣ. ಸ್ನಾನಮಾಡುತ್ತೇನೆ ಗಾಡಿಗೆ ಹೇಳಿ ಕಳುಹಿಸು.

ಹೇಮನಳಿನಿಯಲ್ಲಾದ ಬದಲಾವಣೆ, ಕ್ಷೇಮಂಕರಿಯ ಮನೆಗೆ ಹೋಗಲು ಅವಳು ತೋರಿದ ಆತುರ ಆನಂದಬಾಬುವಿನ ಶಂಕೆಯನ್ನು ಹೆಚ್ಚಿಸಿದುವು.

ಹೇಮನಳಿನಿ ಬೇಗ ಸ್ನಾನಮಾಡಿ, ಗಾಡಿ ಬರುವವರೆಗೂ ತೋಟದಲ್ಲಿ ಸುತ್ತುತ್ತಿದ್ದಳು. ನಳಿನಾಕ್ಷನ ಮನೆ ಸೇರುವ ವೇಳೆಗೆ ಹತ್ತೂವರೆ ಘಂಟೆ ಮಾತ್ರವಾಗಿತ್ತು. ನಳಿನಾಕ್ಷ ಹಿಂತಿರುಗಿರಲಿಲ್ಲವಾದುದರಿಂದ ಕ್ಷೇಮಂಕರಿಯೇ ಮಾತನಾಡುತ್ತ ಕುಳಿತಳು ಆನಂದಬಾಬುವಿನ ಯೋಗಕ್ಷೇಮವನ್ನು ವಿಚಾರಿಸಿದಳು. ಹುಡುಗಿ ಸಪ್ಪೆಯಾಗಿದ್ದುದನ್ನು ನೋಡಿ ಚಿಂತೆಗೀಡಾದಳು. ಇಂತಹ ಸುಖ ಕೈಸೇರುತ್ತಿರುವಾಗ ಅವಳ ಮುಖ ಅರುಣೋದಯದಂತೆ ಬೆಳಗುತ್ತಿರಬೇಡವೆ? ದುಃಖದ ಕಾರ್ಮೋಡಗಳಿಂದ ತುಂಬಿರುವುದೇಕೆ ?

ಹೇಮನಳಿನಿಯ ದುಃಖದ ಮುಖವನ್ನು ನೋಡಿ ಕ್ಷೇಮಂಕರಿಯ ಸಂತೋಷವೂ ಕಡಮೆಯಾಯಿತು "ನಳಿನನನ್ನು ಮದುವೆಯಾಗಲು ಅದೃಷ್ಟವಿರಬೇಕು. ಈ ಹುಡುಗಿಗೆ ತಾನು ವಿದ್ಯಾವತಿಯೆಂಬ ಹೆಮ್ಮೆ ತಲೆಗೇರಿದೆ, ಇಲ್ಲದಿದ್ದರೆ ಹೀಗೇಕಿರುತ್ತಿದ್ದಳು ? ತಪ್ಪು ನನ್ನದೇ, ಮುದುಕಿ ಯಾದುದರಿಂದ ಅವಸರಪಟ್ಟು, ದೊಡ್ಡ ಹುಡುಗಿಯನ್ನು ಗೊತ್ತು ಮಾಡಿದೆ. ಅವಳ ಗುಣ ಹೇಗೋ, ತಿಳಿದುಕೊಳ್ಳಲಿಲ್ಲ ನನಗೂ ವಯ ಸ್ಸಾಯಿತು," ಹೀಗೆ ಯೋಚಿಸುತ್ತಾ ಆನಂದಬಾಬುವಿನ ಮಾತುಗಳಕಡೆ ಗಮನವಿಲ್ಲದೆ ಇದ್ದಳು ಕೊನೆಗೆ, "ಮದುವೆಗೆ ಅವಸರವಿಲ್ಲ. ಇಬ್ಬರೂ ದೊಡ್ಡವರು. ಆಲೋಚಿಸಲಿ, ಬಲವಂತ ಮಾಡಬಾರದು. ಹೇಮಳ ಮನಸ್ಸಿನಲ್ಲಿ ಏನಿದೆಯೋ ತಿಳಿಯದು. ನಳಿನ ಇನ್ನೂ ಏನೂ ಹೇಳಿಲ್ಲ," ಎಂದು ಹೇಮನಳಿನಿಯನ್ನೇ ನೋಡುತ್ತಾ ಹೇಳಿದಳು. ತನ್ನ ಮಗ ಮದುವೆಗೆ ಆತುರನಾಗಿದ್ದಾನೆಂದು ಅವರು ತಿಳಿಯುವುದು ಮುದುಕಿಗೆ ಇಷ್ಟವಾಗಲಿಲ್ಲ.

ಹೇಮನಳಿನಿ ಆ ದಿನ ಹಸನ್ಮುಖಿಯಾಗಿರಬೇಕೆಂದು ನಿರ್ಧರಿಸಿ ಕೊಂಡು ಬಂದಿದ್ದರೂ ಸಾಧ್ಯವಾಗಲಿಲ್ಲ. ಕ್ಷೇಮಂಕರಿಯ ಮನೆಯನ್ನು ಪ್ರವೇಶಿಸಿದೊಡನೆ ತನ್ನ ಭವಿಷ್ಯಜ್ಜೀವನದ ಹಾದಿ ತೊಡಕಾಗಿ ಕೊನೆ ಮೊದಲಿಲ್ಲದುದಾಗಿ ತೋರಿ ಗಾಬರಿಯಾಯಿತು. ದೊಡ್ಡವರಿಬ್ಬರೂ ಮಾತನಾಡುತ್ತಿದ್ದಾಗ ತನ್ನ ಅನುಮಾನಗಳಲ್ಲಿ ಮುಳುಗಿದ್ದಳು ಕ್ಷೇಮಂ ಕರಿಯ ಮಾತನ್ನು ಕೇಳಿ ತನ್ನ ಮನಸ್ಸನ್ನೇ ತಿಳಿಯಲಾರದೆ ಹೋದಳು. ಮದುವೆ ನಡೆದುಹೋದರೆ ಅನುಮಾನಗಳು ಕೊನೆಗೆಂಡು ಶಾಂತಿ ದೊರಕ ಬಹುದು. ಆದರೆ ನಿಶ್ಚಯವಾಗದಿದ್ದರೆ ವಿಶ್ರಾಂತಿ ದೊರೆಯಬಹುದು.

ಕ್ಷೇಮಂಕರಿಗೆ ತನ್ನ ಮಾತುಕೇಳಿ ಹೇಮನಳಿನಿಗೆ ಸಂತೋಷ ವಾದಂತೆ ತೋರಿ ಕೋಪ ಬಂತು "ನಳಿನನನ್ನು ಅನ್ಯಾಯವಾಗಿ ಅಗ್ಗ ಮಾಡುತ್ತಿದ್ದೆ" ಎಂದುಕೊಂಡಳು.

"ನಳಿನಾಕ್ಷ ಯಾವಾಗಲೂ ಹೀಗೆಯೇ! ನೀವಿಬ್ಬರೂ ಬರುತ್ತೀ ರೆಂದು ತಿಳಿದೂ ಇನ್ನೂ ಬರಲಿಲ್ಲ. ಈ ದಿನವಾದರೂ ಕೆಲಸ ಕಡಮೆ ಮಾಡಬಾರದಾಗಿತ್ತೆ! ನನಗೆ ಸ್ವಸ್ಥವಿಲ್ಲದಿದ್ದರೆ ಮಾತ್ರ, ಏನು ನಷ್ಟ

ವಾದರೂ ಸರಿ, ಮನೆ ಬಿಟ್ಟು ಹೋಗುವುದಿಲ್ಲ" ಎಂದು ಅಡುಗೆ ಎಷ್ಟಾಗಿದೆಯೋ ನೋಡಲು ಒಳಗೆ ಹೋದಳು

ಕಮಲೆ ಅಡುಗೆ ಮಾಡಿ ಒಂದು ಮೂಲೆಯಲ್ಲಿ ಕುಳಿತಿದ್ದಳು. ಕ್ಷೇಮಂಕರಿಯನ್ನು ನೋಡಿ ಗಾಬರಿಯಿಂದ ಎದ್ದು, "ಅಡುಗೆ ಯಾಯಿತಮ್ಮಾ," ಎಂದಳು.

ಕ್ಷೇಮ—ಇಲ್ಲೇಕೆ ಕೂತಿದ್ದೀ? ಆನಂದಬಾಬು ಮುದುಕ ನಾಚಿಕೊಳ್ಳಬೇಕಾಗಿಲ್ಲ. ಹೇಮಳೊಡನೆ ಮಾತನಾಡು ಮುದುಕಿಯೊಡನೆ ಮಾತನಾಡಲು ಅವಳಿಗೆ ಬೇಸರವಾಗಬಹುದು. ಹೇಮನಳಿನಿಯ ಅಸಡ್ಡೆ ಮುದುಕಿಗೆ ಕಮಲೆಯಲ್ಲಿ ಪ್ರೇಮವನ್ನು ಹೆಚ್ಚಿಸಿತ್ತು.

ಕಮಲ—ಆಕೆ ಓದಿದವಳು. ನನಗೆ ಮಾತನಾಡಲು ಬರುವುದಿಲ್ಲ.

ಕ್ಷೇಮ—ನೀನು ಯಾರಿಗೂ ಕಡಮೆಯಲ್ಲ. ವಿದ್ಯಾವಂತರು ಯಾರೂ ನಿನ್ನಷ್ಟು ಚೆನ್ನಾಗಿಲ್ಲ. ಪುಸ್ತಕವನ್ನು ಯಾರು ಬೇಕಾದರೂ ಓದಬಹುದು. ನಿನ್ನ ಹಾಗೆ ವಿಶ್ವಾಸ ಕಲಿಯಲು ಸಾಧ್ಯವಿಲ್ಲ. ಬಾ, ಒಳ್ಳೆಯ ಸೀರೆಯನ್ನುಟ್ಟುಕೋ.

ಹೇಮನಳಿನಿಗಿಂತ ಚನ್ನಾಗಿ ಕಮಲೆಯನ್ನಲಂಕರಿಸಿ ಅವಳ ಹೆಮ್ಮೆ ಮುರಿಯಬೇಕೆಂದು ಮುದುಕಿ ನಿರ್ಧರಿಸಿದಳು. ಒಳ್ಳೆ ಸೀರೆಯನ್ನುಡಿಸಿ ತಲೆ ಬಾಚಿದಳು. ಮುತ್ತಿಟ್ಟು, "ನೀನು ಅರಮನೆಯಲ್ಲಿರಬೇಕಾದವಳು," ಎಂದಳು.

ಕಮಲೆ ಆಗಾಗ, "ಅಮ್ಮಾ ಹೊತ್ತಾಯಿತು. ಅವರಿಬ್ಬರೇ ಕುಳಿತಿದ್ದಾರೆ," ಎನ್ನುವಳು.

ಕ್ಷೇಮಂಕರಿ, "ಹೊತ್ತಾದರೂ ಚಿಂತೆಯಿಲ್ಲ. ನಿನಗೆ ಅಲಂಕಾರ ಮಾಡಿಯೇ ಹೋಗುತ್ತೇನೆ," ಎಂದಳು.

ಕಮಲೆಯ ಅಲಂಕಾರ ಮುಗಿದ ಮೇಲೆ, "ನನ್ನೊಡನೆ ಬಾ, ನಾಚಿಕೊಳ್ಳಬೇಡ. ಆ ವಿದ್ಯಾವತಿ ನಿನ್ನನ್ನು ನೋಡಿ ತಲೆತಗ್ಗಿಸಲಿ," ಎಂದು ಅವಳ ಕೈಹಿಡಿದು ಕರೆದುಕೊಂಡು ಹೋದಳು. ಅಷ್ಟುಹೊತ್ತಿಗೆ ನಳಿನಾಕ್ಷನೂ ಬಂದಿದ್ದನು. ಅವನನ್ನು ನೋಡಿ ಕಮಲೆ ಓಡಲು ಪ್ರಯತ್ನಿಸಿದಳು. ಆದರೆ ಮುದುಕಿ ಬಿಗಿಯಾಗಿ ಹಿಡಿದುಕೊಂಡು, "ನಾಚಿಕೆಯೇಕೆ? ಎಲ್ಲರೂ ನಮ್ಮವರೇ," ಎಂದಳು.

ಕಮಲೆಯ ಸೌಂದರ್ಯವನ್ನು ಎಲ್ಲರೂ ಮೆಚ್ಚಲೆಂದು ಕ್ಷೇಮಂಕರಿಯ ಆಸೆ. ಹೇಮನಳಿನಿಗೆ ತನ್ನ ಮಗನಲ್ಲಿ ಆಸಕ್ತಿಯೆಂಬ ಅನುಮಾನ ತಲೆದೋರಿ, ಆತನೂ ಕೂಡ ಕಮಲೆಯೇ ಹೆಚ್ಚು ಸುಂದರಿಯೆಂಬುದನ್ನು ಗಮನಿಸಲೆಂದುಕೊಂಡಳು. ಕಮಲೆಯನ್ನು ನೋಡಿ ನಿಜವಾಗಿಯೂ ಎಲ್ಲರಿಗೂ ಆಶ್ಚರ್ಯವಾಯಿತು. ಹೇಮನಳಿನಿ ಆವಳನ್ನು ನೋಡಿದ್ದುದು ಕ್ಷೇಮಂಕರಿಯ ಹಾಸಿಗೆಯ ಬಳಿ; ಅಲಂಕಾರವೇನೂ ಇಲ್ಲದಿದ್ದಾಗ, ನಾಚಿಕೆಯಿಂದ ಅಡಗಿಕೊಂಡಿದ್ದಾಗ. ಈಗ ಕಮಲೆಯ ಕೈ ಹಿಡಿದು ಪಕ್ಕದಲ್ಲಿ ಕೂಡಿಸಿಕೊಂಡಳು

ಕ್ಷೇಮಂಕರಿಗೆ ತಾನು ವಿಜಯಿಯೆಂದು ತೋರಿತು. ಕಮಲೆಯನ್ನು ನೋಡಿ, 'ಹೇಮಾನ ನಿನ್ನ ಕೋಣೆಗೆ ಕರೆದುಕೊಂಡು ಹೋಗಿ ಮಾತನಾಡು ಊಟದ ವ್ಯವಸ್ಥೆ ನಾನು ಮಾಡುತ್ತೇನೆ" ಎಂದಳು

ಹೇಮನಳಿನಿಗೆ ತನ್ನ ವಿಚಾರವಾಗಿ ಏನು ಅಭಿಪ್ರಾಯವಿದೆಯೆಂದು ತಿಳಿಯಲು ಕಮಲೆಗೆ ಕುತೂಹಲವಿತ್ತು. ನಳಿನಾಕ್ಷನ ಹೆಂಡತಿಯಾಗಿ ಹೇಮನಳಿನಿ ಗೃಹಪ್ರವೇಶಮಾಡುವಳು. ತನಗೆ ಯಜಮಾನಿಯಾಗುವಳು. ಆ ಸ್ಥಾನ ತನ್ನದೆಂಬ ಆಲೋಚನೆಯನ್ನು ದೂರಮಾಡಿದಳು. ಎಂದಿಗೂ ಈರ್ಷ್ಯೆಗೆ ಸ್ಥಳ ಕೊಡಕೂಡದೆಂದು ನಿರ್ಧರಿಸಿದಳು. ಕೋಣೆ ಬಿಟ್ಟು ಹೋಗುವಾಗ ಅವಳ ಕಾಲುಗಳು ನಡುಗುತ್ತಿದ್ದುವು.

ಹೇಮ—ನಿನ್ನ ಸಮಾಚಾರನೆಲ್ಲಾ ನನಗೆ ತಿಳಿದಿದೆ. ನನ್ನನ್ನು ಸಹೋದರಿಯೆಂದು ಭಾವಿಸು. ನಿನಗೆ ಅಕ್ಕ ತಂಗಿಯರಿದ್ದಾರೆಯೇ?

ಕಮಲ—ಸ್ವಂತದವರಿಲ್ಲ. ನಮ್ಮ ಮಾವನ ಮಗಳಿದ್ದಾಳೆ.

ಹೇಮನಳಿನಿಯ ವಿಶ್ವಾಸ ಕಮಲೆಗೆ ಧೈರ್ಯ ಕೊಟ್ಟಿತು.

ಹೇಮ—ನನಗೂ ಸಹೋದರಿಯಿಲ್ಲ. ಮಗುವಾಗಿದ್ದಾಗಲೇ ನನ್ನ ತಾಯಿ ತೀರಿಕೊಂಡರು. ಎಷ್ಟೋ ಸಲ—ಸುಖದುಃಖಗಳಲ್ಲಿ ಭಾಗಿಯಾಗಲು ಒಬ್ಬ ತಂಗಿಯಿಲ್ಲವಲ್ಲಾ—ಎಂದು ಮರುಗಿದ್ದೇನೆ. ಚಿಕ್ಕಂದಿನಿಂದಲೂ ಒಬ್ಬಳೇ ಇದ್ದು ಯಾರೊಡನೆಯೂ ಮನ ಬಿಚ್ಚಿ ಮಾತನಾಡುವುದಕ್ಕೇ ಬರುವುದಿಲ್ಲ. ಎಲ್ಲರೂ ನನಗೆ ಜಂಭವೆಂದುಕೊಳ್ಳುತ್ತಾರೆ. ನೀನು ಹಾಗೆ ತಿಳಿಯಬೇಡಮ್ಮಾ."

ಕಮಲೆ ಸಲಿಗೆಯಿಂದ, "ನನ್ನಲ್ಲಿ ನಿಮಗೆ ವಿಶ್ವಾಸವಿದೆಯೇ ಅಕ್ಕಾ? ನಾನು ಶುದ್ಧ ಮಂಕಳು." ಹೇಮನಳಿನಿ ನಕ್ಕು, "ನಾನೆಷ್ಟು ಮಂಕೆಂಬುದು ನಿನಗೆ ಬೇಗ ತಿಳಿಯುತ್ತೆ. ಪುಸ್ತಕದಲ್ಲಿರುವ ಕೆಲವು ವಿಚಾರ ಮಾತ್ರ ನನಗೆ ತಿಳಿದಿದೆ. ಈ ಮನೆಗೆ ನಾನು ಬಂದರೆ ನೀನು ಸದಾ ನನ್ನ ಜೊತೆಯಲ್ಲಿರಬೇಕು. ಇಲ್ಲದಿದ್ದರೆ ಮನೆ ನೋಡಿಕೊಳ್ಳಲು ನನಗೆ ಸಾಧ್ಯವಿಲ್ಲ."

ಕಮಲೆ ಮಗುವಿನಂತೆ ಸರಳವಾಗಿ, "ಅದೆಲ್ಲಾ ನನಗೇ ಬಿಡಿ. ನನಗೆ ಚಿಕ್ಕಂದಿನಿಂದ ಮನೆಗೆಲಸಮಾಡಿ ಅಭ್ಯಾಸವಾಗಿದೆ. ಅಕ್ಕತಂಗಿಯರಂತೆ ಇರೋಣ. ನೀವು ಆತನನ್ನು ಸುಖವಾಗಿಡಿ. ನಾನು ನಿಮ್ಮಿಬ್ಬರನ್ನೂ ನೋಡಿಕೊಳ್ಳುತ್ತೇನೆ," ಎಂದಳು.

ಹೇಮನಳಿನಿ ಸ್ವಲ್ಪಹೊತ್ತು ಬಿಟ್ಟು, "ನಿನ್ನ ಗಂಡನ ಜ್ಞಾಪಕವಿದೆಯೇ?" ಎಂದಳು. ಕಮಲೆ ನೇರವಾದ ಉತ್ತರ ಕೊಡದೆ, "ಜ್ಞಾಪಕವಿಟ್ಟುಕೊಳ್ಳಬೇಕೆಂಬುದು ಆಗ ತಿಳಿಯಲಿಲ್ಲಕ್ಕಾ. ನಮ್ಮ ಮಾವನ ಮಗಳು ಶೈಲೆಯ ಸ್ನೇಹವಾಯಿತು ಆಕೆಗೆ ತನ್ನ ಗಂಡನಲ್ಲಿದ್ದ ಅಪಾರ ಪ್ರೇಮ ನನ್ನ ಕಣ್ಣು ತೆರೆಯಿತು. ನನ್ನ ಗಂಡನ ವಿಚಾರದಲ್ಲಿ ಪೂಜ್ಯಭಾವವುಂಟಾಯಿತು. ದೇವರು ಮೆಚ್ಚಿ ಆತನ ಚಿತ್ರ ಸ್ಪಷ್ಟವಾಗಿ ಕಾಣುವಂತೆಮಾಡಿದನು. ನಾನು ಎಂದೂ ನಿಜವಾದ ಹೆಂಡತಿಯಾಗದಿದ್ದರೂ ನನ್ನ ಗಂಡ ಸಿಕ್ಕಿದಂತೆಯೇ ಇದೆ."

ಹೇಮನಳಿನಿಯ ಹೃದಯವೂ ಈ ಭಾವನೆಗೆ ಮಾರ್ದನಿಗೊಟ್ಟಿತು. "ನನಗದು ಗೊತ್ತು. ನಿಜವಾಗಿ ಪ್ರೇಮ ದೊರೆಯುವುದಕ್ಕಿಂತ ಇವೇ ಮೇಲಾದುದು. ಅದಕ್ಕಿಂತ ಶಾಶ್ವತವಾದುದು "

ಕಮಲೆಗೆ ಅರ್ಥವಾಯಿತೋ ಇಲ್ಲವೋ! ಹೇಮನಳಿನಿಯನ್ನು ಒಂದೆರಡು ಕ್ಷಣ ದೃಷ್ಟಿಸಿ ನೋಡಿ, "ನೀನು ಹೇಳುವುದು ನಿಜವಿರಬಹುದಕ್ಕಾ. ನಾನೂ ಪೇಚಾಡುವುದಿಲ್ಲ. ಸಿಕ್ಕಿದ್ದರಲ್ಲಿ ತೃಪ್ತಿಯಾಗಿ ಸಂತೋಷವಾಗಿದ್ದೇನೆ."

ಹೇಮನಳಿನಿ ಕಮಲೆಯ ಕೈಹಿಡಿದುಕೊಂಡು "ನನ್ನ ಗುರು ಲಾಭ ನಷ್ಟಗಳಿಗೆ ಹೆದರದಿರುವುದೇ ನಿಜವಾದ ಲಾಭವೆಂದು ಹೇಳುತ್ತಾರೆ.

ನಿನಗಿರುವಷ್ಟು ತೃಪ್ತಿ ನನಗೆ ದೊರೆತರೆ ನಾನು ಪುಣ್ಯಶಾಲಿನಿ" ಎಂದಳು.

ಕಮಲೆಗೆ ಆಶ್ಚರ್ಯವಾಯಿತು "ನಿಮಗೆ ಯಾವುದು ಕಡಮೆ? ಎಲ್ಲವೂ ಇದೆ."

ಹೇಮ—ನನ್ನ ಯೋಗ್ಯತೆಗೆ ಮೀರಿದ ಸುಖ ದೊರೆತರೆ ದುಃಖವೇ ಫಲ. ನನ್ನ ಮಾತು ನಿನಗೆ ಸೋಜಿಗವಾಗಬಹುದು. ನಿನ್ನನ್ನು ನೋಡಿದ ಮೇಲೆ ನನ್ನ ಹೃದಯವೆಷ್ಟೋ ಹಗುರವಾಯಿತು. ಅದರಿಂದಲೇ ಎಂದೂ ಇಲ್ಲದಷ್ಟು ಮಾತನ್ನಾಡುತ್ತಿದ್ದೇನೆ.

## ಅಧ್ಯಾಯ ೫೯

ಹೇಮನಳಿನಿ ಮನೆಗೆ ಬರುವ ವೇಳೆಗೆ ಅವಳ ವಿಳಾಸಕ್ಕೆ ಒಂದು ದೊಡ್ಡ ಕಾಗದ ಕಾದಿತ್ತು. ರಮೇಶನ ಅಕ್ಷರವೆಂದು ತಿಳಿದು ಹೃದಯ ಬಡಿದುಕೊಳ್ಳುತ್ತಿರಲು ಕೋಣೆಯ ಬಾಗಿಲನ್ನು ಮುಚ್ಚಿ ಅದನ್ನು ಓದ ತೊಡಗಿದಳು.

ರಮೇಶ ಕಮಲೆಯ ಕಥೆಯನ್ನೆಲ್ಲಾ ಬರೆದಿದ್ದನು. ಕೊನೆಯಲ್ಲಿ, "ವಿಧಿ ನನ್ನನ್ನು ನಿನ್ನಿಂದ ದೂರ ಮಾಡಿತು. ನೀನು ಬೇರೊಬ್ಬನನ್ನು ವರಿಸಿದ್ದೀಯೆ ತಪ್ಪೆಂದು ನಾನು ತಿಳಿಯುವುದಿಲ್ಲ. ನನ್ನನ್ನೂ ತಪ್ಪಿತಸ್ಥನೆಂದು ತಿಳಿಯಬೇಡ. ಕಮಲೆಯನ್ನು ಪತ್ನಿಯೆಂದು ನಾನು ಸ್ವೀಕರಿಸದಿದ್ದರೂ ಈಚೆಗೆ ಅವಳಲ್ಲಿ ಪ್ರೀತಿ ತಲೆದೋರಿತ್ತು. ಈಗ ನನ್ನ ಹೃದಯ ರಹಸ್ಯವನ್ನು ನಾನೇ ಅರಿಯೆ. ನೀನು ತಿರಸ್ಕರಿಸದಿದ್ದರೆ ನಿನ್ನ ಪ್ರೇಮದ ನೆರಳನ್ನು ಅದು ಸೇರುತ್ತಿತ್ತು. ಅದರಿಂದಲೇ ನಿನ್ನ ಬಳಿಗೆ ಓಡಿ ಬಂದೆ, ನೀನು ನನ್ನ ಎದುರಿಗೇ ನಿಲ್ಲದೆ ಓಡಿದುದರಿಂದ ನನ್ನನ್ನು ಚಿಂತೆ ಪುನಃ ಆವರಿಸಿತು. ಕಮಲೆಯನ್ನೇನೋ ನಾನು ಮರೆಯಲಾರೆ. ಆದರೆ ಅದರಿಂದ ಬೇರೆ ಯಾರಿಗೂ ತೊಂದರೆಯಿಲ್ಲ. ನನಗೆ ಮಾತ್ರ ದುಃಖವೇಕೆ? ನನ್ನ ಜೀವಮಾನದಲ್ಲಿ ಸಂಧಿಸಿದ ಇಬ್ಬರು ಸ್ತ್ರೀರತ್ನಗಳನ್ನು ಹೃದಯದಲ್ಲಿಟ್ಟು ಪೂಜಿಸುವುದೇ ನನಗೆ ಆನಂದ. ನಿನ್ನನ್ನು ಈದಿನ ನೋಡಿ ಎಂತಹ ವಸ್ತುವನ್ನು ಕಳೆದುಕೊಂಡೆನೆಂಬ ದುಃಖದಿಂದ ಹಿಂದಿರು

ಗಿದೆನು. ಇನ್ನೆಂದೂ ಹಾಗೆಣಿಸುವುದಿಲ್ಲ. ಸಂತೋಷದಿಂದ ನಿನ್ನನ್ನು ಹರಸುತ್ತೇನೆ ನಿನಗೆಂದೆಂದಿಗೂ ದೇವರು ಒಳ್ಳೆಯದನ್ನು ಮಾಡಲಿ, ನನ್ನನ್ನು ಮಾತ್ರ ದುಷ್ಟನೆಂದು ಭಾವಿಸಬೇಡ."

ಹೇಮನಳಿನಿ ತಂದೆಯ ಬಳಿಗೆ ಹೋದಳು. ಆತನು ತಲೆಯೆತ್ತಿ ನೋಡಿ, "ಪ್ಲೇಯಲ್ಲಿ ಸ್ಪಷ್ಟವಾಗಿದೆಯೋ ಹೇಮಾ?" ಎಂದನು.

"ಇದೆಯಪ್ಪಾ ರಮೇಶಬಾಬು ಕಾಗದ ಬರೆದಿದ್ದಾರೆ. ಓದಿ. ನನಗೆ ಕೊಡಿ," ಎಂದು ಕಾಗದವನ್ನು ಕೊಟ್ಟು ಹೊರಗೆ ಹೋದಳು.

ಆನಂದಬಾಬು ಕನ್ನಡಕವನ್ನು ಹಾಕಿಕೊಂಡು ಕಾಗದವನ್ನು ಎರಡು ಸಲ ಓದಿದನು ಹೇಮನಳಿನಿಗೆ ಆಕೆಯ ಕೈಲಿ ಅದನ್ನು ಕಳುಹಿಸಿ, "ರಮೇಶನಿಗಿಂತ ನಳಿನಾಕ್ಷನೇ ಒಳ್ಳೆಯ ವರ," ಎಂದುಕೊಂಡನು

ನಳಿನಾಕ್ಷ ಬಂದನು. ಆತನು ಹೇಮನಳಿನಿಯನ್ನು ಹುಡುಕಿ ಕೊಂಡು ಬಂದಿರಬೇಕೆಂದು ಆನಂದಬಾಬು ಭಾವಿಸಿದನು.

ನಳಿನಾಕ್ಷ—"ಆನಂದಬಾಬು, ನಿಮ್ಮ ಮಗಳೊಡನೆ ನನ್ನ ಮದುವೆ ಗೊತ್ತಾಗಿದೆ. ನಿಮಗೊಂದು ವಿಚಾರ ಹೇಳಬೇಕಾಗಿದೆ," ಎಂದನು.

ಆನಂದ—ಹೇಳಿ.

ನಳಿನ—ನನಗೆ ಮದುವೆಯಾಗಿತ್ತೆಂನು ನಿಮಗೆ ತಿಳಿಯದು.

ಆನಂದ—ಗೊತ್ತಿತ್ತು. ಆದರ ... ..

ನಳಿನ—ಅವಳು ಸತ್ತಳೆಂದು ನೀವು ತಿಳಿದಿದ್ದೀರಿ. ಆದರೆ ಅದು ಖಂಡಿತವಿಲ್ಲ. ಬದುಕಿರುವಳೆಂದೇ ನನ್ನ ನಂಬಿಕೆ.

ಆನಂದ—ದೇವರು ಅದನ್ನು ನಿಜ ಮಾಡಲಿ. ಹೇಮಾ, ಹೇಮಾ.

ಹೇಮನಳಿನಿ ಬಂದಳು ಆನಂದಬಾಬು, "ರಮೇಶ ಬರೆದ ಕಾಗದ ವೆಲ್ಲಿ...." ಎಂದನು. ಹೇಮನಳಿನಿ ಕಾಗದವನ್ನು ನಳಿನಾಕ್ಷನಿಗೆ ಕೊಟ್ಟಳು. "ಎಲ್ಲಾ ಓದಿ." ಎಂದು ಹೊರಗೆ ಹೋದಳು.

ನಳಿನಾಕ್ಷ ಓದಿ ಆಶ್ಚರ್ಯದಿಂದ ಮೂಕನಾದನು.

ಆನಂದ—ದುಃಖದ ಕಥೆ. ಆದರೆ ನೀವು ಓದಿದುದೇ ಒಳ್ಳೆಯದು.

ನಳಿನಾಕ್ಷ ಹೊರಡುವಾಗ ಹೇಮನಳಿನಿ ಬಾಗಿಲಲ್ಲಿ ನಿಂತಿದ್ದಳು. ಹೃದಯದಲ್ಲಿ ತುಮುಲ ಯುದ್ಧವೇ ನಡೆಯುತ್ತಿದ್ದರೂ ಮುಖ ಶಾಂತ

ವಾಗಿತ್ತು. ಅವಳಿಗೇನು ಸಮಾಧಾನ ಹೇಳಲು ಸಾಧ್ಯ? ಮನುಷ್ಯನ ಆತ್ಮ ಏಕಾಂಗಿ! ಅದನ್ನು ಮುಟ್ಟಲು ಅಸಾಧ್ಯ! ಆತನನ್ನು ನೋಡಿ ಹೇಮನಳಿನಿ ಒಳಗೆ ಹೊರಟುಹೋದಳು. ಆತನು ದುಃಖ ಭಾರದಿಂದ ಕುಗ್ಗಿ ಗಾಡಿಯೊಳಗೆ ಕುಳಿತನು.

ನಳಿನಾಕ್ಷ ಹೋದ ಸ್ವಲ್ಪ ಹೊತ್ತಿಗೆ ಜೋಗೇಂದ್ರ ಬಂದನು.

ಆನಂದ—ಒಬ್ಬನೇ ಬಂದೆಯಾ ಜೋಗೆನ್?

ಜೋಗೇಂ—ಮತ್ತೆ ಯಾರು ಬರಬೇಕಾಗಿತ್ತು?

ಆನಂದ—ರಮೇಶ?

ಜೋಗೇಂ—ಬೆಳಗ್ಗಿನ ಉಪಚಾರವೇ ಅವನಿಗೆ ಸಾಕಾಯಿತು. ಗಂಗೆಯಲ್ಲೇ ಬಿದ್ದು ಹೋದನೋ ಏನೋ! ನನಗೂ ಸಿಕ್ಕಲಿಲ್ಲ. 'ಹೋಗುತ್ತೇನೆ' ಎಂದು ಕಾಗದ ಬರೆದಿಟ್ಟಿದ್ದ. ನನಗೆ ಈ ನಾಟಕಗಳೇ ಅರ್ಥವಾಗುವುದಿಲ್ಲ ನಾನೂ ಹೋಗುತ್ತೇನೆ. ಉಪಾಧ್ಯಾಯನ ಕೆಲಸವೇ ಸಲೀಸಾದುದು

ಆನಂದ—ಹೇಮಳ ಗತಿ? ಏನಾದರೂ ಗೊತ್ತುಮಾಡಬೇಕು.

ಜೋಗೇ—ನಾನೇನು ಮಾಡಲಿ? ಏನು ಏರ್ಪಾಟೂ ನಿಮಗೆ ಸರಿ ಹೋಗುವುದಿಲ್ಲ. ನನಗೂ ಸಾಕಾಯಿತು, ಬಿಟ್ಟು ಬಿಡಿ. ನನಗೆ ಇವೆಲ್ಲಾ ಅರ್ಥವಾಗುವುದಿಲ್ಲ. ನಾಳೆ ಬೆಳಗ್ಗೆ ಹೊರಡುತ್ತೇನೆ. ದಾರಿಯಲ್ಲಿ ಬಂಕೀಪುರದಲ್ಲಿ ನಿಲ್ಲಬೇಕಾಗುತ್ತೆ. ಎಂದು ತಟ್ಟನೆ ಎದ್ದು ಹೋದನು. ಆನಂದಬಾಬು ಬಿಡಿಸಲಾಗದ ಸಮಸ್ಯೆಯಲ್ಲಿ ಸಿಕ್ಕಿ ಚಿಂತಿಸುತ್ತಾ ಕುಳಿತನು.

## ಅಧ್ಯಾಯ ೬೦

ಒಂದೆರಡು ದಿನಗಳಾದ ಮೇಲೆ ಶೈಲಜೆ, ಅವಳ ತಂದೆ, ನಳಿನಾಕ್ಷನ ಮನೆಗೆ ಬಂದರು. ಚಕ್ರವರ್ತಿ ಕ್ಷೇಮಂಕರಿಯೊಡನೆ ಮಾತನಾಡುತ್ತಿರಲು ಕಮಲೆಯೂ ಶೈಲೆಯೂ ಪಿಸುಗುಟ್ಟುತ್ತಿದ್ದರು.

ಚಕ್ರವರ್ತಿ—ನನ್ನ ರಜಾ ಮುಗಿಯಿತು. ನಾಳೆ ಘಾಸಿಪುರಕ್ಕೆ

ಹೋಗಬೇಕು. ಹರಿದಾಸಿಯಿಂದ ನಿಮಗೇನಾದರೂ ಬೇಸರವಾಗಿದ್ದರೆ....

ಕ್ಷೇಮ—ಪುನಃ ಪ್ರಾರಂಭಿಸಿದಿರಿ, ನಿಮಗೆ ಅವಳನ್ನು ಕರೆದು ಕೊಂಡು ಹೋಗಬೇಕೆಂದು ಆಸೆಯೇನು?

ಚಕ್ರವರ್ತಿ—ನಾನು ಅಂಥವನಲ್ಲ ನಿಮಗೇನಾದರೂ ಅನಾನು ಕೂಲವಾಗಿದ್ದರೆ.... ...

ಕ್ಷೇಮ—ನೀವು ಸರಿಯಾಗಿ ಮಾತನಾಡುವುದೇ ಇಲ್ಲ. ಹರಿದಾಸಿಯ ಹಾಗೆ ಕೆಲಸ ಮಾಡುವವರು ನನಗೆಲ್ಲಿ ಸಿಕ್ಕುತ್ತಾರೆ? ನಿಮಗೂ ತಿಳಿದಿದೆ.

ಚಕ್ರ—ಹಾಗಾದರೆ ಆ ಮಾತನ್ನು ಬಿಡೋಣ. ನೀವು ಅವಳನ್ನು ಹೊಗಳಲಿ, ಎಂದು ಉಪಾಯಮಾಡಿದೆ ಆದರೆ ನಳಿನಾಕ್ಷಬಾಬು ಏನೆನ್ನುವರೋ! ನಮ್ಮ ಹುಡುಗಿಗೂ ಬಹಳ ಅಭಿಮಾನ. ಒಂದು ಕಠಿಣವಾದ ಮಾತನ್ನಾಡಿದರೂ ಮನಸ್ಸಿಗೆ ತುಂಬ ಹಚ್ಚಿಕೊಳ್ಳುತ್ತಾಳೆ.

ಕ್ಷೇಮ—ನಳಿನನಿಗೆ ಕೋಪ ಬರುವುದೇ ಇಲ್ಲ.

ಚಕ್ರ—ಅದೇನೋ ನಿಜ ಆದರೆ ಹರಿದಾಸಿಯೆಂದರೆ ನನಗೆ ಬಹಳ ಪ್ರೀತಿ ಅವಳು ಇಲ್ಲಿರುವವರೆಗೂ ಎಲ್ಲರೂ ಮನೆಯವಳೆಂದೇ ಭಾವಿಸ ಬೇಕು. ಆತನು ಅವಳ ಕಡೆ ಗಮನವನ್ನೇ ಕೊಡದೆ ಅಸಡ್ಡೆಮಾಡಿದರೆ ನೊಂದುಕೊಳ್ಳದಿರುವುದಕ್ಕೆ ಅವಳೇನು ಕುರ್ಚಿಯೆ?

ಕ್ಷೇಮ—ಏನೂ ಯೋಚನೆಮಾಡಬೇಡಿ. ನಳಿನ ಯಾರಿಗೂ ತಿಳಿಯದಂತೆ ಅವಳ ಯೋಗಕ್ಷೇಮ ನೋಡಿಕೊಳ್ಳುತ್ತಿರುವನೆಂದೇ ನನ್ನ ನಂಬಿಕೆ.

ಚಕ್ರ—ಬಹಳ ಸಂತೋಷ. ಆದರೆ ನಾನು ಆತನೊಡನೆ ಮಾತ ನಾಡಿ, ಹರಿದಾಸಿಯನ್ನು ದೂರಮಾಡದೆ ಮನೆಯವಳಂತೆ ಸುಖವಾಗಿಟ್ಟು ಕೊಂಡಿರಬೇಕೆಂದು ಹೇಳುತ್ತೇನೆ.

ಕ್ಷೇಮ—ನಾನೇ ಹರಿದಾಸಿಯನ್ನು ದೂರವಾಗಿಟ್ಟಿದ್ದೆ ನೀವೇನು ತಿಳಿದು ಕೊಳ್ಳುವಿರೋ ಎಂದಿದ್ದೆ. ಆದರೆ ನಮ್ಮ ನಳಿನ ಅಂತಹವನಲ್ಲ.

ಚಕ್ರ—ಹಾಗಾದರೆ ನನ್ನ ಮನಸ್ಸಿನಲ್ಲಿರುವುದನ್ನು ಹೇಳುತ್ತೇನೆ. ನಳಿನಾಕ್ಷಬಾಬು ಒಬ್ಬ ವಿದ್ಯಾವತಿಯನ್ನು ಮದುವೆಯಾಗುವನೆಂದು ಕೇಳಿದೆ. ಆದುದರಿಂದ ಹರಿದಾಸಿ........

ಕ್ಷೇಮ—ಅದು ಸರಿ, ಆ ಮದುವೆಯಾಗುವ ಹಾಗಿಲ್ಲ.

ಚಕ್ರ—ನಿಂತು ಹೋಯಿತೆ ?

ಕ್ಷೇಮ—ಗೊತ್ತೇ ಆಗಿರಲಿಲ್ಲ. ನಳಿನನಿಗೆ ಇಷ್ಟವೇ ಇರಲಿಲ್ಲ. ನಾನೇ ಒಲವಂತ ಮಾಡಿದೆ. ಆದರೆ ಅದು ಸರಿಯಲ್ಲ. ನನ್ನ ಕಣ್ಣ ಮುಂದೆ ಅವನಿಗೆ ಮದುವೆಯಾಗುವುದೋ ಇಲ್ಲವೋ!

ಚಕ್ರ—ಹಾಗೆಲ್ಲಾ ಮಾತನಾಡಬಾರದು. ನಾನೆಲ್ಲಾ ಇರುವುದು ಏತಕ್ಕೆ?

ಕ್ಷೇಮ—ನಳಿನನಿಗೆ ವಯಸ್ಸಾಯಿತೆಂದು ಅವಸರದಿಂದ ಮದುವೆ ಗೊತ್ತುಮಾಡಿದೆ ಅದೇನೋ ಆಗುವಹಾಗಿಲ್ಲ. ನಿಮ್ಮ ಪ್ರಯತ್ನದಿಂದ ಆಗುವುದೋ ಏನೋ.

ಚಕ್ರ—ಆತನ ಮದುವೆಯನ್ನು ನೀವು ನೋಡುತ್ತೀರಿ. ನಿಮಗೆಂತಹ ಸೊಸೆ ಬೇಕೆಂದು ನನಗೆ ಗೊತ್ತು. ತುಂಬಾ ಚಿಕ್ಕವಳಾಗಿರಕೂಡದು; ಹೇಳಿದ ಮಾತು ಕೇಳುವವಳಾಗಿರಬೇಕು. ಅಂಥವಳನ್ನೇ ಹುಡುಕಬೇಕು. ಯೋಚನೆ ಮಾಡಬೇಡಿ. ಹರಿದಾಸಿಗೆ ಎರಡು ಬುದ್ಧಿ ಮಾತು ಹೇಳ ಬೇಕು. ಶೈಲಳನ್ನು ನಿಮ್ಮ ಬಳಿಗೆ ಕಳುಹಿಸುತ್ತೇನೆ.

ಕ್ಷೇಮ—ನೀವು ಮೂವರೂ ಮಾತನಾದಿ. ನನಗೆ ಸ್ವಲ್ಪ ಕೆಲಸವಿದೆ.

ಚಕ್ರವರ್ತಿ ನಕ್ಕು, "ನಿಮ್ಮಂತಹವರಿರುವುದು ನಮ್ಮ ಪುಣ್ಯ. ನಿಮ್ಮ ಕಲಸವೇನೆಂದು ನನಗೆ ಗೊತ್ತು. ನಳಿನಾಕ್ಷಬಾಬುವಿಗೆ ಹೆಣ್ಣು ಹುಡುಕಿ ಕೊಡುವ ಬ್ರಾಹ್ಮಣನಿಗೆ ತಿಂಡಿ ಮಾಡುವುದಲ್ಲವೆ?"

ಚಕ್ರವರ್ತಿ, ಕಮಲ ಶೈಲಜೆಯರ ಬಳಿಗೆ ಬಂದನು. ಕಮಲೆಯ ಕಣ್ಣಲ್ಲಿ ನೀರು ಮಿಂಚುತ್ತಿತ್ತು. ಮಾತನಾಡದೆ ಮಗಳ ಬಳಿ ಕುಳಿತನು.

ಶೈಲ—ಎಲ್ಲವನ್ನೂ ನಳಿನಾಕ್ಷಬಾಬುವಿಗೆ ತಿಳಿಸೋಣವೆಂದರೆ ಹರಿ ದಾಸಿ ಜಗಳವಾಡುತ್ತಿದ್ದಾಳೆ.

ಕಮಲ—ಬೇಡಕ್ಕಾ. ದಯವಿಟ್ಟು ಬೇಡ.

ಶೈಲ—ನೀನೆಂತಹ ಹುಚ್ಚಿ! ಆತನ ಮದುವೆಯಾಗಿ ಹೋದರೂ ಬಾಯಿ ಮುಚ್ಚಿಕೊಂಡಿರುತ್ತೀ. ಮದುವೆಯಾದಂದಿನಿಂದ ಕಷ್ಟವನ್ನೇ ಅನುಭವಿಸುತ್ತಿದ್ದೀ. ಇನ್ನೂ ಅನುಭವಿಸಬೇಕೆನ್ನುತ್ತೀ.

ಕಮಲ—ನನ್ನ ಕತೆ ಯಾರಿಗೂ ತಿಳಿಯಕೂಡದು. ಆ ಅವಮಾನ ವನ್ನು ನಾನು ಸಹಿಸಲಾರೆ. ಹೀಗೇ ಸುಖವಾಗಿದ್ದೇನೆ.

ಶೈಲೆಗೆ ಇದು ಸರಿದೋರಲಿಲ್ಲ.

ಚಕ್ರ—ಮದುವೆ ನಿಶ್ಚಯವಾಯಿತೆ?

ಶೈಲ—ಹೌದು. ನಳಿನಾಕ್ಷಬಾಬುವಿನ ತಾಯಿ ವಧುವಿಗೆ ಆಶೀ ರ್ವಾದಮಾಡಿ ಬಂದಿದಾಳೆ.

ಚಕ್ರ—ಆ ಆಶೀರ್ವಾದ ಫಲಿಸುವುದಿಲ್ಲ. ಭಯವಿಲ್ಲ, ಕಮಲಾ. ಸತ್ಯಕ್ಕೇ ಜಯ.

ಕಮಲೆಗೆ ಅರ್ಥವಾಗಲಿಲ್ಲ.

ಚಕ್ರ—ಮದುವೆ ನಿಂತುಹೋಯಿತು. ನಳಿನಾಕ್ಷನೂ ಒಪ್ಪಲಿಲ್ಲ. ಅವನ ತಾಯಿಗೂ ವಿವೇಕ ಬಂತು

ಶೈಲಜೆಗೆ ಆನಂದವಾಯಿತು. "ಬದುಕಿದೆವ್ರು. ಮದುವೆಯೆಂದು ಕೇಳಿ ದಾಗಿನಿಂದ ನನಗೆ ನಿದ್ರೆಯೇ ಇಲ್ಲ. ಆದರೆ ಕಮಲೆ ಇಲ್ಲಿ ಪರಕೀಯ ಳಂತೆಯೇ ಇರಬೇಕೆ? ಇದು ಸರಿಹೋಗುವುದು ಯಾವಾಗ?

ಚಕ್ರ—ಅವಸರಪಡಬಾರದು ಶೈಲಾ. ಎಲ್ಲಾ ಸರಿಹೋಗುತ್ತೆ!

ಕಮಲ—"ಈಗ ಸರಿಯಾಗಿಯೇ ಇವೆ. ಸಂತೋಷವಾಗಿಯೇ ಇದ್ದೇನೆ ಬದಲಾಯಿಸಲು ಹೋದರೆ ತೊಂದರೆಯೇ ಬರುತ್ತೆ, ಯಾರಿಗೂ ಹೇಳಬೇಡಿ, ಮಾವಾ. ಒಂದು ಮೂಲೆಯಲ್ಲಿ ನನ್ನನ್ನು ಬಿಟ್ಟು ಮರೆತುಬಿಡಿ." ಅವನ ಕಣ್ಣುಗಳಿಂದ ನೀರು ಸುರಿಯಲಾರಂಭಿಸಿತು.

ಚಕ್ರ—ಅಳಬೇಡಮ್ಮ ನಾನೇನೂ ನಿನ್ನ ಶಾಂತಿಗೆ ಭಂಗ ತರುವು ದಿಲ್ಲ. ದೇವರು ಎಲ್ಲಾ ಸರಿಪಡಿಸುತ್ತಾನೆ. ಭಯಪಡಬೇಡ.

ಉಮೇಶ ಎಂದಿನಂತೆ ಹಲ್ಲುಕಿರಿಯುತ್ತಾ ಬಂದನು

ಚಕ್ರ—ಏನು ಉಮೇಶ?

ಉಮೇಶ—ರಮೇಶಬಾಬು ಡಾಕ್ಟರನ್ನು ಹುಡುಕಿಕೊಂಡು ಬಂದಿ ದ್ದಾರೆ. ಕಮಲೆ ಹೆದರಿದಳು. ಮಾವ ತಟ್ಟನೆದ್ದು, "ಹೆದರಬೇಡ" ಎಂದು ಹೇಳಿ ಕೆಳಗೆ ಹೋದನು. ರಮೇಶನ ಕೈಹಿಡಿದು, "ರಮೇಶ ಬಾಬು ನಿಮ್ಮೊಡನೆ ಮಾತನಾಡಬೇಕಾಗಿದೆ. ಸ್ವಲ್ಪ ಸುತ್ತಾಡಿಕೊಂಡು

ಬರೋಣ, ಬನ್ನಿ" ಎಂದನು.

ರಮೇಶ ಆಶ್ಚರ್ಯದಿಂದ, "ನೀವೆಲ್ಲಿಂದ ಬಂದಿರಿ ಮಾವ?" ಎಂದನು.

ಮಾವ—"ನಿಮಗಾಗಿಯೇ ಬಂದೆ. ಹೊತ್ತಾಯಿತು ಬನ್ನಿ." ಹೊರಗೆ ಹೋಗುತ್ತಾ, "ನಿಮ್ಮನ್ನು ಇಲ್ಲಿಗೆ ಯಾರು ಕರೆತಂದರು?" ಎಂದನು.

ರಮೇಶ—ನಾನು ನಳಿನಾಕ್ಷಬಾಬುವನ್ನು ನೋಡಲು ಬಂದೆ. ಕಮಲೆಯ ವಿಚಾರವನ್ನು ಆತನಿಗೆ ತಿಳಿಸಬೇಕು. ಅವಳು ಬದುಕಿರ ಬಹುದು.

ಮಾವ—ಒಂದುವೇಳೆ ಅವಳು ಬದುಕಿದ್ದು, ನಳಿನಾಕ್ಷಬಾಬುವಿಗೆ ಸಿಕ್ಕಿದರೆ, ಈ ಕಥೆಯನ್ನು ನಿಮ್ಮ ಬಾಯಿಂದ ಕೇಳುವುದು ಒಳ್ಳೆಯದೋ? ಆತನ ತಾಯಿಗೆ ಸರಿಬೀಳದೆ ಹೋಗಬಹುದು.

ರಮೇಶ—ಅವರೇನೆಂದುಕೊಳ್ಳುವರೋ ನಾನರಿಯೆ. ಕಮಲೆ ನಿರಪರಾಧಿನಿಯೆಂದು ಮಾತ್ರ ನಾನು ಹೇಳಬಲ್ಲೆ. ಅವಳು ಸತ್ತಿದ್ದರೆ ಆತನು ಮನಸ್ಸಿನಲ್ಲಾದರೂ ಆಕೆಯನ್ನು ಪೂಜಿಸಲಿ.

ಮಾವ—ನನಗೆ ಈ ಕಾಲದವರ ವಿಚಾರ ಸರಣಿಯೇ ಅರ್ಥ ವಾಗುವುದಿಲ್ಲ. ಅವಳು ಸತ್ತಿದ್ದರೆ ಆತನು ಜ್ಞಾಪಕಮಾಡಿಕೊಂಡೇನು ಪ್ರಯೋಜನ? ಆತನು ಒಂದು ರಾತ್ರಿ ಮಾತ್ರ ಆಕೆಯ ಪತಿಯಾಗಿ ದ್ದನು ಅಲ್ಲಿ ಕಾಣುವುದೇ ನನ್ನ ಮನೆ. ನಾಳೆ ಬನ್ನಿ. ಎಲ್ಲಾ ತಿಳಿಸುತ್ತೇನೆ. ಅದುವರೆಗೂ ನಳಿನಾಕ್ಷಬಾಬುವನ್ನು ನೋಡಬೇಡಿ.

ರಮೇಶ ಒಪ್ಪಿಕೊಳ್ಳಲು ಮಾವ ಹಿಂದಿರುಗಿ ಕಮಲೆಯೊಡನೆ, "ನಾಳೆ ನಮ್ಮ ಮನೆಗೆ ಬಾಮ್ಮ. ನೀನೇ ರಮೇಶಬಾಬುವಿಗೆ ಎಲ್ಲ ವನ್ನೂ ತಿಳಿಸುವುದು ಒಳ್ಳೆಯದು" ಎಂದನು.

ಕಮಲೆ ಮಾತನಾಡದೆ ತಲೆ ತಗ್ಗಿಸಿದಳು.

ಮಾವ—"ಭಯಪಡಬೇಡ. ಇದು ನಿನ್ನದೇ ಕೆಲಸ." ಕಮಲೆ ತಲೆಯೆತ್ತಲಿಲ್ಲ. "ನೆಲವನ್ನೆಲ್ಲಾ ಸರಿಪಡಿಸಿದ್ದೇನೆ. ಒಂದೆರಡು ಕಲ್ಲು ಗಳನ್ನು ಗುಡಿಸಲು ನೀನು ಹಿಂದೆಗೆಯಬಾರದು."

ಹೆಜ್ಜೆಯ ಸದ್ದನ್ನು ಕೇಳಿ ಕಮಲೆ ತಲೆಯೆತ್ತಿದಳು. ನಳಿನಾಕ್ಷ ಬಾಗಿಲಲ್ಲಿ ನಿಂತಿದ್ದನು. ಕಣ್ಣುಗಳು ಸಂಧಿಸಿದಾಗ ಹೊರಟು ಹೋಗದೆ ಕಮಲೆಯನ್ನು ಕ್ಷಣಕಾಲ ದೃಷ್ಟಿಸಿ ನೋಡಿದನು. ಆ ದೃಷ್ಟಿಯಲ್ಲಿ ಕಮಲೆ ಪರಕೀಯಳೆಂಬ ಭಾವನೆ ಮರೆಯಾದಂತೆ ತೋರಿತು. ಮರುಕ್ಷಣ ಶೈಲಜೆಯನ್ನು ನೋಡಿ ಹಿಂದಿರುಗಿದನು.

ಮಾವ—ಓಡಬೇಡಿ, ನಳಿನಾಕ್ಷಬಾಬು. ನೀವು ನಮ್ಮವರೇ. ಇವಳು ನನ್ನ ಮಗಳು ಶೈಲ. ಇವನ ಮಗುವನ್ನು ನೋಡಲು ನೀವು ಬಂದಿದ್ದಿರಿ

ಶೈಲಜೆ ನಮಸ್ಕರಿಸಿದಳು

ನಳಿನಾಕ್ಷನೂ ನಮಸ್ಕರಿಸಿ, “ಮಗು ಹೇಗಿದೆ?” ಎಂದನು

ಶೈಲ—ಈಗ ಚನ್ನಾಗಿದ್ದಾಳೆ

ಚಕ್ರ—ನೀವು ಸಿಕ್ಕುವುದೇ ಅಪರೂಪ ಒಂದು ನಿಮಿಷ ಕುಳಿತುಕೊಳ್ಳಿ.

ಆತನು ಕುಳಿತುಕೊಳ್ಳುವ ವೇಳೆಗೆ ಕಮಲೆ ಮರೆಯಾಗಿದ್ದಳು. ನಳಿನಾಕ್ಷ ತನ್ನನ್ನು ನೋಡಿದ ಸಂತೋಷವನ್ನು ಅವಳು ತಡೆಯಲಾರದೆ ಹೋದಳು

ಕ್ಷೇಮಂಕರಿ ಬಂದು ಚಕ್ರವರ್ತಿಯನ್ನು ನೋಡಿ, “ನೀವು ಬರಬೇಕು.” ಎಂದಳು.

ಮಾವ—“ನೀವು ಕೆಲಸಮಾಡಲು ಎದ್ದು ಹೋದಾಗಿನಿಂದ ನನ್ನ ಬಾಯಲ್ಲಿ ನೀರೂರುತ್ತಿದೆ.” ತಿಂಡಿ ತಿಂದು “ಸ್ವಲ್ಪ ಇರಿ,” ಎಂದು ಹೇಳಿ ಕಮಲೆಯನ್ನು ಕರೆತಂದನು ಶೈಲಜೆಯೂ ಬಂದಳು.

ಚಕ್ರ—ನಳಿನಾಕ್ಷಬಾಬು, ನಮ್ಮ ಹರಿದಾಸಿ ಹೊರಗಿನವಳಲ್ಲ. ನಿಮ್ಮ ಮನೆಯಲ್ಲಿರುವಾಗ ನಿಮ್ಮವಳಂತೆಯೇ ನೋಡಿಕೊಳ್ಳಬೇಕು. ಅವಳಿಗೆ ಬೇಕಾದುದು ನಿಮ್ಮ ಸೇವೆ ಮಾತ್ರ. ಬೇಕೆಂದು ತಪ್ಪುಮಾಡುವುದಿಲ್ಲವೆಂದು ಭರವಸೆ ಕೊಡಬಲ್ಲೆ.

ಕ್ಷೇಮ—ನೀವೇನೂ ಚಿಂತಿಸಬೇಡಿ. ಹರಿದಾಸಿ ನನಗೆ ಮಗಳ ಹಾಗೆ. ಅವಳಿಗೆ ನಾನು ಕೆಲಸ ಹೇಳಬೇಕಾಗಿಯೇ ಇಲ್ಲ. ಅಡಿಗೆ ಮನೆಗೆ

ನನ್ನನ್ನು ಸೇರಿಸುವುದೇ ಇಲ್ಲ. ಆಳುಗಳು ನನ್ನನ್ನು ಯಜಮಾನಿಯಂತೆ ಕಾಣುವುದೇ ಇಲ್ಲ. ನನ್ನ ಬೀಗದ ಕೈಗಳನ್ನೂ ಹರಿದಾಸಿ ತೆಗೆದು ಕೊಂಡುಬಿಟ್ಟಿದ್ದಾಳೆ ಈ ಕಳ್ಳಿಗೆ ಇನ್ನೇನು ಉಪಚಾರ ಮಾಡಬೇಕು? ಅವಳನ್ನು ಈಗ ಕರೆದುಕೊಂಡು ಹೋದರೆ ನನಗೆ ದೊಡ್ಡ ದ್ರೋಹ ಮಾಡಿದಂತೆ.

ಚಕ್ರ—"ನಾನು ಕರೆದರೂ ಅವಳು ಬರುವುದಿಲ್ಲ. ನೀವು ಮಂತ್ರ ಹಾಕಿ ನಮ್ಮನ್ನೆಲ್ಲಾ ಮರೆಯುವಂತೆ ಮಾಡಿದ್ದೀರಿ. ಕಷ್ಟಪಟ್ಟ ಹುಡುಗಿಗೆ ನಿಮ್ಮ ಹತ್ತಿರ ಶಾಂತಿ ಸಿಕ್ಕಿದೆ. ದೇವರು ಅವಳಿಗೆ ಸದಾ ಇದೇ ಶಾಂತಿಸುಖವನ್ನು ಕೊಡಲಿ." ಮುದುಕನ ಕಣ್ಣುಗಳು ತೇವ ನಾದುವು. ನಳಿನಾಕ್ಷ ಮುಗ್ಧನಾಗಿ ಕೇಳುತ್ತಿದ್ದನು.

ಎಲ್ಲರೂ ಹೊರಟು ಹೋದ ಮೇಲೆ ನಿಧಾನವಾಗಿ ತನ್ನ ಕೊಠಡಿಗೆ ಹೋದನು ಸಂಜೆಯ ರಕ್ತವರ್ಣ ಕೋಣೆಯನ್ನು ತುಂಬಿತ್ತು. ಬೆಳಗ್ಗೆ ಆತನ ಸ್ನೇಹಿತರು ಯಾರೋ ಕೆಲವು ರೋಜಾ ಹೂಗಳನ್ನು ಕಳುಹಿ ಸಿದ್ದರು. ಕ್ಷೇಮಂಕರಿ ಅವುಗಳನ್ನು ಕಮಲೆಯ ಕೈಗೆ ಕೊಟ್ಟು ನೀರಿನಲ್ಲಿ ಡಲು ಹೇಳಿದಳು. ಅವಳು ನಳಿನಾಕ್ಷನ ಕೊಠಡಿಯಲ್ಲಿ ಒಂದು ಪುಷ್ಪ ಪಾತ್ರೆಯಲ್ಲಿಟ್ಟಿದ್ದಳು. ಸಂಜೆಯ ತನಿಗೆಂಪೂ, ಹೂಗಳ ಇನಿಗಂಪೂ, ನಳಿನಾಕ್ಷನ ಹೃದಯವನ್ನು ಕಲಕಿದುವು. ಅನೇಕ ವರ್ಷಗಳಿಂದ ನಿಷ್ಕಾಮ ಜೀವನವನ್ನು ನಡೆಸಿದ್ದನು. ಈಗ ಅದೃಶ್ಯವಾದ ವೀಣಾ ನಿನಾ ದವೂ, ನರ್ತಕಿಯರ ಗೆಜ್ಜೆಗಳ ರವವೂ ಕೇಳಿಸಿದಂತಾಯಿತು. ಕಿಟಕಿ ಯಿಂದ ತಿರುಗಲು ಹಾಸಿಗೆಯ ಬಳಿಯಿದ್ದ ಹೂಗಳು ಕಾಣಿಸಿದುವು. ಅವು ಏನೋ ಬೇಡುತ್ತಿರುವಂತೆ ಕಾಣಿಸಿದುವು. ಸಿಕ್ಕಿಯರಳದ ಒಂದು ಮೊಗ್ಗನ್ನು ಕೈಗೆ ತೆಗೆದುಕೊಂಡನು. ಅದನ್ನು ತಾಕಿದಾಗ ಬೇರೊಬ್ಬ ಜೀವಿಯ ಕೈ ತಗುಲಿದಂತಾಗಿ ಮೈ ಅದುರಿತು ಮೊಗ್ಗನ್ನು ತುಟಿಗೂ ಕಣ್ಣಿಗೂ ಒತ್ತಿಕೊಂಡನು. ಸಂಜೆಯ ಬೆಳಕು ಆಕಾಶವನ್ನು ತುಂಬಿತ್ತು. ಮೊಗ್ಗನ್ನು ತಲೆದಿಂಬಿನ ಮೇಲಿಡಲು ನಳಿನಾಕ್ಷ ಹಾಸಿಗೆಯ ಬಳಿಗೆ ಹೋದನು ತಲೆಯೆತ್ತಿದಾಗ ಮಂಚದ ಹಿಂದೆ ಮುದುರಿಕೊಂಡಿದ್ದ ಕಮಲೆ ಕಾಣಿಸಿದಳು. ನಾಚಿಕೆಯಿಂದ ತಗ್ಗಿ ಹೋಗಿದ್ದಳು.

ಹಾಸಿಗೆಯನ್ನು ಸರಿಮಾಡಿ ಹೂಗಳನ್ನಿಟ್ಟು, ಕೊಠಡಿಯನ್ನು ಬಿಟ್ಟು ಹೊರಡುತ್ತಿದ್ದಾಗ ಕಮಲೆ ನಳಿನಾಕ್ಷನ ಹೆಜ್ಜೆಯ ಸದ್ದನ್ನು ಕೇಳಿ ಅವಿತುಕೊಂಡಿದ್ದಳು. ಸಿಕ್ಕಿಬಿದ್ದ ಮೇಲೆ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲದೆ ಹೋಯಿತು ನಳಿನಾಕ್ಷ ಬಾಗಿಲ ಕಡೆ ಹೋದನು. ಕ್ಷಣಕಾಲ ಅನುಮಾನಿಸಿ, ನಿಧಾನವಾಗಿ ಹಿಂದಿರುಗಿ, ಕಮಲೆಯನ್ನು ನೋಡಿ "ದಯವಿಟ್ಟು ಏಳು, ನನ್ನನ್ನು ಕಂಡು ನಾಚಿಕೊಳ್ಳುವುದೇಕೆ ?" ಎಂದನು.

## ಅಧ್ಯಾಯ ೬೧

ಮಾರನೆಯ ದಿನ ಕಮಲೆ ಮಾವನ ಮನೆಗೆ ಹೋಗಿ ಶೈಲಜೆಯನ್ನು ಅಪ್ಪಿಕೊಂಡಳು.

ಶೈಲಜೆ—ಈ ದಿನವೇನಿಷ್ಟು ಸಂತೋಷ ?

ಕಮಲೆ—ತಿಳಿಯದಕ್ಕಾ. ನನ್ನ ಕಷ್ಟಗಳೆಲ್ಲಾ ಕೊನೆಗಂಡಂತಿವೆ.

ಶೈಲ—ಹೇಳು, ನಿನ್ನೆ ನಾವು ಬಂದ ಮೇಲೆ ಏನೇನು ನಡೆಯಿತು.

ಕಮಲ—ಏನೂ ಇಲ್ಲ, ಆದರೆ ಆತನು ನನ್ನವನೆಂಬ ಭಾವನೆಯುಂಟಾಗಿದೆ. ದೇವರಿಗೆ ನನ್ನ ಮೇಲೆ ದಯೆ ಬಂತು.

ಶೈಲ—ನನ್ನಿಂದ ಏನನ್ನೂ ಮುಚ್ಚಿಡಬೇಡ.

ಕಮಲ—ಮುಚ್ಚಿಡುವುದಕ್ಕೇನೂ ಇಲ್ಲ, ಹೇಗೆ ಹೇಳಬೇಕೋ ತಿಳಿಯದು. ಈ ದಿನ ಪ್ರಾತಃಕಾಲ ಜೀವನವೇ ಹೊಸದಾಗಿ ತೋರಿತು. ಉಲ್ಲಾಸವಾಗಿದ್ದಿತು. ಅದಕ್ಕಿಂತ ಏನು ಬೇಕಾಗಿದೆ? ನನ್ನ ಜೀವನವೆಲ್ಲಾ ಇಷ್ಟು ಸುಖಮಯವಾಗಿಯೇ ಇರಬಹುದೆಂಬ ನಂಬಿಕೆಯಿಲ್ಲದೆ ಹೆದರಿಕೆಯಾಗುತ್ತದೆ.

ಶೈಲ—ನನಗೂ ನಿನ್ನ ಅದೃಷ್ಟ ತಿರುಗಿತೆಂದೇ ತೋರುತ್ತದೆ. ನಿನಗೆ ಸಲ್ಲಬೇಕಾದ ಸುಖ ಬಡ್ಡಿಯ ಸಮೇತ ಸಿಕ್ಕುತ್ತದೆ.

ಕಮಲ—ಹಾಗೆ ಹೇಳಬಾರದಕ್ಕಾ. ಬಡ್ಡಿಯೆಲ್ಲಾ ಸಂದಿದೆ. ಇದಕ್ಕಿಂತ ಹೆಚ್ಚು ಅದೃಷ್ಟವೇನಿದೆ ?

ಅಷ್ಟು ಹೊತ್ತಿಗೆ ಮಾವ ಬಂದನು. ಕಮಲೆಯನ್ನು ನೋಡಿ, "ಸ್ವಲ್ಪ

ಬಾವ್ಮಾ, ರಮೇಶಬಾಬು ಬಂದಿದ್ದಾರೆ," ಎಂದನು.

ಮಾವ ರಮೇಶನೊಡನೆ ಮೊದಲೇ ಮಾತನಾಡಿದ್ದನು "ಕಮಲೆ ಯೊಡನೆ ನಿನ್ನ ಸಂಬಂಧವೇನೆಂದು ನನಗೆ ಗೊತ್ತು. ಅವಳ ಯೋಚನೆ ಯನ್ನು ಬಿಟ್ಟು ಜೀವನದಲ್ಲಿ ಹೊಸ ಮಾರ್ಗವನ್ನು ನೋಡಿಕೋ. ದೇವರು ಮಿಕ್ಕದ್ದನ್ನು ಸರಿಮಾಡುತ್ತಾನೆ," ಎಂದಿದ್ದನು.

ರಮೇಶ—ನಳಿನಾಕ್ಷನಿಗೆ ಕಥೆಯನ್ನೆಲ್ಲಾ ಹೇಳದಿದ್ದರೆ ನನಗೆ ತೃಪ್ತಿಯಿಲ್ಲ.

ಮಾವ—"ಸ್ವಲ್ಪ ತಾಳು" ಎಂದು ಹೇಳಿ ಒಳಗೆ ಬಂದಿದ್ದನು.

ರಮೇಶ ಬೇಸರದಿಂದ ಕಿಟಕಿಯ ಕಡೆ ನೋಡುತ್ತಿರಲು ಹೆಜ್ಜೆಯ ಸದ್ದಾಯಿತು. ಕಮಲೆ ನಮಸ್ಕರಿಸಿ ತಲೆಯೆತ್ತಲು, ರಮೇಶ ಆಶ್ಚರ್ಯ ದಿಂದ, "ಕಮಲಾ," ಎಂದನು ಕಮಲೆ ಮೌನದಿಂದ ನಿಂತಿದ್ದಳು.

ಮಾವ—ಕಮಲೆಯ ಕಷ್ಟವೆಲ್ಲಾ ತೀರಿತು. ಅವಳನ್ನು ದುಃಖ ದಿಂದ ಉದ್ಧರಿಸಿದ ನೀನು ಅನೇಕ ಕಷ್ಟಗಳಿಗೆ ಗುರಿಯಾದೆ. ಅದಕ್ಕಾಗಿ ವಂದಿಸಿ ನಿನ್ನ ಆಶೀರ್ವಾದ ಸ್ವೀಕರಿಸಲು ಬಂದಿದ್ದಾಳೆ.

ರಮೇಶನಿಗೆ ಮಾತನಾಡುವುದೇ ಕಷ್ಟವಾಯಿತು. "ದೇವರು ನಿನಗೆ ಒಳ್ಳೆಯದನ್ನು ಮಾಡಲಿ, ಕಮಲಾ. ತಿಳಿದೋ ತಿಳಿಯದೆಯೋ ಮಾಡಿದ ನನ್ನ ತಪ್ಪುಗಳನ್ನು ಮನ್ನಿಸು." ಕಮಲೆ ಮಾತಿಲ್ಲ.

ಸ್ವಲ್ಪ ಹೊತ್ತಾದ ಮೇಲೆ ರಮೇಶ "ಯಾರಿಗಾದರೂ ನಾನು ಏನಾ ದರೂ ಹೇಳಬೇಕೆಂದು ನಿನಗಾಸೆ ಇದ್ದರೆ ಅಪ್ಪಣೆಮಾಡು" ಎಂದನು.

ಕಮಲೆ ಕಾತರಳಾಗಿ, "ದಯವಿಟ್ಟು ಯಾರಿಗೂ ಏನನ್ನೂ ಹೇಳ ಬೇಡಿ." ಎಂದಳು.

ರಮೇಶ—ಬಹುಕಾಲ ಯಾರಿಗೂ ನಿನ್ನ ಸುದ್ದಿ ಹೇಳಲಿಲ್ಲ. ನನ್ನ ಹೃದಯ ಬೇಯುತ್ತಿದ್ದರೂ ಮೌನವಾಗಿದ್ದೆ. ನೀನು ಕಷ್ಟಗಳಿಂದ ಮುಕ್ತಳಾದೆಯೆಂದು ನಂಬಿ ಕೆಲವು ದಿನಗಳ ಕೆಳಗೆ ಕೆಲವರಿಗೆ ಮಾತ್ರ ಹೇಳಿದೆ. ಅದರಿಂದ ನಿನಗೇನೂ ತೊಂದರೆಯಾಗಲಾರದು. ಮಾವನಿಗೆ ಎಲ್ಲಾ ತಿಳಿದಹಾಗಿದೆ. ಆನಂದಬಾಬು, ಅವರ ಮಗಳು....

ಮಾವ—ಹೇಮನಳಿನಿಗೆ ಈ ಸುದ್ದಿ ತಿಳಿದಿದೆಯೆ?

ರಮೇಶ—ಹೌದು. ಮತ್ತೇನಾದರೂ ಹೇಳಬೇಕಾದರೆ ತಿಳಿಸಿ. ನನಗೇನೂ ಆಸೆಯಿಲ್ಲ ನನ್ನ ಜೀವನದ ಹೆಚ್ಚುಭಾಗ ಕಳೆದುಹೋಯಿತು. ಎಲ್ಲರ ಋಣವನ್ನೂ ಹರಿಸಿಕೊಂಡರೆ ನಾಕಾಗಿದೆ.

ಮಾವ ವಿಶ್ವಾಸದಿಂದ ಅವನ ಕೈಹಿಡಿದು, "ನೀವು ಮಾಡಬೇಕಾದ ಕೆಲಸವೇನೂ ಬಾಕಿ ಇಲ್ಲ. ಬಹಳ ಕಷ್ಟಪಟ್ಟಿದ್ದೀರಿ ಮುಂದೆಯಾದರೂ ನಿಮ್ಮ ಜೀವನ ಸುಖಮಯವಾಗಿರಲೆಂದು ಹಾರೈಸುತ್ತೇನೆ."

ರಮೇಶ ಕಮಲೆಯ ಕಡೆ ತಿರುಗಿ "ಹೋಗುತ್ತೇನೆ" ಎಂದನು

ಕಮಲೆ ಸಾತನಾಡದೆ ಬಗ್ಗಿ ನಮಸ್ಕರಿಸಿದಳು. ಸ್ವಪ್ನಾವಸ್ಥೆಯಲ್ಲಿ ರಮೇಶ ಹೊರಟನು. "ಕಮಲೆಯನ್ನು ಕಂಡುದು ಒಳ್ಳೆಯದೇ ಆಯಿತು ಆ ಅಧ್ಯಾಯ ಮುಗಿಯಿತು. ಘಾಸಿಪುರದಿಂದ ಅವಳೇಕೆ ಓಡಿಹೋದಳೋ ತಿಳಿಯದು ಆದರೆ ಒಂದು ವಿಷಯ ಖಂಡಿತವಾಯಿತು. ನಾನು ಯಾರಿಗೂ ಅಗತ್ಯವಿಲ್ಲ ಹಿಂತಿರುಗಿ ನೋಡದೆ ನನ್ನ ದಾರಿ ಹಿಡಿದು ಹೋಗಬಹುದು" ಎಂದುಕೊಂಡನು.

## ಅಧ್ಯಾಯ ೬೨

ಕಮಲೆ ಮನೆಗೆ ಹೋದಾಗ ಕ್ಷೇಮಂಕರಿಯ ಬಳಿ ಆನಂದಬಾಬು ಕುಳಿತಿದ್ದನು. ಕ್ಷೇಮಂಕರಿ ಅವಳನ್ನು ನೋಡಿ, "ಹರಿದಾಸಿ ಬಂದಳು. ನಿನ್ನ ಸ್ನೇಹಿತೆಯನ್ನು ಕೊಠಡಿಗೆ ಕರೆದುಕೊಂಡು ಹೋಗಮ್ಮಾ. ಆನಂದ ಬಾಬು ಇಲ್ಲೇ ಚಹಾ ಕುಡಿಯುತ್ತಾರೆ" ಎಂದಳು.

ಹೇಮನಳಿನಿ ಕಮಲೆಯ ಕೊಠಡಿಗೆ ಹೋಗುತ್ತಲೇ ಅವಳನ್ನಪ್ಪಿ ಕೊಂಡು "ಕಮಲಾ," ಎಂದಳು.

ಕಮಲ—ಅದು ನನ್ನ ಹೆಸರೆಂದು ಹೇಗೆ ತಿಳಿಯಿತು?

ಹೇಮ—ನಿನ್ನ ಕಥೆಯನ್ನೆಲ್ಲಾ ಯಾರೋ ಹೇಳಿದರು. ಹೇಗೆಂದು ಹೇಳಲಾರೆ. ಆದರೆ ಅದನ್ನು ಕೇಳುತ್ತಲೇ ನಿನ್ನದೇ ಕಥೆಯೆಂದು ತಿಳಿ ಯಿತು.

ಕಮಲ—ಕಳಂಕಿತವಾದ ಆ ಹೆಸರು ನನ್ನದೆಂದು ಯಾರಿಗೂ ತಿಳಿ

ಯುಬಾರದು.

ಹೇಮ—ಆದರಿಂದಲೇ ನಿನ್ನ ನಿಜವಾದ ಹಕ್ಕನ್ನು ಸ್ಥಾಪಿಸಲು ಸಾಧ್ಯ.

ಹೇಮ—ನಿನ್ನ ಗಂಡನಿಗೇಕೆ ಹೇಳಬಾರದು? ಆತನಿಂದ ಯಾವು ದನ್ನೂ ಮರೆಮಾಚಬಾರದು.

ಕಮಲೆಗೆ ಉತ್ತರ ತೋರಲಿಲ್ಲ. ಜಿಪರು ಕಿತ್ತುಕೊಳ್ಳಲು ಆಯಾಸದಿಂದ ಹಾಸಿಗೆಯ ಮೇಲೆ ಕುಳಿತಳು

ಕಮಲ—"ತಪ್ಪು ಮಾಡಿದ್ದರೂ ನನಗೇಕಿಷ್ಟು ನಾಚಿಕೆಯೋ ತಿಳಿಯದು. ನಿರಪರಾಧಿನಿಯಾದ ನನಗೇಕೆ ಶಿಕ್ಷೆಯಾಗಬೇಕು? ಆತನಿಗೆ ನನ್ನ ಕಥೆ ಹೇಳುವುದು ಹೇಗೆ?" ಹೇಮನಳಿನಿ ಅವಳ ಕೈ ಹಿಡಿದುಕೊಂಡು, "ಶಿಕ್ಷೆಯಲ್ಲ. ವಿಮೋಚನೆ. ಮೋಸದ ಬಲೆಯಲ್ಲಿ ಸಿಕ್ಕಿಬಿದ್ದಿದ್ದೀಯೆ ನಿನ್ನ ಗಂಡನಿಗೆ ಎಲ್ಲಾ ತಿಳಿಸುವವರೆಗೂ ನಿನಗೆ ಬಿಡುಗಡೆಯಿಲ್ಲ. ನಿನ್ನ ಇಚ್ಛೆಯೇನು? ಬೇರೆ ಯಾರಾದರೂ ಆತನಿಗೆ ತಿಳಿಸಬಹುದೇನು?"

ಕಮಲೆ ತಲೆಯಾಡಿಸಿ, "ಬೇಡ ಬೇಡ. ಬೇರೆ ಯಾರಿಂದಲೂ ಆತನು ಆ ಕಥೆಯನ್ನು ತಿಳಿಯಕೂಡದು. ನನಗೆ ಹೇಳುವ ಶಕ್ತಿಯಿದೆ."

ಹೇಮ—ಆದೇ ಒಳ್ಳೆಯದು ಪುನಃ ನಿನ್ನನ್ನು ನೋಡುವೆನೋ ಇಲ್ಲವೋ. ನಾವು ಹೋಗುತ್ತೇವೆ.

ಕಮಲ—ಎಲ್ಲಿಗೆ?

ಹೇಮ—"ಕಲ್ಕತ್ತೆಗೆ. ನಿನಗೆ ಕೆಲಸವಿದೆ ಹೊರಡು. ಸಹೋದರಿ ಯನ್ನು ಮರೆಯಬೇಡ." ಕಮಲೆ ಅವಳ ಕೈಗಳನ್ನು ಹಿಡಿದು, "ನನಗೆ ಕಾಗದಗಳನ್ನು ಬರೆಯುತ್ತೀರಲ್ಲವೆ?" ಎಂದಳು.

ಹೇಮನಳಿನಿ ಒಪ್ಪಿದಳು.

ಕಮಲ—ನಿಮ್ಮ ಕಾಗದಗಳು ನನಗೆ ಆತ್ಮವಿಶ್ವಾಸ ಕೊಡುತ್ತವೆ ನನಗೆ ಆಗಾಗ ಬುದ್ಧಿ ಹೇಳಬೇಕು.

ಹೇಮನಳಿನಿ ನಕ್ಕು, "ನನಗಿಂತ ಒಳ್ಳೆ ಹಿತೈಷಿ ನಿನಗೆ ದೊರಕು ವನು," ಎಂದಳು. ಕಮಲೆಗೆ ಹೇಮನಳಿನಿಯನ್ನು ಕಂಡು ದುಃಖ ವಾಯಿತು. ಹೊರಗಡೆ ಶಾಂತಳಾಗಿ ಕಾಣಿಸಿದರೂ ದುಃಖದಿಂದ ಕುದಿ

ಯುತ್ತಿರುವಂತೆ ತೋರಿತು. ಆದರೆ ಅವಳ ಗಾಂಭೀರ್ಯ ಪ್ರಶ್ನೆಗಳನ್ನು ತಡೆಯಿತು. ಕಮಲೆ ತನ್ನ ದುಃಖವನ್ನೆಲ್ಲಾ ತೋಡಿಕೊಂಡಿದ್ದಳು. ಹೇಮನಳಿನಿ ತನ್ನ ಸಂಕಟವನ್ನು ಹೊರಗೆಡಹದೆ ಹೊರಟು ಹೋದಳು.

ಆದಿನ ಬಿಡುವಾದಾಗಲೆಲ್ಲಾ ಹೇಮನಳಿನಿಯ ಮಾತುಗಳೂ ಅವಳ ಶಾಂತವಾದ ನೋಟವೂ ಕಮಲೆಯ ನೆನಪಿಗೆ ಬರುತ್ತಿದ್ದುವು. ಅವಳಿಗೆ ಹೇಮನಳಿನಿಯ ಕಥೆ ತಿಳಿಯದು. ನಳಿನಾಕ್ಷನೊಡನೆ ನಿಶ್ಚಿತನಾಗಿದ್ದ ಮದುವೆ ನಿಂತುದು ಮಾತ್ರ ತಿಳಿದಿದ್ದಿತು

ಮಧ್ಯಾಹ್ನ ಹೇಮನಳಿನಿ ಕೊಟ್ಟು ಹೋಗಿದ್ದ ಹೂಗಳನ್ನು ಕಟ್ಟುತ್ತಾ ಕಮಲೆ ಕುಳಿತಿದ್ದಳು. ಕ್ಷೇಮಂಕರಿಯೂ ಅಲ್ಲಿಯೇ ಇದ್ದಳು.

ಕ್ಷೇಮ—"ಹೇಮನಳಿನಿ ಹೊರಟು ಹೋದಳು. ಅವಳು ನಿಜವಾಗಿ ಒಳ್ಳೆ ಹುಡುಗಿ. ನನ್ನ ಸೊಸೆಯಾಗಿದ್ದರೆ ಚನ್ನಾಗಿತ್ತು. ನನ್ನ ಮಗನ ಸಮಾಚಾರ ಅರ್ಥವೇ ಆಗುವುದಿಲ್ಲ. ಮನಸ್ಸೇಕೆ ಬದಲಾಯಿಸಿದನೋ ತಿಳಿಯದು." ಈಚೆಗೆ ಆ ಮದುವೆ ತನಗೇ ಇಷ್ಟವಿರಲಿಲ್ಲವೆಂದು ಆಕೆ ಒಪ್ಪಿಕೊಳ್ಳಲಿಲ್ಲ. ಹೆಜ್ಜೆಯ ಸದ್ದನ್ನು ಕೇಳಿ, "ಯಾರು, ನಳಿನನೇ?" ಎಂದಳು. ಕಮಲೆ ಹೂಗಳನ್ನು ಸೆರಗಿನಿಂದ ಮುಚ್ಚಿ ಮುಖದ ಮೇಲೆ ಪರದೆ ಎಳೆದುಕೊಂಡಳು.

ನಳಿನಾಕ್ಷ ಬರಲು ಕ್ಷೇಮಂಕರಿ, "ಹೇಮ, ಅವಳ ತಂದೆ ಬಂದಿದ್ದರು. ನೋಡಿದೆಯಾ?" ಎಂದಳು.

"ಹೌದು. ಮನೆಯವರೆಗೂ ಹೋಗಿ ಬಿಟ್ಟುಬಂದೆ."

ಕ್ಷೇಮ—"ನೀನೇನಾದರೂ ಹೇಳು. ಹೇಮಳಂತಹ ಹುಡುಗಿ ಸಿಕ್ಕುವುದು ಕಷ್ಟ." ನಳಿನಾಕ್ಷ ಬದಲಾಡದೆ ನಕ್ಕನು.

ಕ್ಷೇಮ—ನಗುತ್ತೀ. ಹೇಮಳಿಗೆ ಆಶೀರ್ವಾದ ಕೂಡ ಮಾಡಿ ಬಂದೆ. ನೀನು ಬೇಡವೆಂದು ಬಿಟ್ಟ."

ನಳಿನಾಕ್ಷ ಕಮಲೆಯ ಕಡೆ ನೋಡಿದಾಗ ಅವಳೂ ನೋಡುತ್ತಿದ್ದಳು. ನೋಟಗಳು ಸಂಧಿಸಲು ನಾಚಿಕೆಯಿಂದ ತಲೆತಗ್ಗಿಸಿದಳು

ನಳಿನ—ನಿನ್ನ ಮಗನ ಸಮಾನವಿಲ್ಲವೆಂದೂ, ಅವನಿಗೆ ಮದುವೆ

ಗೊತ್ತುಮಾಡುವುದು ಬಹು ಸುಲಭವೆಂದೂ ನೀನು ತಿಳಿದಿರುವೆ. ನನ್ನಂತಹ ಸನ್ಯಾಸಿಯನ್ನು ಮೆಚ್ಚುವವರು ಯಾರು?

ಕಮಲೆ ತಲೆಯೆತ್ತಿದಳು. ನಳಿನಾಕ್ಷ ಹಾಸ್ಯದೃಷ್ಟಿಯಿಂದ ಅವಳನ್ನು ನೋಡಿದನು.

ಕ್ಷೇಮ—ನಾಕು, ಸುಮ್ಮನಿರಪ್ಪಾ ನನಗೆ ಕೋಪ ಬರುತ್ತೆ.

ಇಬ್ಬರೂ ಹೋದಮೇಲೆ ಕಮಲೆಯೊಬ್ಬಳೇ ಹೂವನ್ನೆಲ್ಲಾ ದೊಡ್ಡ ಹಾರವಾಗಿ ಕಟ್ಟಿದಳು. ಬುಟ್ಟಿಯಲ್ಲಿಟ್ಟು ನೀರು ಚಿಮುಕಿಸಿ ನಳಿನಾಕ್ಷನ ಕೊಠಡಿಯಲ್ಲಿಟ್ಟಳು ಹೂವನ್ನು ಕೊಟ್ಟ ಹೇಮನಳಿನಿ ಹೊರಟೇ ಹೋದಳೆಂದು ನೆನೆದು ಅವಳ ಕಣ್ಣಲ್ಲಿ ನೀರಾಡಿತು.

ತನ್ನ ಕೊಠಡಿಗೆ ಹಿಂದಿರುಗಿ ಚಿಂತಿಸುತ್ತಾ ಕುಳಿತಳು ನಳಿನಾಕ್ಷನಿಗೆ ತನ್ನ ವಿಚಾರದಲ್ಲಿ ಅಭಿಪ್ರಾಯವೇನು? ಆತನ ನೋಟದ ಅರ್ಥವೇನು? ತನ್ನ ರಹಸ್ಯವನ್ನೆಲ್ಲಾ ತಿಳಿದಿದ್ದನೆ? ಆತನಿಂದ ಮರೆಯಾಗಿದ್ದಾಗಲೇ ಚನ್ನಾಗಿತ್ತು. ಈಗ ಸದಾ ಬಿಕ್ಕಟ್ಟಿನಲ್ಲಿ ಸಿಕ್ಕಿ ತನ್ನ ಮೋಸಕ್ಕೆ ಶಿಕ್ಷೆಯನ್ನನುಭವಿಸುತ್ತಿದ್ದಳು. "ಈ ಹರಿದಾಸಿಯನ್ನು ಅಮ್ಮ ಎಲ್ಲಿಂದ ತಂದಳು ಅವಳಿಗೆ ನಾಚಿಕೆಯೇ ಇಲ್ಲ," ಎಂದು ಆತನೆಂದುಕೊಳ್ಳಬಹುದು. ಹೀಗೆ ಚಿಂತಿಸಿ, ಏನೇ ಆಗಲಿ ತನ್ನ ಪರಿಚಯವನ್ನು ಮಾರನೆಯ ದಿನ ತಿಳಿಸಿಬಿಡಬೇಕೆಂದು ನಿರ್ಧರಿಸಿ ಮಲಗಿದಳು.

ಬೆಳಗ್ಗೆ ಬೇಗ ಎದ್ದು ಸ್ನಾನಮಾಡಿ ಗಂಗೆಯಿಂದ ನೀರು ತಂದಳು. ನಳಿನಾಕ್ಷನ ಕೂಠಡಿಯನ್ನು ಗುಡಿಸಲು ಹೋದಾಗ ಆತನು ಅಲ್ಲಿಯೇ ಇದ್ದನು. ನಿಧಾನವಾಗಿ ಹಿಂದಿರುಗುತ್ತಾ, ಏನೋ ಆಲೋಚನೆ ಹೊಳೆದು ನಿಂತಳು. ಹಿಂದಿರುಗಿ ಕೋಣೆಯ ಬಾಗಿಲಿಗೆ ಬಂದಳು. ತಲೆ ಸುತ್ತಿದಂತಾಗಿ ಮೈಮೇಲೆ ಅರಿವೇ ಇಲ್ಲದಂತಾಗಿದ್ದಳು.

ನಳಿನಾಕ್ಷ ಎದ್ದು ಬಂದು ಎದುರಿಗೆ ನಿಂತನು. ಕಮಲೆ ಮೊಣಕಾಲೂರಿ ಬಗ್ಗಿ ಆತನ ಪಾದಗಳ ಮೇಲೆ ಹಣೆಯನ್ನಿಟ್ಟಳು ಒದ್ದೆಯಾಗಿದ್ದ ಅವಳ ಕೂದಲು ಆ ಪಾದಗಳನ್ನು ಮುಚ್ಚಿದುವು. ಎದ್ದು ಕಂಭದಂತೆ ನಿಂತಳು ತನ್ನ ಮುಖಪರದೆ ಸಡಿಲಿತ್ತೆಂದಾಗಲಿ, ತನ್ನನ್ನು ನಳಿನಾಕ್ಷ ಎವೆಯಿಕ್ಕದೆ ನೋಡುತ್ತಿದ್ದನೆಂದಾಗಲಿ ಅವಳು ತಿಳಿಯಲಿಲ್ಲ. "ನಾನು

ಕಮಲ" ಎಂದಳು.

ಮಾತನಾಡುತ್ತಲೇ ಅವಳಿಗೆ ಗಾಬರಿಯಾಯಿತು. ಕೈಕಾಲ ನಡುಗಲಾರಂಭಿಸಿದವು. ಆ ಎರಡು ಮಾತುಗಳು ಅವಳ ಶಕ್ತಿಯನ್ನೆಲ್ಲಾ ಹೀರಿಬಿಟ್ಟಿದ್ದುವು. ಸಂಪೂರ್ಣವಾಗಿ ನಳಿನಾಕ್ಷನ ಮರೆಹೊಕ್ಕಿದ್ದಳು.

ನಿಧಾನವಾಗಿ ಅವಳ ಕೈಗಳನ್ನು ತುಟಿಗೊತ್ತಿಕೊಂಡು ಆತನು "ನನಗೆ ಗೊತ್ತು. ನೀನು ನನ್ನ ಕಮಲ. ಒಳಗೆ ಬಾ";—ಅವಳನ್ನು ಒಳಕ್ಕ ಸೆಳೆದುಕೊಂಡು ಅವಳೇ ಕಟ್ಟಿಟ್ಟಿದ್ದ ಹಾರವನ್ನು ಅವಳ ಕೊರಳಿಗೆ ಹಾಕಿದನು. ಆಗತಾನೆ ಉದಯಿಸುತ್ತಿದ್ದ ಸೂರ್ಯನಿಗೆ ಇಬ್ಬರೂ ತಲೆ ಬಾಗಿ ವಂದಿಸಿದರು

ಎದ್ದು ಕಮಲೆ ಪುನಃ ನಳಿನಾಕ್ಷನಿಗೆ ಭಕ್ತಿಯಿಂದ ನಮಸ್ಕರಿಸಿದಳು. ಅವಳ ನಾಚಿಕೆಯೆಲ್ಲಾ ಮಾಯವಾಗಿತ್ತು. ಶಾಂತಿ ತುಂಬಿ, ಭಕ್ತಿಯಿಂದ ಅವಳ ಹೃದಯ ನಾಟ್ಯವಾಡುತ್ತಿತ್ತು.

ಇದ್ದಕ್ಕಿದ್ದಂತೆ ಕಣ್ಣುಗಳಲ್ಲಿ ನೀರು ತುಂಬಿ ಉರುಳಲಾರಂಭಿಸಿತು. ಆ ಆನಂದಾಶ್ರುಗಳು ಅವಳ ದುಃಖವನ್ನೆಲ್ಲಾ ತೊಳೆದುವು.

ನಳಿನಾಕ್ಷ ಮಾತನಾಡದೆ ಅವಳ ಮುಖವನ್ನು ಮುಚ್ಚಿದ್ದ ಕೂದಲನ್ನು ಹಿಂದಕ್ಕೆ ಸರಿಸಿ ಕೋಣೆಯಿಂದ ಹೊರಗೆ ಹೋದನು

ಕಮಲೆ ನಳಿನಾಕ್ಷನ ಕೊಠಡಿಯಲ್ಲಿದ್ದ ಪಾದುಕೆಗಳಿಗೆ ಹಾರವನ್ನು ಹಾಕಿ ಹಣೆಗೆ ಒತ್ತಿಕೊಂಡು ಭಕ್ತಿಯಿಂದ ಕೆಳಗಿಟ್ಟಳು.

ದೇವಪೂಜೆ ಮಾಡುತ್ತಿರುವಂತೆ ಆನಂದದಿಂದ ಮನೆಗೆಲಸಗಳನ್ನು ಮಾಡಲಾರಂಭಿಸಿದಳು

ಕ್ಷೇಮಂಕರಿ—ಏನು ಮಾಡುತ್ತಿರುವೆಯಮ್ಮಾ? ಒಂದೇ ದಿನ ಮನೆಯನ್ನೆಲ್ಲಾ ತೊಳೆಯುವೆಯಾ?

ಮನೆಗೆಲಸವನ್ನು ಮುಗಿಸಿ ಕಮಲೆ ತನ್ನ ಕೋಣೆಗೆ ಹೋದಳು. ನಳಿನಾಕ್ಷ ಬುಟ್ಟಿಯ ತುಂಬ ಹೂಗಳನ್ನು ತೆಗೆದುಕೊಂಡು ಅಲ್ಲಿಗೆ ಹೋದನು. "ಕಮಲ, ಇವುಗಳನ್ನು ಒದ್ದೆಬಟ್ಟೆಯಲ್ಲಿಡು. ಸಾಯಂಕಾಲ ಇಬ್ಬರೂ ಅಮ್ಮನ ಆಶೀರ್ವಾದ ಪಡೆಯೋಣ."

ಕಮಲೆ ತಲೆತಗ್ಗಿಸಿಕೊಂಡು, "ನನ್ನ ಕಥೆಯನ್ನೆಲ್ಲಾ ನೀವು

ಕೇಳಿಲ್ಲ," ಎಂದಳು

ನಳಿನಾಕ್ಷ—ನನಗೆಲ್ಲಾ ತಿಳಿದಿದೆ. ನೀನೇನೂ ಹೇಳಬೇಕಾಗಿಲ್ಲ.

ಮುಖಪರದೆಯನ್ನೆಳೆದುಕೊಂಡು ಕಮಲ "ಆದರೆ, ಅಮ್ಮ...." ಎಂದು ಪ್ರಾರಂಭಿಸಿ ಮುಂದುವರಿಸಲಾರದೆ ಹೋದಳು.

ನಳಿನಾಕ್ಷ ಪರದೆಯನ್ನೋಸರಿಸಿ, "ಅಮ್ಮ ಎಷ್ಟೋ ಪಾಪಗಳನ್ನು ಕ್ಷಮಿಸಿದ್ದಾಳೆ ಪಾಪವನ್ನೇ ಅರಿಯದ ನಿನ್ನನ್ನು ಕ್ಷಮಿಸಲಾರಳೆ?" ಎಂದನು.

---

# ಮರುಮದುವೆ

## ಹೆಚ್. ವಿ. ಸಾವಿತ್ರಮ್ಮ

ಇದು ಶ್ರೀಮತಿ ಸಾವಿತ್ರಮ್ಮನವರ ಎರಡನೆಯ ಗ್ರಂಥ. ಅವರ ಮೊದಲ ನೆಯ ಕೃತಿಯಾದ "ಸಿರಾತ್ರಿತೆ" ಯನ್ನು ಹಲವರು ಹೆಸರಾಂತ ಹಿರಿಯಸಾಹಿತಿ ಗಳು ಓದಿ ಅದರ ವಿಷಯದಲ್ಲಿ ಆದರದ ಮಾತುಗಳನ್ನು ಆಡಿದ್ದಾರೆ.

ಸಾವಿತ್ರಮ್ಮನವರು ಉತ್ತಮ ಕತೆಗಾರ್ತಿಯರು. ಕತೆ ಹೆಣೆಯುವುದರಲ್ಲಿ ಅವರ ಕೈ ಚೆನ್ನಾಗಿ ಪಳಗಿದೆ. ನೇರವಾಗಿ, ನಿರಾಡಂಬರವಾದ ಕನ್ನಡದಲ್ಲಿ ಸರಾಗವಾಗಿ ಕತೆ ಹೇಳುವ ಶಕ್ತಿ ಅವರಿಗಿದೆ. ಅವರ ಕತೆಗಾರಿಕೆಯಲ್ಲಿ ನವೀನತೆ ಯಿದೆ, ಸರಳತೆಯಿದೆ, ಸಹಜತೆಯಿದೆ. ಮಾನವಹೃದಯದ ಸಮಸ್ಯೆಗಳನ್ನವರು ಚೆನ್ನಾಗಿ ಗ್ರಹಿಸಬಲ್ಲರು. ಆದ್ದರಿಂದಲೆ ಅವರು ಚಿತ್ರಿಸುವ ವ್ಯಕ್ತಿಗಳು ನಮ್ಮ ಕಣ್ಣಮುಂದೆ ಸ್ಫುಟವಾಗಿ ನಿಲ್ಲುತ್ತಾರೆ. ಅವರು ಬಳಸುವ ಭಾಷೆ ಸರಳವಾದದ್ದು, ಚಿಕ್ಕ ಮಕ್ಕಳಿಗೂ ಅರ್ಥವಾಗುವಷ್ಟು ಸುಲಭವಾದದ್ದು. ಅವರು ಉಪಯೋಗಿ ಸುವ ಮಾತುಗಳು ಸಾಮಾನ್ಯವಾಗಿ ನಮ್ಮ ಮನೆಗಳಲ್ಲಿ ಬಳಕೆಯಲ್ಲಿರತಕ್ಕವು.

ಕಥೆ ಕಾದಂಬರಿಗಳಲ್ಲಿ ವಿರಸ ಶೃಂಗಾರವನ್ನು ಚಿತ್ರಿಸುವುದು ಈಗಿನ ಲೇಖಕರಿಗೆ ಸರ್ವಸಾಮಾನ್ಯವಾದ ಹವ್ಯಾಸ ಶ್ರೀಮತಿಯವರೂ ಹೊಂದಿಗ ಪ್ರಣಯದ ಸನ್ನಿವೇಶಗಳನ್ನು ಚಿತ್ರಿಸಿರುತ್ತಾರೆ. ಆದರೆ ಅವುಗಳನ್ನು ಚಿತ್ರಿಸು ವುದರಲ್ಲಿ ರಂಗುರಂಗಾಗಿ ಬಣ್ಣವನ್ನೆರಚುವ ಚಾಪಲ್ಯ ಅವರಿಗಿಲ್ಲ. ಎಲ್ಲಿಯೂ ಆರ್ಭಟವಿಲ್ಲ, ರಂಪಾಟವಿಲ್ಲ, ಅಸಭ್ಯವಿಲ್ಲ ವಿಷಮ ಸನ್ನಿವೇಶಗಳಲ್ಲಿಯೂ ಇವರ ಪಾತ್ರಗಳು ಅಪೂರ್ವವಾದ ಸಂಸ್ಕಾರವನ್ನು ಪ್ರದರ್ಶಿಸುತ್ತವೆ. ಶ್ರೀಮತಿಯವರು ದೊಡ್ಡಮನೆತನಕ್ಕೆ ಸೇರಿದವರು. ವಂಶ ವಿದ್ಯೆಗಳ ಮಿಳನದಿಂದುಂಟಾದ ನಯ ವನ್ನೂ ಸಂಯಮವನ್ನೂ ಸೂಕ್ಷ್ಮತೆಯನ್ನೂ ಸಂಸ್ಕಾರವನ್ನೂ ಇವರ ಕೃತಿಗಳಲ್ಲಿ ಕಾಣಬಹುದು

ಪುಟಗಳು ೨೨೨, ಬೆಲೆ ರೂ. ೧-೪-೦

ಕಾವ್ಯಾಲಯದ ೨ ನೆಯ ಕೈ ಹೊತ್ತಗೆ

**ಮೂಲಾನಕ್ಷತ್ರ : ಶೇಷನಾರಾಯಣ**

ಬೆಲೆ ರೂ. ೧-೪-೦

---

ಕಾವ್ಯಾಲಯ : : ಪ್ರಕಾಶಕರು : : ಮೈಸೂರು